# ಸಂಪ್ರದಾನ

(ನಾಲ್ಕು ನೀಳ್ಗತೆಗಳ ಸಂಕಲನ)

ಪದ್ಮಾ ಶ್ರೀಧರ್

ಮಂಜುಶ್ರೀ ಪ್ರಕಾಶನ
೧೬ ಮೆಯಿನ್, ಕುವೆಂಪು ಶಾಲೆ ಹಿಂಭಾಗ, ಕಾ. ಆಸ್ಪತ್ರೆ ರಸ್ತೆ
ಸರಸ್ವತಿಪುರಂ, ಮೈಸೂರು ೫೭೦೦೦೯

SAMPRADAANA- A collection four stories by Smt Padma Sreedhar, 1246, 'Chiguru', 7th B Cross, New Town, Yalahanka, Bangalore- 560 057
and published by Manjushree Prakashana, 16th Main, Behind Kuvempu High School, Kamakshi Hospital Road, Saraswathipuram, Mysore 570009.

Printed on Maplitho 70 GSM paper.
No.of Pages: 240+4=244, Demi 1/8.

Year of first publication: 2014.



Price: Rs. 160/-

DTP: Smt. Asha Nayak, Mysore.

Printed at :
**Udayaravi Offset Printers**
K.M. Puram, Mysore - 570 004
Mob. : 9448382971

# ಮುನ್ನುಡಿ

ಓದುಗರೇ, **'ಸಂಪ್ರದಾನ'** ಈ ನೀಳ್ಗತೆಗಳ ಸಂಕಲನದಲ್ಲಿ ಒಟ್ಟು ನಾಲ್ಕು ಕತೆಗಳಿವೆ. ವಿಭಿನ್ನ ವಸ್ತುಗಳನ್ನು ಆಯ್ದುಕೊಂಡು, ಕಲ್ಪನೆಯಲ್ಲಿ ಕರಗಿಸಿ, ಕೃತಿಯನ್ನಾಗಿ ರಚಿತಗೊಂಡ ಕತೆಗಳು ಇವು. ಕೌಟುಂಬಿಕ ಪಾತ್ರಗಳು, ಸನ್ನಿವೇಶಗಳು ಕತೆಗಳಿಗೆ ರೂಪವನ್ನು ಕೊಟ್ಟಿವೆ. – **'ಡೈಮಂಡ್ ಸಕ್ಕರ'** ಯ ಆಭರಣಗಳು, **'ಸಂಪ್ರದಾನದ'** ದಾನಗಳು, **'ಹೃದಯ ಹಾಡಿದ ಹೊಸಗೀತ'** ಯ ಸಂಗಾತಿಗಳು, **'ಆದದ್ದೆಲ್ಲಾ ಒಳ್ಳೆಯದಕ್ಕೇ'** ಕತೆಯ ನೆನಪುಗಳು, ಮುಖ್ಯ ಅಂಶಗಳು. ಈ ನಿಟ್ಟಿನಲ್ಲಿ ಬರೆದ ಈ ನೀಳ್ಗತೆಗಳು ಓದುಗರನ್ನು ರಂಜಿಸುತ್ತವೆ ಎಂದು ನಂಬುತ್ತೇನೆ.

ಈ ನೀಳ್ಗತೆಗಳ ಸಂಕಲನವನ್ನು ನನ್ನ ಸೋದರಿಯರಿಗೆ ಅರ್ಪಣೆ ಮಾಡುತ್ತಿದ್ದೇನೆ. ವಂದನೆಗಳು.

**– ಪದ್ಮಾ ಶ್ರೀಧರ್**

ನನ್ನ
ಸೋದರಿಯರಿಗೆ
ಅರ್ಪಣೆ

## ಕಥೆಗಳು



* * *

# ಸಂಪ್ರದಾನ

ಶೇಷಮ್ಮನವರ ವೈಕುಂಠ ಸಮಾರಾಧನೆಯ ಕಾರ್ಯವು ಯಾವ ಲೋಪದೋಷಗಳಿಲ್ಲದೇ ನಿರ್ವಿಘ್ನವಾಗಿ ನೆರವೇರಿತ್ತು. ಬಂಧು ಮಿತ್ರರುಗಳು ಸಕುಟುಂಬ ಸಮೇತರಾಗಿ ಬಂದು, ಆಕೆಯ ಆತ್ಮಕ್ಕೆ ಶಾಂತಿಯನ್ನು ಕೋರಿದ್ದರು. ಶ್ರದ್ಧೆ ಭಕ್ತಿಗಳಿಂದ ಆಕೆಯ ಕರ್ಮಗಳನ್ನು ನೆರವೇರಿಸಿದ್ದ ಗಂಡು ಮಕ್ಕಳನ್ನು ಶ್ಲಾಘಿಸಿ, ಸಾಂತ್ವನದ ನುಡಿಗಳನ್ನಾಡಿ, ತಮ್ಮ ತಮ್ಮ ಸಂತಾಪವನ್ನು ವ್ಯಕ್ತ ಪಡಿಸಿದ್ದರು. ಬ್ರಾಹ್ಮಣರು ಭೋಜನಾನಂತರ, ಯಥೋಚಿತ ದಾನ ದಕ್ಷಿಣೆಗಳನ್ನು ಸ್ವೀಕರಿಸಿದರು. ವೇದ ಪಠನವನ್ನು ಮಾಡಿ, ಆಕೆಯ ಕುಟುಂಬದವನ್ನು ಆಶೀರ್ವದಿಸಿದರು.

ಮೃತರ ಶರೀರದಿಂದ ಬೇರ್ಪಟ್ಟ ಆತ್ಮವು ಹೇಗೆ ಸದ್ಗತಿಯನ್ನು ಪಡೆಯುತ್ತದೆ ಎನ್ನುವುದನ್ನು ಸವಿಸ್ತಾರವಾಗಿ ವರ್ಣಿಸಿದರು. ಪಿತೃಗಳಿಗೆ ಮಕ್ಕಳು ಸದ್ಗತಿಯನ್ನು ಪಡೆಯಲು ಸಹಾಯಕರಾಗುವ ಬಗೆಯನ್ನು ತಿಳಿಸಿದರು. ನೀವುಗಳು ಮಾಡಿದ ದಾನ, ಧರ್ಮ, ಪುಣ್ಯ ಕಾರ್ಯಗಳೆಲ್ಲವೂ ನಿಮ್ಮ ಪಿತೃಗಳಿಗೆ ಸಂತೃಪ್ತಿಯನ್ನು ನೀಡಿರುತ್ತದೆ. ಈ ಒಂದು ವರ್ಷದೊಳಗೆ ನೀವು ಮಾಡುವ ಪ್ರತಿಯೊಂದು ಕಾರ್ಯವೂ ಅವರುಗಳ ಪ್ರೀತ್ಯರ್ಥವಾಗಿರುತ್ತದೆ. ನಿಮ್ಮಂಥ ಸತ್ಪುತ್ರರನ್ನು ಪಡೆದ ಶೇಷಮ್ಮನವರು, ನಿಜಕ್ಕೂ ಅದೃಷ್ಟವಂತರು. ಪುರೋಹಿತರು, ಮಕ್ಕಳನ್ನು ಹೊಗಳಿದರು. ಎಲ್ಲರೂ ಮೌನದಿಂದ ಅವರ ಮಾತುಗಳನ್ನು ಆಲಿಸುತ್ತಿದ್ದರು. ಗಂಡುಮಕ್ಕಳು ತಲೆತಗ್ಗಿಸಿ ಕುಳಿತಿದ್ದರು. ಸೊಸೆಯಂದಿರು, ಪರಸ್ಪರ ಮುಖ ಮುಖ ನೋಡಿಕೊಂಡರು. ಪುರೋಹಿತರು ಮುಂದು ವರೆಸಿದರು.

ನೀವುಗಳು ಮಾಡಬಹುದಾದ ದಾನಗಳಲ್ಲಿ ಅನೇಕ ಬಗೆಗಳಿವೆ. ಅನ್ನದಾನ, ವಸ್ತ್ರದಾನ, ಸುವರ್ಣದಾನ, ಗೋದಾನ, ಭೂದಾನ ಹೀಗೇ. ಎಲ್ಲಕ್ಕಿಂತ ಮಿಗಿಲಾದುದು ಕನ್ಯಾದಾನ. ನಿಮ್ಮ ಮನೆಯಲ್ಲಿ ಮದುವೆಗೆ ನಡೆದಿರುವ ಕನ್ಯೆಗೆ ಮದುವೆ ಮಾಡಬಹುದು. ಆ ಪುಣ್ಯವು ನಿಮ್ಮ ಮಾತೋಶ್ರೀಯವರಿಗೆ ಸಂದಾಯವಾಗುತ್ತದೆ. ಈ ಕಾಲದಲ್ಲಿ ನೀವುಗಳು ಹೆಚ್ಚು ಹೆಚ್ಚು ಸಂಪಾದಿಸುತ್ತೀರಿ. ಸಂಪಾದನೆಯ ಅರ್ಧಕ್ಕಿಂತ ಹೆಚ್ಚಿನ ಭಾಗವನ್ನು ನಿಮ್ಮ ಮಕ್ಕಳ ವಿದ್ಯಾಭ್ಯಾಸಕ್ಕಾಗಿ

ಅವರ ಅಭಿವೃದ್ಧಿಗಾಗಿ ಖರ್ಚು ಮಾಡುತ್ತೀರಿ. ಊಟ ತಿಂಡಿ, ಬಟ್ಟೆಬರೆ, ನೋಟ ನಡಿಗೆ ಇತ್ಯಾದಿಗಳಿಗಾಗಿ ವ್ಯಯ ಮಾಡುತ್ತೀರಿ. ಇನ್ನು ಮುಂದೆ, ಸಂಪಾದನೆಯ ಹಣದ ಒಂದು ಪಾಲನ್ನು ನಿಮ್ಮ ಪಿತೃಗಳ ಕಾರ್ಯಗಳಿಗಾಗಿ ಖರ್ಚುಮಾಡಿ. ಇದರಿಂದ ಪಿತೃಗಳಿಗೆ ಸದ್ಗತಿ ಸಿಗುತ್ತದೆ. ನಿಮ್ಮಗಳ ಅಭಿವೃದ್ಧಿ ಯಾಗುತ್ತದೆ. ಅವರುಗಳ ಆಶೀರ್ವಚನ ಸದಾ ನಿಮ್ಮ ಮೇಲಿರುತ್ತದೆ. ಅವರುಗಳ ಹೆಸರಿನಲ್ಲಿ ಅನ್ನದಾನಾದಿಗಳನ್ನು ಮಾಡಿ. ಶ್ರದ್ಧಾ ಭಕ್ತಿಗಳಿಂದ, ನಿಮ್ಮ ಕರ್ತವ್ಯವನ್ನು ಪರಿಪಾಲಿಸುವುದರಿಂದ, ನಿಮ್ಮ ಶ್ರೇಯೋವೃದ್ಧಿಯಾಗುತ್ತದೆ. ಪುರೋಹಿತರ ಹಿತವಚನ ಮುಂದುವರೆದಿತ್ತು.

ಅನಂತನ ಕಣ್ಣುಗಳು ತುಂಬಿ ಬಂದವು. ಗಂಟಲು ಕಟ್ಟಿತ್ತು. ತಾಯಿಯ ನೆನಪು ಉಮ್ಮಳಿಸಿಕೊಂಡು ಬಂದಿತ್ತು. ಅನಂತ, ಶೇಷಮ್ಮನವರ ಚೊಚ್ಚಲ ಮಗ. ಆಕೆ ತನ್ನ ಹದಿನಾರನೆಯ ವಯಸ್ಸಿನವಳಾಗಿದ್ದಾಗ, ಅನಂತನ ಜನ್ಮವಾಗಿತ್ತು. ಅನಂತನನ್ನು ಬಹಳ ಅಕ್ಕರೆಯಿಂದ ಸಾಕಿದ್ದಳು. ಬೆಳೆದು ದೊಡ್ಡವನಾದ ಮೇಲೆ ತನ್ನ ತಾಯಿ ಕೇವಲ ತನಗಿಂತ ಹದಿನಾರು ವರ್ಷ ಹಿರಿಯವಳು ಅಂತ ತಿಳಿದಾಗ, ಬಹಳ ಸಂಕೋಚಗೊಂಡಿದ್ದ. ತನಗಾಗಿ ತನ್ನ ತಾಯಿ ಎಷ್ಟು ಕಷ್ಟ ಅನುಭವಿಸಿರಬಹುದು. ಅಂತ ಚಿಂತಿಸುವಾಗ ವ್ಯಥೆ ಗೊಳ್ಳುತ್ತಿದ್ದ.

ತನ್ನನ್ನು ಬೆಳೆಸಿ ದೊಡ್ಡವನನ್ನಾಗಿ ಮಾಡಿದ ತಾಯಿಗೆ ಏನನ್ನಾದರೂ ಮಾಡಲೇ ಬೇಕೆಂದುಕೊಳ್ಳುತ್ತಿದ್ದ. ಬಿ.ಎ.ಬಿ.ಎಡ್. ನಂತರ ಪ್ರೌಢಶಾಲೆ ಯೊಂದರಲ್ಲಿ ಉಪಾಧ್ಯಾಯನಾಗಿದ್ದ. ವೇತನ ಹೆಚ್ಚೇನೂ ಇರಲಿಲ್ಲ. ತಾಯಿಯ ಒತ್ತಡಕ್ಕೆ ಮಣಿದು, ಸೋದರ ಮಾವನ ಮಗಳು ವನಜಳನ್ನು ಮದುವೆಯಾಗಿದ್ದ. ಅವಳ ಮೇಲೆ ಆಸಕ್ತಿ ಬೆಳೆಯಲಿಲ್ಲ. ಅವಳೊಡನೆ ಸಲುಗೆಯಿಂದ ಇರಲು ಕಷ್ಟವೆನಿಸುತ್ತಿತ್ತು. ಈ ಮುಜಗರಗಳ ನಡುವೆಯೂ, ಅನಂತ ಮೂರು ಮಕ್ಕಳ ತಂದೆಯಾಗಿದ್ದ. ಮೊದಲನೆಯವಳು ಮಗಳು, ಹೆಸರು ಪಲ್ಲವಿ, ಶೇಷಮ್ಮ ನಂತೆಯೇ ಇದ್ದಳು. ನಂತರ, ಇಬ್ಬರು ಗಂಡು ಮಕ್ಕಳು ಪ್ರಕಾಶ, ಪ್ರಶಾಂತ. ದೂರದಲ್ಲೆಲ್ಲೋ ಕುಳಿತಿದ್ದ ಮಕ್ಕಳ ಕಡ ಅವನ ಗಮನ ಹರಿಯಿತು. ಸಮೀಪ ದಲ್ಲಿ ನಿಂತಿದ್ದ ವನಜ ಅವನನ್ನು ಎಚ್ಚರಿಸಿದಳು. 'ರೀ.. ಶಾಸ್ತ್ರಿಗಳು ಕರೀತಿದಾರೆ.' ಪಿಸುದನಿಯಲ್ಲಿ ನುಡಿದಳು.

ಬಂದಿದ್ದ, ಬಂಧುಗಳಲ್ಲಿ ಕೆಲವು ಹಿರಿಯರು, ಶುಭ ಸ್ವೀಕಾರಕ್ಕೆಂದು ತಂದಿದ್ದ ಉಡುಗೊರೆಯ ಹೊಸ ವಸ್ತ್ರಗಳನ್ನು, ಶಾಸ್ತ್ರಿಗಳು ಆಶೀರ್ವಾದ ಗಳೊಂದಿಗೆ ಕೊಟ್ಟರು. ಅನಂತನಿಗೆ ಹೊಸ ಬಟ್ಟೆಗಳನ್ನು ನೋಡಿ, ಕಣ್ಣುಗಳಿಂದ ಧಾರಾಕಾರವಾಗಿ ನೀರು ಇಳಿಯಿತು. ಅಮ್ಮ ನಮ್ಮನ್ನೆಲ್ಲ ಬಿಟ್ಟು ಹೋಗಿದ್ದಾಳೆ.

ಅವಳ ಕರ್ಮಾಂತರಗಳನ್ನು ಶ್ರದ್ಧೆಯಿಂದ ಮಾಡಿದ್ದಕ್ಕೆ ಈ ಉಡುಗೊರೆ! ಅವುಗಳನ್ನು ಹೆಂಡತಿಯ ಕೈಗಿತ್ತು. ಶಲ್ಯದ ತುದಿಯಿಂದ ಕಣ್ಣುಗಳನ್ನು ಒರೆಸಿಕೊಂಡ.

ರಮಾಕಾಂತ ಅಣ್ಣನ ಕಡೆ ನೋಡಿದ. ಅವನಿಗೂ ದುಃಖವಾಗಿತ್ತು. ಹದಿನೈದು ದಿನಗಳಿಂದ ಮನೆಯಲ್ಲಿ ಶೋಕದ ವಾತಾವರಣ. ಎರಡು ವಾರಗಳು ಚಿಕಿತ್ಸೆಯನ್ನು ಕೊಡಿಸಿದರೂ ತಾಯಿಯನ್ನು ಉಳಿಸಿಕೊಳ್ಳಲಾಗಿರಲಿಲ್ಲ. ಆಕೆಯ ಪ್ರಾಣಪಕ್ಷಿ ಹಾರಿ ಹೋಗುವ ವೇಳೆಯಲ್ಲಿ ಮಕ್ಕಳುಗಳು ಆಕೆಯ ಸಮೀಪದಲ್ಲೇ ಇದ್ದರು. ಆ ಗಳಿಗೆ, ಆಗಾಗ್ಗೆ ಕಣ್ಣಮುಂದೆ ಬಂದು ನಿಲ್ಲುತ್ತಿತ್ತು. ತಾಯಿಯನ್ನು ನೆನೆಸಿಕೊಂಡು ಅವನ ಕಣ್ಣುಗಳು ತೇವವಾದವು. ತಾನು ತಾಯಿಗಾಗಿ ಹೆಚ್ಚಿಗೆ ಏನನ್ನು ಮಾಡಲಾಗಲಿಲ್ಲ ಎಂಬ ಕೊರಗು ಅವನನ್ನು ಕಾಡುತ್ತಿತ್ತು. ಇದಕ್ಕೆ ತನ್ನ ಹೆಂಡತಿಯೇ ಕಾರಣ ಎಂದು ಭಾವಿಸಿದ್ದ.

ಭವಾನಿ, ರಮಾಕಾಂತನ ಪತ್ನಿ. ಹೆಸರಿಗೆ ತಕ್ಕಂತೆ, ಸ್ವಲ್ಪ ಜೋರಿನ ಸ್ವಭಾವದವಳೇ. ಅವಳ ಬಾಯಿಗೆ ಹೆದರಿ, ಅವಳು ಹೇಳಿದುದಕ್ಕೆ ತಲೆಯಾಡಿಸಿ ಬಿಡುತ್ತಿದ್ದ. ಈ ದಂಪತಿ ಭವಾನಿಗೆ ಮಾತುಗಳಲ್ಲಿ ಆ ಭಾವವನ್ನು ತೋರ್ಪಡಿಸಿ ಕೊಳ್ಳುತ್ತಿದ್ದಳು. ತನ್ನ ತಾಯಿಯನ್ನು ಇವಳು ಉದಾಸೀನದ ಭಾವದಿಂದ ನೋಡುತ್ತಿದ್ದಳೆಂದು, ಇವನಿಗೆ ತಿಳಿದಿದ್ದರೂ, ಅಸಹಾಯಕನಾಗಿ ಬಿಟ್ಟಿದ್ದ. ಆದರೆ, ತನ್ನ ತಾಯಿಗೆ ಭವಾನಿಯ ಬಗ್ಗೆ ಯಾವ ಕೆಟ್ಟ ಭಾವನೆಗಳೂ ಇಲ್ಲ ಎನ್ನುವುದನ್ನು ತಿಳಿದಿದ್ದ. ಅಮ್ಮ ಎಷ್ಟು ಒಳ್ಳೆಯವಳು? ಈಗ ಅಂಥಾ ಅಮ್ಮನೇ ಇಲ್ಲ, ಅವಳನ್ನು ಕಳೆದುಕೊಂಡು ಅನಾಥರಾಗಿಬಿಟ್ಟೆವು. ಗಂಟಲು ಗೊರ ಗೊರ ಎಂದಿತು. ಅವನ ಪಕ್ಕದಲ್ಲೇ ನಿಂತಿದ್ದ ಭವಾನಿ, ಅವನ ಕಡೆ ವಿಚಿತ್ರ ನೋಟವನ್ನು ಬೀರಿದಳು. ಗಂಡನ ದುಃಖ, ಅತಿರೇಕ ಎನಿಸಿತು. ಮುಖವನ್ನು ಬಿಗಿದುಕೊಂಡಳು. ಶಾಸ್ತ್ರಿಗಳು ಕೊಟ್ಟ ಹೊಸ ವಸ್ತ್ರಗಳನ್ನು ಗಂಡನ ಕೈಯಿಂದ ತೆಗೆದುಕೊಂಡು ಒಂದು ಕಡೆ ಇಟ್ಟಳು.

ಮೌನವಾಗಿ ಕೈ ಕಟ್ಟಿ ನಿಂತಿದ್ದ ಶ್ರೀನಾಥ ಮನದೊಳಗೇ ರೋಧಿಸುತ್ತಿದ್ದ. ಅವನ ಮನದ ಅಳಲು ಅವನ ಮಡದಿ ಸುಗುಣಳಿಗೆ ಅರ್ಥವಾಗಿತ್ತು. ಮೂರನೆಯ ಹಾಗೂ ಕಿರಿಯ ಮಗನಾಗಿ ಹುಟ್ಟಿದ ಶ್ರೀನಾಥ ತಾಯಿಗೆ ಅತ್ಯಂತ ಪ್ರಿಯನಾದವನು. ತಾಯಿಯ ತೊಡೆಯ ಮೇಲೆ ಮಲಗಿಯೇ ಬಾಲ್ಯವನ್ನು ಕಳೆದವನು. ತಾಯಿಯ ಸೆರಗನ್ನು ಹಿಡಿದು ಅವಳ ಹಿಂದೆ ಹಿಂದೆಯೇ ತಿರುಗಿ ಬೆಳೆದವನು. ಅಣ್ಣಂದಿರಿಗೆ ಕಾಣದಂತೆ, ತಾಯಿ ಕೊಡುತ್ತಿದ್ದ ತಿಂಡಿ ತಿನಿಸುಗಳನ್ನು ಮರೆಯಲ್ಲಿ ತಿಂದು, ತಾಯಿಯ ಸೆರಗಿಗೆ ಕೈ ಬಾಯಿ ಒರೆಸಿ, ಮುದ್ದು ಮಾಡಿಸಿಕೊಳ್ಳುತ್ತಾ ಕಾಲ ಹಾಕಿದವನು. ಡಿಗ್ರಿಗೆ, ತನ್ನ

ವಿದ್ಯಾಭ್ಯಾಸವನ್ನು ಮುಗಿಸಿದನು.

ಅನಂತನಂತೆ ಶಾಲಾ ಶಿಕ್ಷಕನಾಗಲು ಅವನಿಗೆ ಇಷ್ಟವಿರಲಿಲ್ಲ. ರಮಾಕಾಂತನಂತೆ ಒಂದು ಒಳ್ಳೆಯ ಕಂಪೆನಿಯಲ್ಲಿ ಇವನಿಗೆ ಕೆಲಸ ಸಿಗುವಂತಿರಲಿಲ್ಲ. ತಂದೆಯ ಪರಿಚಯದವನ ಸಹಾಯದಿಂದ ತಾನೇ ಒಂದು ಸ್ವಂತ ಬಿಸಿನೆಸ್‌ನ್ನು ಪ್ರಾರಂಭಿಸಿದ. ಮೊದ ಮೊದಲಿಗೆ ಕಷ್ಟವೆನಿಸಿದರೂ, ಕ್ರಮೇಣ ಚೆನ್ನಾಗಿ ಸಂಪಾದನೆ ಶುರುವಾಗಿತ್ತು. ಇದಕ್ಕೆ ಅಮ್ಮನೇ ಕಾರಣ. ಗಂಡ ತನಗಾಗಿ ಬ್ಯಾಂಕಿನಲ್ಲಿ ಇಟ್ಟಿದ್ದ ಹಣವನ್ನು ಶ್ರೀನಾಥನಿಗೆ ಕೊಟ್ಟು, ಅವನಿಗೆ ಸಹಾಯವನ್ನು ಮಾಡುತ್ತಿದ್ದಳು. ವಾಸಕ್ಕೆ ಗಂಡ ಕಟ್ಟಿಸಿದ ದೊಡ್ಡ ಮನೆಯೇ ಸಾಕಾಗಿತ್ತು. ಅನಂತನ ಸಂಪಾದನೆ, ಅವನ ಸಂಸಾರದ ಖರ್ಚಿಗೆ ಸಾಕಾಗುತ್ತಿರಲಿಲ್ಲ. ರಮಾಕಾಂತನ ಸಂಪಾದನೆಯಲ್ಲಿ ಉಳಿಸಲು ಆಗುತ್ತಿಲ್ಲವೆಂಬ ಅಸಮಾಧಾನ ಭವಾನಿಗೆ. ಜೊತೆಗೆ ಶ್ರೀನಾಥನಿಗೆ ಅತ್ತೆ ಹಣದ ಸಹಾಯ ಮಾಡುತ್ತಿರುವರೆಂಬ ಅಸಹನೆ. ಈ ಕಾರಣಗಳಿಂದಾಗಿ, ಮನೆಯೊಳಗೆ ಸಣ್ಣಪುಟ್ಟ ಕಲಹಗಳು ಏಳುತ್ತಿದ್ದವು.

ಇದನ್ನು ಗಮನಿಸಿದ ಶೇಷಮ್ಮ, ಶ್ರೀನಾಥ, ಮದುವೆಯ ವಯಸ್ಸಿಗೆ ಬಂದಾಗ, ರಮಾಕಾಂತನೊಡನೆ ಮಾತನಾಡಿ ಮೇಲಿನ ಮನೆಯಲ್ಲಿ ಅವರು, ಬೇರೆ ಸಂಸಾರವನ್ನು ಹೂಡುವಂತೆ ವ್ಯವಸ್ಥೆಯನ್ನು ಮಾಡಿಕೊಟ್ಟಳು. ನಂತರ ಶ್ರೀನಾಥನ ಮದುವೆ ಜರುಗಿತು. ಅವನ ಹೆಂಡತಿ ಸುಗುಣ, ಶೇಷಮ್ಮನವರ ತಮ್ಮನ ಮಗಳು. ಹೆಸರಿಗೆ ತಕ್ಕಂತೆ ಸುಗುಣಿಯೇ ಆಗಿದ್ದಳು. ಅತ್ತೆಗೆ ಅಚ್ಚುಮೆಚ್ಚಿನ ಸೊಸೆಯಾದಳು. ಕಡೆಗಾಲದವರೆಗೂ ಆಕೆಯ ಸೇವೆಯನ್ನು ನಿಸ್ವಾರ್ಥವಾಗಿ ಮಾಡಿದಳು. ತಾಯಿ ತನಗಾಗಿ ಉತ್ತಮ ಪತ್ನಿಯನ್ನೇ ಆಯ್ಕೆ ಮಾಡಿರುವಳೆಂದು ಶ್ರೀನಾಥನಿಗೆ ಸಂತೋಷ. ಸುಗುಣ ಅತ್ತಿಗೆಯರಂತೆ ಅಲ್ಲ, ಮುಂದೆಯೂ ಈ ಕುಟುಂಬ ಒಡೆಯದಂತೆ ಸುಗುಣ ನೋಡಿಕೊಳ್ಳುವಳೆಂಬ ನಂಬಿಕೆ ಅವನದು. ಅಮ್ಮ ತನಗಾಗಿ ಮಾಡಿರುವುದನ್ನೆಲ್ಲಾ ನೆನೆಸಿಕೊಂಡ ಶ್ರೀನಾಥನಿಗೆ ತಡೆಯಲಾರದಷ್ಟು ಅಳು ಒತ್ತಿಕೊಂಡು ಬಂದಿತ್ತು. ತಲೆ ತಗ್ಗಿಸಿ ಕಣ್ಣೀರು ಸುರಿಸಿದ. ಗಂಡನ ತೊಳಲಾಟವನ್ನು ಸುಗುಣ ಗಮನಿಸಿದಳು. ತಾಯಿಯ ಮೇಲೆ ಎಷ್ಟು ಅಗಾಧವಾದ ಪ್ರೀತಿ ಇವನಿಗೆ ಇತ್ತು ಎನ್ನುವುದನ್ನು ಇವಳು ಬಲ್ಲಳು. ಗಂಡನಿಗೆ ತಾನೇ ಅಗಲಿ, ಯಾರೇ ಆಗಲಿ, ಎಷ್ಟು ಸಮಾಧಾನ ಹೇಳಿದರೂ ಈ ದುಃಖ ಕಡಿಮೆ ಆಗುವುದಿಲ್ಲ. ಈ ನಷ್ಟವನ್ನು ತುಂಬಲಾಗುವುದಿಲ್ಲ. ಕಣ್ಣೀರು ಹರಿಯಲಿ, ದುಃಖ ತಾನಾಗಿಯೇ ಕಡಿಮೆ ಆಗುತ್ತದೆ ಎಂದುಕೊಂಡು ಅವನ ಕೈಯಲ್ಲಿದ್ದ ಹೊಸ ವಸ್ತ್ರಗಳನ್ನು ತೆಗೆದುಕೊಂಡು, ಸಮೀಪದಲ್ಲೇ ನಿಂತಿದ್ದ ತನ್ನ ತಮ್ಮನ ಹೆಂಡತಿಯ ಕೈಗೆ

ಕೊಟ್ಟಳು. ಕಣ್ಣೀರನ್ನು ಶಲ್ಯದಿಂದ ಒರೆಸಿಕೊಂಡ ಶ್ರೀನಾಥ ಸುಗುಣಗಳ ಕಡೆ ನೋಡಿದ. ಅವಳಿಗೂ ಅಳು ಬಂದಿತ್ತು.

ಪುರೋಹಿತರ ಆಶೀರ್ವಚನ ಮುಕ್ತಾಯಗೊಂಡಿತು. ಬಂದ ನೆಂಟರಿಷ್ಟರೆಲ್ಲಾ ಭೋಜನಕ್ಕೆ ತೆರಳಿದರು. ಶುಭ ಸ್ವೀಕಾರದ ಸಿಹಿ ಊಟ, ಜೊತೆಗೆ ದಕ್ಷಿಣೆ, ಈ ಮಕ್ಕಳು ಯಾವುದಕ್ಕೂ ಕಡಿಮೆ ಮಾಲಿಲ್ಲ. ಶೇಷಮ್ಮನವರು ಪುಣ್ಯವಂತರು ಎಂದು ಹೊಗಳಿ, ತಮಗೆ ತಿಳಿದಂತೆ, ಅನಿಸಿದಂತೆ, ಸಾಂತ್ವನದ ನುಡಿಗಳನ್ನು ಹೇಳಿ ಚದುರಿದರು.

ನಾಲ್ಕಾರು ಪಂಕ್ತಿಗಳ ಊಟ ಮುಗಿದ ನಂತರ, ಸ್ವಲ್ಪ ಹೊತ್ತು ಬಿಡುವು. ಮನೆಯವರುಗಳು ಮಾತ್ರ ಉಳಿದುಕೊಂಡರು. ಮನೆಯಲ್ಲಿ ಗಾಢವಾದ ಮೌನ ಆವರಿಸಿಕೊಂಡಿತ್ತು. ಎಲ್ಲರಿಗೂ ಆಯಾಸ ಎದ್ದು ತೋರುತ್ತಿತ್ತು. ಕೆಲವು ದಿನಗಳಿಂದ ನಡೆದ, ಎದ್ದು ಬಿದ್ದು ಓಡಾಟದ ನಡುವೆ, ಉಳಿದುದೆಲ್ಲವೂ ಮರೆತಂತಾಗಿತ್ತು. ಕೆಲವರು ಅಲ್ಲಲ್ಲೇ ಕುಳಿತು ವಿಶ್ರಾಂತಿಯನ್ನು ತೆಗೆದುಕೊಳುತ್ತಿದ್ದರು. ಕುಳಿತಲ್ಲೇ ತೂಕಡಿಕೆ, ಕಿರುನಿದ್ರೆ. ಆದರೆ ಸೊಸೆಯರಿಗೆ ಮಾತ್ರ ಬಿಡುವಿಲ್ಲ. ಬಾಡಿಗೆಗೆ ತಂದ ಪಾತ್ರೆ ಪಡಗಗಳ ಲೆಖ್ಖಾಚಾರವನ್ನು ನೋಡಬಕಾಗಿದ್ದಿತು. ಅಡಿಗೆಯವರ ಲೆಖ್ಖ ಚುಕ್ತಾ ಮಾಡಬೇಕಾಗಿದ್ದಿತು. ಉಳಿದ ಪದಾರ್ಥಗಳನ್ನು ವಿಂಗಡಿಸಿ, ವಿತರಣೆ ಮಾಡಬೇಕಾಗಿದ್ದಿತು. ಕೊಡುವವರಿಗೆ ಕೊಡಬೇಕಾದ ತಿಂಡಿಗಳನ್ನು ತಗೆದಿಡಬೇಕಾಗಿದ್ದಿತು. ವನಜ ಹಾಗೂ ಸುಗುಣ, ಅಡಿಗೆ ಪದಾರ್ಥಗಳ ಕಡೆ ಗಮವನ್ನು ಹರಿಸಿದ್ದರೆ, ಭವಾನಿ, ಹೊರಗಿನ ಶಾಮಿಯಾನ, ಕುರ್ಚಿ ಮತ್ತು ಊಟದ ಟೇಬಲ್ಲುಗಳನ್ನು ತೆಗೆದಿರಿಸುವವರ ಮೇಲೆ ಗಮನವಿಟ್ಟಿದ್ದಳು.

"ಅಕ್ಕಾ ಭಾವ ತುಂಬಾ ಬೇಸರ ಮಾಡಿಕೊಂಡಿದಾರೆ. ಪುರೋಹತರು ಆಶೀರ್ವಾದ ಮಾಡಿ, ಕೊಟ್ಟ ಉಡುಗೊರೆಗಳನ್ನು ತೆಗೆದುಕೊಳ್ಳುವಾಗ ಅವರ ದುಃಖ ಮಿತಿ ಮೀರಿತ್ತು..... ನೀವೇ ಅವರ ದುಃಖವನ್ನು ಕಡಿಮೆ ಮಾಡ್ಬೇಕು" ಸುಗುಣ, ವನಜಗಳಿಗೆ ಹೇಳಿ ತನ್ನ ಪರಿತಾಪವನ್ನು ವ್ಯಕ್ತಪಡಿಸಿದಳು.

"ಹೌದು, ಸುಗುಣ ಇವರಿಗೆ ಅಮ್ಮ ಎಂದರೆ ಅಚ್ಚುಮೆಚ್ಚು. ಎಷ್ಟಾಗಲೀ ಹಿರಿಯ ಮಗ ಅಲ್ವಾ.. ಅವರ ಅಗಲಿಕೆಯ ದುಃಖ ಕಡಿಮೆ ಆಗುತ್ತಾ?" ನಾನಂತೂ ಸಮಾಧಾನವನ್ನು ಹೇಳ್ತಾನೇ ಇರ್ತೀವಿ ಆದರೂ...."

"ಹೌದು ಅಕ್ಕಾ, ಯಾರೇ ಹೇಳಿದ್ರೂ ಕಡಿಮೆ ಆಗದ ದುಃಖ ಇದು. ಎಷ್ಟಾಗಲೀ ಹಿರಿಯ ಮಗ ತಾಯಿಗೆ ಬಹಳ ಹತ್ತಿರವಾಗಿದ್ದವರು. ಈ ಅಣ್ಣ ತಮ್ಮಂದಿರಿಗೆ, ತಂದೆಗಿಂತ ತಾಯಿಯ ಮೇಲೆ ಪ್ರೀತಿ ಜಾಸ್ತಿ. ಅವರೂ ಹಾಗೆಯೇ ಇದ್ದರು. ಮಕ್ಕಳನ್ನು ಬೆಳೆಸುವಾಗ ಬಹಳವೇ ಕಷ್ಟಪಟ್ಟಿರುತ್ತಾರೆ.

ಅದೆಲ್ಲಾ ನೆನಪಿಗೆ ಬಾರದೇ ಇರುತ್ತಾ?"

"ಹಿರಿಯ ಮಗನಾದ್ರೇನು? ಕಿರಿಯಮಗನಾದ್ರೇನು? ಎಲ್ಲರನ್ನು ಒಂದೇ ತರಹ ಬೆಳೆಸಿದ್ದರು. ಒಂದೇ ತರಹ ಕಾಣುತ್ತಿದ್ದರು. ಆದರೆ ನಮ್ಮ ನಮ್ಮ ಸಂಸಾರ ಬೆಳೆದ ಮೇಲೆ ಮಕ್ಕಳುಗಳು ಸ್ವಲ್ಪ ಮಟ್ಟಿಗೆ ಬದಲಾಗಿದಾರೆ ಅಂತ ಅತ್ತೆ ಆಗ, ಈಗ ಹೇಳುತ್ತಿದ್ದರು. ಅದು ನಿಜವೇನೋ ಅಂತ ಈಗ ಭಾಸವಾಗ್ತಿದೆ. ಇನ್ನು ಮುಂದೆ ಇನ್ನೂ ಬದಲಾಗಬಹುದು ಅಲ್ವಾ?"

"ಹೌದು ಅಕ್ಕಾ ನಂಗೂ ಹಾಗೇ ಅನ್ನಿಸ್ತಿದೆ.... ನೀವು ಈ ಮನೆಗೆ ಹಿರಿಯ ಸೊಸೆಯಾಗಿ ಬಂದು ಎಷ್ಟೋ ವರ್ಷಗಳು ಕಳೆದಿವೆ. ನಾನು ಬಂದು ಕೆಲವೇ ವರ್ಷಗಳು ಕಳೆದಿವೆ. ಆದರೂ ಒಂದ್ಮಾತು ನಿಮ್ಮ ಗಮನಕ್ಕೂ ಬಂದಿರಬಹುದು. ಭವಾನಿ ಅಕ್ಕನ ಸ್ವಭಾವವೇ ಬೇರೆ. ಅವರಿಗೆ ಅತ್ತೆಯ ಮೇಲೆ ಒಳ್ಳೆಯ ಅಭಿಪ್ರಾಯವಿರಲಿಲ್ಲ. ಭಾವನೂ ಅಕ್ಕನ ಮಾತಿಗೆ ಕಿವಿಕೊಡ್ತಾರೆ" ಅತ್ತಿತ್ತ ನೋಡಿ ಕೆಳದನಿಯಲ್ಲಿ ಹೇಳಿದಳು.

"ಭವಾನಿ ಶ್ರೀಮಂತರ ಮನೆಯಿಂದ ಬಂದವಳು. ಅವಳಿಗೆ ನಾವುಗಳ್ಯಾರೂ ಸರಿ ಹೋಗ್ತಿರ್ಲಿಲ್ಲ. ಅವಳ ನಡೆವಳಿಕೆಯಿಂದ ಅತ್ತೆಗೆ ಬೇಸರವಾಗಿತ್ತು. ಅದಕ್ಕೇ ತಾನೇ, ಅವರಿಗೆ ಬೇರೆ ಸಂಸಾರವನ್ನು ಹೂಡಿಸಿದ್ದು, ಅವಳು ತಾನಾಯಿತು, ತನ್ನ ಗಂಡ ಮಕ್ಕಳಾಯಿತು ಅಂತ ಹಾಯಾಗಿ ಇದ್ದು ಬಿಟ್ಟಳು...." ಮಾತಿನಲ್ಲಿ ಸ್ವಲ್ಪ ಕಹಿಯೂ ಇತ್ತು.

"ಇನ್ನು ಮುಂದೆ ಏನು ಕತೆಯೋ? ಹಾಗಲ್ಲ ಹೀಗೆ ಅಂತ ಹೇಳೋಕೆ ಅತ್ತೆಯೂ ಇಲ್ಲ, ಅವರನ್ನು ತಡೆಯೋರು ಯಾರು?"

"ಇನ್ನೇನು? ಬೇರೆ ಮನೆ ಮಾಡ್ಕೊಂಡು ಅವರ ಪಾಡಿಗೆ ಅವರು ಹೋಗಬಹುದು. ರಮಾಕಾಂತನ ಸಂಪಾದನೆಯೂ ಚೆನ್ನಾಗಿದೆ. ರಮೇಶನೂ ಸಂಪಾದಿಸ್ತಿದಾನೆ.... ಸಾಕಷ್ಟು ಉಳಿಸಿಟ್ಟುಕೊಂಡಿದ್ದಾರೆ. ಅವರಿಗೇನು ಕಡಿಮೆ?"

"ಅವರನ್ನು ಬೇರೆ ಹೋಗುಕ್ಕೆ ಬಿಡಬಾರದು ಅಕ್ಕಾ, ಅತ್ತೆಯವರ ಆಸೆಯೂ ಅದೇ ಆಗಿತ್ತು. ಈಗಿನಂತೆ, ಮೇಲಿನ ಮನೆಯಲ್ಲಿ ಅವರ ಪಾಡಿಗೆ ಅವರು ಇರಲಿ"

"ಏನೋ, ಅಣ್ಣ ತಮ್ಮಂದಿರು ಸೇರಿ, ನಿರ್ಧಾರವನ್ನು ತೆಗೆದುಕೊಳ್ಳಲಿ ನಮಗ್ಯಾಕೆ! ನಾನು ಈ ಮನೆಗೆ ಸೊಸೆಯಾಗಿ ಬಂದಾಗ, ಮಾವ ಅಷ್ಟೇನೂ ಅನುಕೂಲವಾಗಿರಲಿಲ್ಲ. ನನ್ನ ಭಾವನ ಸಂಪಾದನೆಯೂ ಅಷ್ಟಕ್ಕಷ್ಟೇ, ರಮಾಕಾಂತ ಸಂಪಾದಿಸಲು ತೊಡಗಿದ ನಂತರ, ಈ ಮನೆಯನ್ನು ಕಟ್ಟಿಸಿದ್ದು. ಆಗ ಮೇಲಿನ ಮನೆಯನ್ನು ಬಾಡಿಗೆಗೆ ಕೊಟ್ಟಿದ್ದರು. ಮಾವ ತೀರಿಹೋದ ಮೇಲೆ ತಾನೇ, ರಮಾಕಾಮತ ಮೇಲಿನ ಮನೆಯಲ್ಲಿ ವಾಸಮಾಡತೊಡಗಿದ್ದು, ಆದರೆ ಇದಕ್ಕೆ

ಯಾರ ವಿರೋಧವೂ ಇರಲಿಲ್ಲ...." ವನಜ ವಿಷಾದದಿಂದ ನುಡಿಗಳು.

"ಹೋಗಲಿ ಬಿಡಿ ಅಕ್ಕಾ, ಅತ್ತೆ ಎಂದೂ ಯಾವ ಮಾತನ್ನು ಆಡಿದವರಲ್ಲ, ಒಬ್ಬರ ಮೇಲೆ ಇನ್ನೊಬ್ಬರ ಹತ್ತಿರ ಚಾಡಿ ಹೇಳಿದವರಲ್ಲ" ಅತ್ತೆಯನ್ನು ಹೊಗಳಿದಳು.

"ಹೌದು, ಅತ್ತೆಯ ಈ ಒಳ್ಳೆಯ ಗುಣವೇ, ಎಲ್ಲರನ್ನು ಒಟ್ಟಾಗಿ ಇಟ್ಟಿದ್ದು. ಅದಕ್ಕೆ ನಿನ್ನ ಗಂಡನೂ ಕಾರಣವೇ. ಬ್ಯಾಂಕ್‌ಗೆ ಕೆಲಸಕ್ಕೆ ಸೇರಿಕೊಂಡು, ಬಂದ ಸಂಬಳವನ್ನೆಲ್ಲಾ ತಾಯಿಯ ಕೈಗೆ ಕೊಡುತ್ತಿದ್ದ. ನೀನು, ಅವನ ಪತ್ನಿಯಾಗಿ ಈ ಮನೆಗೆ ಬಂದಮೇಲೂ ಅದೇ ಮುಂದುವರೆಯಿತು. ಒಂದು ಮಾತಂತೂ ನಿಜ, ನೀವಿಬ್ಬರೂ ಅತ್ತೆಯವರಿಗೆ ಅಚ್ಚುಮೆಚ್ಚಿನ ಮಗ ಸೊಸೆ. ನಾವಿಬ್ಬರೂ ಅಷ್ಟಕ್ಕಷ್ಟೇ. ಹೆಸರಿಗೆ ಹಿರಿಮಗ, ಹಿರಿಸೊಸೆ ಆದರೆ ಬೆಲೆ?"

"ಈಗ್ಯಾಕೆ ಅಂದ್ಕೋತೀರಿ ಅಕ್ಕಾ? ಅತ್ತೆ ಎಂದಾದ್ರು ಹಾಗೆ ಮಾತಾಡಿದ್ರಾ?"

"ಆಡಿರ್ಲಿಲ್ಲ. ಆದರೆ ಅವರ ಮನಸ್ನಲ್ಲಿ ಏನಿತ್ತೋ? ಭವಾನಿ ಏನೇ ಅಂದ್ರೂ ತೆಪ್ಪಗೆ ಇದ್ದು ಬಿಡ್ತಿದ್ರೂ. ನಾನೋ ಹಿರಿಸೊಸೆ, ಅವಳೋ ಅಂತ ಅನುಮಾನ ಬರುವಂತೆ..."

"ಅದೆಲ್ಲಾ ಮುಗೀತಲ್ಲ, ಆ ಕೊಂಡಿಯೂ ಇಲ್ಲ, ಇನ್ನು ಮುಂದೆ ಅವರವರ ಪಾಡು ಅವರವರದ್ದು...... ಏನೇನಾಗುತ್ತೋ? ಏನು ಮಾತುಗಳು ಬರುತ್ವೋ?"

"ಎಂತೆಂಥದೋ ಮಾತುಗಳು ಹೊರ ಬರುಕ್ಕೆ ಭವಾನಿಗೆ ಅವಕಾಶವನ್ನೇ ಕೊಡಬಾರ್ದು, ನಾನೂ ನೀನು ಒಂದಾಗಿದ್ದರೆ, ಭವಾನಿ ಅವಳ ಬಾಲ ಬಿಚ್ಚುಕ್ಕೆ ಅಗುಲ್ಲ, ಇಲ್ಲಿ ಇರುಕ್ಕೆ ಅವಳಿಗೆ ಇಷ್ಟವಿಲ್ಲದಿದ್ರೆ, ಬೇರೆ ಮನೆ ಮಾಡ್ಕೊಂಡು ಹೋಗಲಿ" ವನಜ ಕಟುವಾಗಿ ನುಡಿದಳು.

"ಸುಗುಣಾ" ಎಂದು ಕರೆಯುತ್ತಾ ಒಳಗೆ ನುಗ್ಗಿದ ಭವಾನಿಯನ್ನು ಕಂಡು ಇಬ್ಬರೂ ಮಾತನ್ನು ನಿಲ್ಲಿಸಿ. ಅವಳನ್ನೇ ಮಿಕ ಮಿಕ ನೋಡಿದರು.

"ಓ.... ಅಕ್ಕಾ, ನೀವೂ ಇಲ್ಲೇ ಇದೀರಾ? ಇಬ್ಬರೂ ಏನೋ ಮತಾಡ್ತಿದ್ರಿ. ನಾನು ಆಮೇಲೆ ಬರ್ತೀನಿ" ಅವರಿಬ್ಬರ ಕಡೆ ಬೆನ್ನು ತಿರುಗಿಸಿದಳು.

"ನಿಂತ್ಕೋ ಭವಾನಿ. ನೀನು ಸುಗುಣಳ ಹತ್ರ ಏನು ಬೇಕೋ ಮಾತಾಡು. ನಾನೇ ಹೊರಕ್ಕೆ ಹೋಗ್ತೀನಿ," ವನಜ ಬಾಗಿಲ ಕಡೆ ಧಾವಿಸಿದಳು.

"ಅಯ್ಯೋ ರಾಮಾ. ಈಗ ನಾನೇನಂದೆ! ಸುಗುಣ, ಸ್ವಲ್ಪ ಶ್ರೀನಾಥನ್ನ ಕರೀತೀಯಾ. ಶಾಮಿಯಾನದವರ ಬಿಲ್ ಸೆಟ್ಲ್ ಮಾಡ್ಬೇಕಾಗಿತ್ತು...."

"ಹೂಂ ಕರೀತೀನಿ" ಎಂದು ಹೊರಟವಳನ್ನು ವನಜ ತಡೆದಳು.

"ಮಲಗಿದ್ರೆ ಎಬ್ಬಿಸ್ಬೇಡ ಸುಗುಣ. ಹದಿನೈದು ದಿನಗಳಿಂದ ಸರಿಯಗಿ ಊಟ ಮಾಡಿಲ್ಲ. ಕಣ್ತುಂಬಾ ನಿದ್ದೆ ಮಾಡಿಲ್ಲ"

"ಯಾರಿಗೂ ಊಟ ಸೇರಿಲ್ಲ. ಕಣ್ಣಿಗೆ ನಿದ್ದೆ ಹತ್ತಿಲ್ಲ. ನನಗಂತೂ ದಿಂಬಿಗೆ ತಲೆ ಕೊಟ್ರೆ ಸಾಕು ಎನಿಸಿದೆ" ಭವಾನಿ ಆಕಳಿಕೆಯನ್ನು ನಟಿಸುತ್ತಾ ನುಡಿದಳು. ವನಜ ಉತ್ತರ ಕೊಡಲಿಲ್ಲ. ಸುಗುಣ ತನ್ನ ರೂಮಿಗೆ ಹಾಗೆ ಹೋಗಿ ಹೀಗೆ ವಾಪಸ್ಸಾಗಿದ್ದಳು.

"ಅವರು ರೂಮಿನಲ್ಲಿಲ್ಲ ಅಕ್ಕಾ. ಎಲ್ಲೋ ಹೊರಗೆ ಹೋದ್ರಂತೆ, ಭಾವ ಹೇಳಿದ್ರು ಅವರೇ ಬಂದು ಬಿಲ್ ಸೆಟ್ಲ್ ಮಾಡ್ತಾರಂತೆ"

"ಯಾವ ಭಾವ? ಅನಂತ ಭಾವಾನಾ?" ಅಚ್ಚರಿಯಿಂದ ಕೇಳಿದಳು.

"ಯಾಕೆ? ಅನಂತ ಭಾವಾನೇ ಬರ್ಬೇಕಾ? ರಮಕಾಂತನಿಗೂ ಜವಾಬ್ದಾರಿ ಇದೆ" ಅಷ್ಟರಲ್ಲಿ ರಮಾಕಾಂತ ಬಂದಿದ್ದ.

"ಅತ್ಗೇ, ಕಾಫಿ ಮಾಡಿದ್ರೆ, ಕೊಡ್ತೀರಾ!" ಅಲ್ಲಿದ್ದ ಮಣೆಯ ಮೇಲೆ ಕುಳಿತ.

"ನಿನ್ನ ಹೆಂಡ್ತಿಗೆ ಹೇಳಪ್ಪಾ, ನನ್ನ ಕೈ ಮುಸುರೆ ಆಗಿದೆ"

"ಇಲ್ಲಿ ಎಲ್ಲೆಲ್ಲಿ ಏನೇನಿದೆ ಅಂತ ನಂಗೇನ್ಗೊತ್ತು? ಸುಗುಣ ನಿನ್ನ ಭಾವಂಗೆ ನೀನೇ ಕಾಫಿ ಕೊಡು. ಹಾಗೇ ನಂಗೂ. ಕಾಫಿ ಬಿಸಿಯಾಗಿರಲಿ ಹಾಳಾದ್ದು ತಲೆನೋವು" ಹಣೆಯನ್ನು ಒತ್ತಿಕೊಂಡಳು. ವನಜ ಮೂತಿಯನ್ನು ಸೊಟ್ಟ ಮಾಡಿ ಸುಗುಣಳ ಕಡೆ ನೋಡಿದಳು. ಸುಗುಣ ಗಮನಿಸಿದವಳಂತೆ ಸ್ಟವ್ ಹೊತ್ತಿಸಿದಳು.

* * *

"ಏನ್ರೀ, ಏನು ಯೋಚ್ನೆ ಮಾಡ್ತಿದೀರಿ? ತಿಥಿಗೆ, ವೈಕುಂಠ ಸಮಾರಾಧನೆಗೆ ದಾನ, ದಕ್ಷಿಣೆಗೆ ಅಷ್ಟು ಖರ್ಚಾಯಿತು ಇಷ್ಟು ಖರ್ಚಾಯಿತು ಅಂತ ನಿಮ್ಮ ತಮ್ಮಂದಿರು ಹೇಳಿದ್ರೆ ನಂಬಬೇಡಿ. ಪೆದ್ದು ಪೆದ್ದಾಗಿ ನಾನೂ ಮೂರನೇ ಒಂದು ಭಾಗ ಕೊಡ್ತೀನಿ ಅಂತ ಒಪ್ಕೊಂಡು ಬಿಡ್ಬೇಡಿ" ವನಜ ಪಟ ಪಟನೆ ಒದರಿದಾಗ ಅನಂತನಿಗೆ ರೇಗಿತ್ತು.

"ಸ್ವಲ್ಪ ಸುಮ್ನೆ ಇರು. ಈಗ ನಿನ್ನನ್ನ ಯಾರು ಏನು ಕೇಳಿದ್ರು? ನಾನು ಬೇರೆ ಏನನ್ನೋ ಯೋಚಿಸ್ತಿದ್ದೆ. ಪ್ರಕಾಶ ಊರಿಗೆ ಯಾವಾಗ ವಾಪಸ್ಸು ಹೋಗ್ತಾನೆ?"

"ಇನ್ನು ನಾಲ್ಕು ದಿನ ಇರ್ಲಿ ಬಿಡಿ. ನಿಮಗೆ ಅವನಿಂದ ಏನು ಕಷ್ಟ ಆಗ್ತಿದೆ? ಈಗ ಹೋದ್ರೆ ಮತ್ತೆ ಯಾವಾಗ ಬರ್ತಾನೋ? ಅವನು ಬರೋದೇ ಅಪರೂಪವಾಗಿದೆ"

"ಇರಲಿ ನಾನೆಲ್ಲಿ ಬೇಡ ಅಂತಂದೆ? ಆದ್ರೆ ರಜ ಇರ್ಬೇಕಲ್ಲ. ಆಫೀಸು ನಮ್ಮ ಚಿಕ್ಕಪ್ಪನ ಮಗನದಲ್ಲ. ಅವನು ಬಂದು ಹದಿನೈದು ದಿನಗಳಾದವು.

ಕೆಲಸಕ್ಕೆ ಏನಾದ್ರೂ ತೊಂದರೆ ಆದರೆ ಏನ್ಮಾಡ್ತಾನೆ?" ತನ್ನ ಆತಂಕವನ್ನು ಹೊರಗೆಡವಿದ

"ನಿಮಗ್ಯಾಕೆ ಚಿಂತೆ? ಅವನಿಗೂ ಜವಾಬ್ದಾರಿ ಇದೆ. ಹೆದರ್ಬೇಡಿ, ಇಲ್ಲಿ ಈ ಮನೇಲಿ ದಂಡಪಿಂಡವಾಗಿ ಕೂತ್ಕೊಳುಲ್ಲ. ಹಾಗೇನಾದ್ರೂ ಆದ್ರೆ, ನಿಮ್ಮ ಪಾಲಿನ ಆಸ್ತಿಯಲ್ಲಿ ಭಾಗವನ್ನು ಕೇಳಿ, ತಗೊಳ್ಳಿ. ಅವನು ಯಾವುದಾದ್ರೂ ಬಿಸಿನೆಸ್ ಮಾಡ್ಲಿ"

"ಹಿರಿಯ ಮಗನಾಗಿ, ಮನೆಯಲ್ಲಿ ಪಾಲು ಕೇಳುವ ಮಾತನ್ನು ನಾನು ಆಡುಲ್ಲ. ಅದು ಸರಿಯಲ್ಲ" ಹುಬ್ಬುಗಳು ಸಂಕುಚಿತಗೊಂಡವು.

"ಹಾಗಾದ್ರೆ ಸರಿ ಯಾವುದು? ಅವರಿಬ್ಬರೂ ಹೇಳಿದ ಹಾಗೆ ಕೇಳ್ಕೊಂಡು ಇಲ್ಲಿಯೇ ಇರೋದಾ?"

"ಅದ್ರಲ್ಲಿ ತಪ್ಪೇನಿದೆ? ಅವರೂ ನಮ್ಮವರೇ, ನನ್ನ ತಮ್ಮಂದಿರು"

"ನಿಮ್ಗೆ ಯಾವುದ್ರಲ್ಲೂ ತಪ್ಪು ಇದೆ ಅಂತ ಅನ್ನೋದೇ ಇಲ್ಲ, ನಿಮಗೂ ಅಧಿಕಾರ ಇದೆ.... ನಿಮ್ಮಮ್ಮ ನಿಮ್ಮನ್ನ ಮೊದ್ದು ಮೊದ್ದಾಗಿ ಬೆಳೆಸಿ ಬಿಟ್ಟಿದಾರೆ. ನಿಮಗೆ ಏನೂ ತಿಳಿಯೋದೇ ಇಲ್ಲ"

"ಈಗ ಅಮ್ಮನ್ನ ಮಾತಿಗೆ ಯಾಕೆ ತರ್ತೀಯಾ? ಪಾಪ, ಸತ್ತು ಸ್ವರ್ಗ ದಲ್ಲಿದಾಳೆ"

"ಯಾಕೆ ತರ್ಬಾರ್ದು? ಈ ವರ್ಷ ಪ್ರಕಾಶಂಗೆ ಮದುವೆ ಮಾಡೋಣ ಅಂತ ಅಂದ್ಕೊಂಡಿದ್ದೆ. ಬೇರೆ ಊರ್ನಲ್ಲಿ ಒಂಟಿಯಾಗಿದಾನೆ, ಆದ್ರೇನು ಇನ್ನೊಂದು ವರ್ಷದ ತನಕ ಆ ಸುದ್ಧೀನೇ ಎತ್ತುವ ಹಾಗಿಲ್ವಲ್ಲಾ?"

"ಇದ್ರಿಂದ ಏನು ನಷ್ಟ? ನಿಧಾನವಾಗಿ ಮದುವೆ ಮಾಡಿದ್ರಾಯ್ತು ಬಿಡು"

"ಎಷ್ಟು ಸುಲಭವಾಗಿ ಮಾತಾಡ್ತೀರಿ! ನಿಧಾನಿಸಿ, ನಿಧಾನಿಸಿ, ಇಷ್ಟು ವರ್ಷಗಳು ಕಳೆದವು. ಪಲ್ಲವಿಗೆ ಮದುವೆಗೆ ಸರಿಯಾಗಿ ಪ್ರಯತ್ನವನ್ನೇ ಮಾಡ್ಲಿಲ್ಲ ನೀವು. ಅವಳಿಗೆ ವಯಸ್ಸು ಮೀರಿ ಹೋಯ್ತಲ್ಲ"

"ಅದಕ್ಕೆ ನಾನು ಹೊಣೇನಾ? ನೀನು ನೋಡಿದ, ವರನ ಬಗ್ಗೆ ನಾನು ಹೋಗಿ ಎಲ್ಲವನ್ನು ವಿಚಾರಿಸ್ಕೊಂಡು ಬರ್ತಿರ್ಲಿಲ್ವಾ? ನೀವೇ ತಾಯಿ, ಮಗಳು, ಬಹಳ ನಸನಸೆ ಆಡಿದ್ದು. ಇಲ್ಲದೇ ಇದ್ದಿದ್ರೆ, ಇಷ್ಟು ಹೊತ್ತಿಗೆ ಪಲ್ಲವಿಗೆ ಮದುವೆಯಾಗಿ ಎಷ್ಟೋ ವರ್ಷಗಳು ಕಳೆದಿರುತ್ತಿದ್ವು. ಅಮ್ಮನಿಗೆ ಆ ಕೊರಗೂ ಇತ್ತು. ಈ ವರ್ಷದಲ್ಲಿ ಯಾವುದಾದ್ರೂ ಗಂಡನ್ನು ಹುಡುಕಿ ಅವಳಿಗೆ ಮದುವೆ ಮಾಡೋಣ. ಕನ್ಯಾದಾನದ ಪುಣ್ಯವಾದರೂ ಸಿಗಲಿ"

"ಈ ಪುಣ್ಯ ನಿಮ್ಮಮ್ಮನಿಗೆ ಸಿಗಲಿ ಅಂತ. ಯಾರನ್ನೋ ಮದುವೆ ಮಾಡ್ಕೋ ಅಂತ ನಾನು ಪಲ್ಲವಿಗೆ ಬಲವಂತ ಮಾಡುಕ್ಕೆ ಆಗುಲ್ಲ. ಅವಳಿಗೆ

ಮದುವೆಯ ಆಸೆಯೇ ಹೊರಟು ಹೋಗಿದೆ. ಅವಳ ಮನಸ್ಸಿಗೆ ನೋವನ್ನುಂಟು ಮಾಡುಲ್ಲ. ಈ ಮನೇಲಿ ಇನ್ನು ಒಬ್ಬಳು ಕನ್ಯೆ ಇದಾಳೆ. ಮಾಧವಿಗೆ ಮದುವೆ ಮಾಡು ಅಂತ ಶ್ರೀನಾಥನಿಗೆ ಹೇಳಿ. ಅವಳೂ ನಿಮ್ಮಮ್ಮನಿಗೆ ಮೊಮ್ಮಗಳೇ....."

"ಪಾಪ...... ಅದಿನ್ನು ಚಿಕ್ಕದು. ಇನ್ನೂ ಓದು ಮುಗಿದಿಲ್ಲ, ಇಷ್ಟು ಬೇಗ ಮದುವೆ ಮಾಡೋದಾ? ಬೇಡ....." ಅಡ್ಡಡ್ಡ ತಲೆಯಾಡಿಸಿದ.

"ಸರಿ ಯಾರು ಏನು ಬೇಕಾದ್ರೂ ಮಾಡ್ಕೊಳ್ಳಿ, ಇನ್ನು ಒಂದು ವರ್ಷ ಸಮಯ ಇದೆ. ಬೆಳಗ್ನಿಂದ ಓಡಾಡಿ ಸುಸ್ತಾಗಿದೆ. ಪಾಪ, ನಮ್ಮ ಮಕ್ಕಳನ್ನ ಸರಿಯಾಗಿ ವಿಚಾರಿಸಿಕೊಳ್ಳುಕ್ಕೆ ನನಗೆ ಆಗಲೇ ಇಲ್ಲ. ಹೋಗಿ ನೋಡ್ತೀನಿ. ನೀವು ಮಲಕ್ಕೊಳ್ಳಿ" ಎಂದು ಹೇಳಿ ಮಕ್ಕಳು ಇದ್ದಲ್ಲಿಗೆ ಬಂದಳು. ಮೂವರೂ ನಿದ್ದೆಯ ಆಳದಲ್ಲಿ ಮುಳುಗಿದ್ದರು. ಪಲ್ಲವಿಯ ಪಕ್ಕದಲ್ಲಿ ಇದ್ದ ಜಾಗದಲ್ಲಿ ತಾನೂ ಮಲಗಿ, ಹೊದಿಕೆಯನ್ನೆಳೆದುಕೊಂಡಳು.

ಪಲ್ಲವಿ, ಸಾಧಾರಣ ರೂಪಿನ ಹುಡುಗಿ. ಕನ್ನಡಕವನ್ನು ಧರಿಸುತ್ತಿದ್ದಳು. ಈಗ ಅವಳಿಗೆ ಮೂವತ್ನಾಲ್ಕು ವರ್ಷಗಳು ತುಂಬಿದ್ದವು. ಅವಳು ಡಿಗ್ರಿಯನ್ನು ಮುಗಿಸಿದಾಗ, ಅವಳ ಮದುವೆಗೆ ಆತುರವನ್ನು ತೋರಲಿಲ್ಲ. ಕನ್ನಡಕವನ್ನು ಧರಿಸಿದ, ಅವಳಿಗಿಂತ ರೂಪವಂತನಾದ ಗಂಡ ತನಗೆ ಸಿಗಲಿ ಎಂಬ ಬಯಕೆಯನ್ನು ಅವಳು ವ್ಯಕ್ತಪಡಿಸಿದ್ದಳು. ಆದರೆ, ಕನ್ನಡಕವನ್ನು ಧರಿಸುವ, ಸಾಧಾರಣ ರೂಪಿನ ಪಲ್ಲವಿಯನ್ನು, ಸಾಧಾರಣ ರೂಪದ ಹುಡುಗರೇ ಒಪ್ಪಿರಲಿಲ್ಲ.

ನಿರಾಸೆಗೊಂಡ ಪಲ್ಲವಿ, ಮದುವೆಯಾಗುವ ಆಸೆಯನ್ನೇ ಬದಿಗಿಟ್ಟು ಕೆಲಸಕ್ಕೆ ಸೇರಿಕೊಂಡಳು. ಒಂದು ಕಂಪೆನಿಯಲ್ಲಿ ಸ್ಟೆನೋ ಆಗಿ ಸೇರಿಕೊಂಡಳು. ಅವಳ ಖರ್ಚಿಗೆ ಆಗುವಷ್ಟೇ ಸಂಬಳ ಬರುತ್ತಿತ್ತು. ತನ್ನ ವೃತ್ತಿಯ ಕಡೆ ಗಮನವನ್ನು ಕೊಟ್ಟು, ಮದುವೆಯ ಬಗ್ಗೆ ನಿರಾಸಕ್ತಿಯನ್ನು ಹೊಂದಿದಳು. ಯಾರಾದರೂ ಆ ಬಗ್ಗೆ ಕೇಳಿದರೆ, ಉದಾಸೀನತೆಯ ಭಾವವನ್ನು ತೋರುತ್ತಿದ್ದಳು.

ಎರಡನೆಯವನು ಪ್ರಕಾಶ, ಪಲ್ಲವಿಗಿಂತ ನಾಲ್ಕು ವರ್ಷ ಚಿಕ್ಕವನು. ಎಂ.ಎಸ್ಸಿ.ಯನ್ನು ಪಾಸು ಮಾಡಿದ ನಂತರ, ಬೇರೆ ಊರಿನ ಕಂಪೆನಿಯೊಂದರಲ್ಲಿ ಕೆಮಿಸ್ಟ್ ಆಗಿ ನೇಮಕಗೊಂಡಿದ್ದ. ಅವನಿಗಾದರೂ ಮದುವೆ ಮಾಡಬೇಕೆಂಬ ಆಸೆ ವನಜಳಿಗೆ..... ಆದರೆ?

ಮೂರನೆಯವನು ಪ್ರಶಾಂತ, ಇಂಜಿನಿಯರಿಂಗ್ ಮುಗಿಸಿದ್ದರೂ ಸರಿಯಾದ ಕೆಲಸ ಸಿಗದ ಕಾರಣ ಅಲ್ಲಿ ಇಲ್ಲಿ ಕೆಲಸಕ್ಕಾಗಿ ಪರದಾಡುತ್ತಿದ್ದ.

ಇಂಟರ್‌ವ್ಯೂಗಳಿಗೆ ಹೋಗಿ ನಿರಾಸೆಗೊಂಡು ಹಿಂತಿರುಗುತ್ತಿದ್ದ.

ಗಂಡನಿಗೆ, ಮುಂದಿನ ವರ್ಷದ ಕೊನೆಯಲ್ಲಿ ರಿಟೈರ್ ಆಗುತ್ತದೆ. ಮುಂದೇನು ಎಂಬ ತೊಂದರೆ ಇಲ್ಲ. ಪೆನ್ಸನ್ ಬರುತ್ತದೆ. ಮಕ್ಕಳು ಸಂಪಾದಿಸುತ್ತಾರೆ. ಆದರೆ ಪಲ್ಲವಿಗೆ ಮದುವೆಯಾಗಲಿಲ್ಲವೆಂಬ ಕೊರಗು ನನಗಿದೆ, ನನ್ನ ಗಂಡನಿಗಿಲ್ಲವಲ್ಲ.... ನಿಟ್ಟುಸಿರನ್ನು ಚೆಲ್ಲಿ, ವನಜ ಮಗ್ಗುಲನ್ನು ಬದಲಾಯಿಸಿದಳು.

"ಭವಾನಿ ಪುರೋಹಿತರು ಹೇಳಿದ ಮಾತುಗಳನ್ನು ಕೇಳಿಸ್ಕೊಂಡ್ಯಾ? ಈ ವರ್ಷದೊಳಗೆ ಯಾವುದೇ ಪುಣ್ಯಕಾರ್ಯ ಮಾಡಿದರೂ, ಅದು ನಮ್ಮ ಅಮ್ಮನ ಸದ್ಗತಿಗೆ, ನಮ್ಮ ಶ್ರೇಯಸ್ಸಿಗೆ. ನಮಗೆ ಒಬ್ಬ ಹುಡುಗಿ ಇದ್ದಿದ್ದರೆ ಚೆನ್ನಾಗಿತ್ತು ಅಂತ ಈಗ ಅನ್ನಿಸ್ತಿದೆ. ಕನ್ಯಾದಾನ ಮಾಡುವ ಭಾಗ್ಯ ನಮಗಿಲ್ಲವಲ್ಲ ಅಂತ ಬೇಸರವಾಗ್ತಿದೆ" ರಮಾಕಾಂತ, ಹೆಂಡತಿಯ ಕಡೆ ನೋಡಿ ಪೇಚಾಡುತ್ತಾ ನುಡಿದ.

"ಆಗ ನಮಗೆ ನಾಲ್ಕು ಮಕ್ಕಳು ಅಂತ ಎಲ್ರೂ ಆಡ್ಕೋತಿದ್ರು. ಈಗ್ಲೇ ಮೂರು ಮಕ್ಕಳು ಜಾಸ್ತಿ ಅಂತ ಆಗ ಈಗ ಗೊಣಗ್ತಾನೇ ಇರ್ತೀರಿ. ಹೊತ್ತೋಳು ನಾನು; ಹೆತ್ತೋಳು ನಾನು, ಕಷ್ಟಪಟ್ಟು ಬೆಳೆಸಿದವಳು ನಾನು, ಹೆಣ್ಣಿಗೆ ಒದಗುವ ಕಷ್ಟಗಳು ಎಷ್ಟೊಂತ ನಂಗೊತ್ತು. ಮಗಳು ಇಲ್ಲದೇ ಇರೋದೇ ಒಳ್ಳೇದಾಯ್ತು ಚಿಂತೆ ತಪ್ಪಿತು"

"ಯಾಕೇ ಹಾಗಂತೀಯ? ಅಣ್ಣಂಗೆ, ಶ್ರೀನಾಥಂಗೆ ಹೆಣ್ಣುಮಕ್ಕಳು ಇದಾರಲ್ಲ. ಏನಾಗಿದೆ? ಕನ್ಯಾದಾನ ಎಲ್ಲಾ ದಾನಕ್ಕಿಂತ ಶ್ರೇಷ್ಠವಾದ ದಾನವಂತೆ. ಆ ಪುಣ್ಯ ನಮ್ಮ ಪಾಲಿಗಿಲ್ಲವಲ್ಲ. ಅದೇ ಬಾಧಿಸುತ್ತಿದೆ ನನ್ನನ್ನ"

"ಅದಕ್ಯಾಕೆ ಕೊರಗ್ತೀರಿ? ಪಲ್ಲವಿಗೂ, ಬೇಗ ಗಂಡು ಗೊತ್ತು ಮಾಡಿ, ಈ ವರ್ಷದಲ್ಲೇ ಮಾಡಿ ಅಂತ ನಿಮ್ಮಣ್ಣಂಗೆ ಹೇಳಿ. ಧಾರೆ ಎರೆಯುವಾಗ ನೀವೂ ಎರೆದರೆ ಆಯ್ತು. ನಿಮಗೂ ಕನ್ಯಾದಾನ ಮಾಡಿದ ಪುಣ್ಯ ಸಿಗುತ್ತೆ"

"ಅವಳಿಗೆ ವಯಸ್ಸು ಮೀರಿ ಹೋಗಿದೆಯಲ್ಲ. ಆಗಲೇ ಸುಲಭದಲ್ಲಿ ಗಂಡು ಗೊತ್ತಾಗ್ಲಿಲ್ಲ. ಈಗ ಆತುರದಲ್ಲಿ ಯಾವ ಗಂಡು ಸಿಗ್ತಾನೆ" ಅಣ್ಣ ಅತ್ತಿಗೆಯ ಮನಸ್ನಲ್ಲಿ ಏನಿದೆಯೋ? ಪಲ್ಲವೀನ ಬಲವಂತವಾಗಿ ಒಪ್ಪಿಸುಕ್ಕೆ ಆಗುಲ್ಲ. ಇದು ನಡೆಯದ ಮಾತು"

"ಹಾಗಾದರೆ ನಿಮ್ಮ ತಮ್ಮ ಶ್ರೀನಾಥಂಗೆ ಹೇಳಿ. ಮಾಧವಿಗೆ ಗಂಡನ್ನು ಹುಡುಕುಕ್ಕೆ ಶುರುಮಾಡ್ಲೀ.... ಅವಳು ಪಲ್ಲವಿಗಿಂತ ನೋಡೋಕೆ ಚೆನ್ನಾಗಿದಾಳೆ. ಅಲ್ಲದೇ ನಿಮ್ಮ ತಮ್ಮಂಗೇನು ಕಡಿಮೆ! ಅದ್ದೂರಿಯಾಗಿ ಮದುವೆ ಮಾಡ್ಕೊಡ್ತಾನೆ. ದಮ್ಮಯ್ಯಾ, ಅಂತ ಯಾರಾದ್ರೂ ಮದುವೆ ಮಾಡ್ಕೊಂಡು ಮನೆ ತುಂಬಿಸ್ಕೊಳ್ತಾರೆ. ಎಲ್ರೂ ಧಾರೆ ಎರೆದು ಕೊಟ್ಟರಾಯ್ತು. ಎಲ್ರಿಗೂ ಕನ್ಯಾದಾನದ

ಪುಣ್ಯ ಸಿಗುತ್ತೆ"

"ಅದಿನ್ನೂ ಚಿಕ್ಕದು ಕಣೇ. ಓದ್ತಾ ಇದೆ. ಈಗ್ಲಿಂದ ಸಂಸಾರದ ತಾಪತ್ರಯವನ್ನು ನಾವಾಗಿಯೇ ಯಾಕೆ ಹೊರಿಸ್ಬೇಕು! ನಾಲ್ಕೈದು ವರ್ಷ ಆರಾಮವಾಗಿರಲಿ"

"ಗೊತ್ತಾಯ್ತಾ? ಸಂಸಾರದಲ್ಲಿ ತಾಪತ್ರಯ ತುಂಬಿದೆ ಅಂತ. ನಾನೇನು ಕಮ್ಮಿ ಕಷ್ಟಪಟ್ಟಿದೀನಾ?" ವಕ್ರತುಟಿ ಮಾಡಿದಳು.

"ನಿಂಗೇನು ಕಡಿಮೆ ಮಾಡಿದೀನಿ ನಾನು? ನೀನು ಹೇಳಿದ ಹಾಗೆ ಕೇಳ್ತೀನಿ. ಅದು ಎಲ್ರಿಗೂ ಗೊತ್ತು. ನಾವೇ ಬೇರೆ ಸಂಸಾರ ಹೂಡಿದೀವಿ. ಅಮ್ಮಂಗೆ ಇಷ್ಟವಿಲ್ಲದಿದ್ರೂ ಬೇಡ ಅನ್ನಲಿಲ್ಲ. ಅವಳು ನೊಂದ್ಕೊಂಡಿದ್ಲು.

"ಅಮ್ಮಂಗೆ ಇಷ್ಟವಿರ್ಲಿಲ್ಲ. ಅವರ ಆತ್ಮಕ್ಕೆ ನೋವಾಗುತ್ತೆ ಅಂತ ಸಧ್ಯ ಈಗ ನಾವುಗಳು ಒಟ್ಟಿಗೇ ಇರೋಣ ಅಂತ ಹೇಳ್ಬಿಡ್ಬೇಡಿ."

"ಈಗ ಅಮ್ಮನ ಸೇವೆನೇನೂ ಮಾಡ್ಬೇಕಾಗಿಲ್ಲ. ಅಲ್ಲದೇ ಒಂದ್ಸಾರಿ ಬೇರೆ ಬಂದ್ಮೇಲೆ ಮತ್ತೆ ಒಟ್ಟಿಗೇ ಇರೋಕೆ ಹೇಗೆ ಸಾಧ್ಯ?"

"ಸಧ್ಯ ಅಷ್ಟಾದ್ರೂ ತಿಳೀತಲ್ಲ ನಿಮಗೆ. ಅದಿರ್ಲಿ, ಈ ಮೇಲಿನ ಮನೇನ ನಿಮ್ಮ ಹೆಸರಿಗೇ ಮಾಡಿಸ್ಕೊಂಡ್ಬಿಡಿ. ಮುಂದೆ ಏನಾದ್ರೂ ತಕರಾರು ಬಂದೀತು." ಎಚ್ಚರಿಕೆಯ ನುಡಿಗಳನ್ನು ನುಡಿದಳು.

"ತಕರಾರು ಯಾಕೆ ಬರುತ್ತೆ? ಅಂಥೋರು ಯಾರಿಲ್ಲ ಇಲ್ಲಿ"

"ಅಣ್ಣ ತಮ್ಮಂದಿರು, ನೀವು ಮೂರು ಜನ, ಮನೆ ಇರೋದು ಎರಡೇ, ಅವರೇ ಇಬ್ಬರೂ ಸೇರ್ಕೊಂಡು ನಿಮಗೆ ನಾಮ ಹಾಕಿಯಾರು...."

ಅವರಿಬ್ರೂ ಅಂಥೋರಲ್ಲ.

"ಯಾವ ಹುತ್ತದಲ್ಲಿ ಯಾವ ಹಾವಿದೆಯೋ? ಯಾರಿಗೆ ಗೊತ್ತು. ನಿಮ್ಮ ಅತ್ತಿಗೆ ಈ ಸಮಯ ಬಂದೀತೇ ಅಂತ ಕಾಯ್ತಿದ್ರು ಅಂತ ಕಾಣುತ್ತೆ. ನಿಮ್ಮ ಅತ್ತಿಗೆ, ನಿಮ್ಮ ನಾದಿನಿ ಒಂದಾಗಿ ಬಿಟ್ಟಿದಾರೆ. ಈಗಾಗ್ಲೇ ಗುಸು ಗುಸು ಪಿಸುಪಿಸು ಮಾತುಗಳನ್ನಾಡ್ತಿರ್ತಾರೆ."

"ಅತ್ತಿಗೆ ಅವರಿಬ್ರೂ ಒಳ್ಳೆಯವ್ರು. ನಾನು ಮಾತ್ರ ಕೆಟ್ಟೋಳು, ನಮಗೆ ಮೂರು ಜನ ಗಂಡುಮಕ್ಕಳು. ಅವರಿಗೆ ಎರೆಡೆರಡು ಅಷ್ಟೇ...!"

"ಹೆಣ್ಣು ಮಕ್ಕಳೂ ಇದಾರಲ್ಲ. ಅವರೇನು ಹೊರಗಿನವರೇ?"

"ಮದುವೆ ಆಗಿಲ್ಲವಲ್ಲ, ಅವಳು ವೃದ್ಧ ಕುಮಾರಿ. ಈ ಜನ್ಮದಲ್ಲಿ ಅವಳಿಗೆ ಮದುವೆ ಆಗುತ್ತೋ ಇಲ್ವೋ....!"

"ಹೀಗೆಲ್ಲಾ ಅಸಂಬದ್ಧ ಮತಾಡ್ಬೇಡ ಭವಾನಿ. ಈಗ ಮಲಕ್ಕೋ. ಹದಿನೈದು ದಿನಗಳಿಂದ ಸರಿಯಾಗಿ ನಿದ್ದೆ ಇಲ್ಲ. ನೀಂಗೂ ಆಯಾಸ ಆಗಿಲ್ಲದೇ ಇರುತ್ತಾ?"

"ನನ್ನ ನಿದ್ದೇನೇ ಹೊರಟುಹೋಯ್ತು" ಎಂದು ಗೊಣಗುತ್ತಾ ಪಕ್ಕದ ಹಾಸಿಗೆಯ ಮೇಲೆ ಉರುಳಿಕೊಂಡಳು.

* * *

"ಸುಗುಣಾ, ನಮ್ಮ ಮಾಧವಿಗೆ ಈಗ ಎಷ್ಟು ವರ್ಷ?" ಶ್ರೀನಾಥ ಇದ್ದಕ್ಕಿದ್ದಂತೆ ಮೌನವನ್ನು ಮುರಿದು ಕೇಳಿದಾಗ, ಸುಗುಣ ಕಿಸಕ್ಕನೆ ನಕ್ಕಳು.

"ಯಾಕ್ರೀ, ನಿಮ್ಮ ಮಗಳಿಗೆ ಎಷ್ಟು ವರ್ಷ ಅಂತ ನಿಮಗೇ ನೆನಪಿಲ್ವಾ?"

"ಎಷ್ಟೊ ಬೇಗ ಬೆಳೆದು ಬಿಟ್ಟಿದಾಳೆ ಅಲ್ವಾ. ಅದಕ್ಕೇ ಕೇಳಿದೆ, ಅವಳ ಮದುವೆ ಮಾಡುವವರೆಗೂ ಅಮ್ಮ ಬದುಕಿದ್ದಿದ್ರೆ ಚೆನ್ನಾಗಿರ್ತಿತ್ತು. ಅಮ್ಮಂಗೂ ಸಂತೋಷ ಆಗಿರ್ತಿತ್ತು."

"ಅವಳ ಓದು ಮುಗಿದ್ಮೇಲೆ ಮದುವೆ ಮಾಡೋದು ಅಂತ ಮಾತಾಡಿಕೊಂಡಿದ್ವು ಅಲ್ವಾ? ಹೀಗಾಗುತ್ತೆ ಅಂತ ಯಾರಿಗೆ ಗೊತ್ತಿತ್ತು?"

"ಅದೇನೋ ಸರಿ, ಪಲ್ಲವಿ ಥರ, ಯಾವ ಗಂಡನ್ನೂ ಒಪ್ಪದೇ, ಹಾಗೇ ಎಲ್ಲಿ ಉಳಿದು ಬಿಡ್ತಾಳೋ ಅಂತ ಆತಂಕವೂ ಆಗುತ್ತೆ.... ಅಣ್ಣನಿಗೆ ಅದೇ ಚಿಂತೆ ಇರ್ಬೇಕು, ಮಂಕಾಗಿ ಬಿಟ್ಟಿದಾನೆ"

"ಹಾಗ್ಯಾಕೆ ಆಗುತ್ತೆ? ಮಾಧವಿ ನನ್ನ ಮಗಳು, ನಾನು ಬೆಳೆಸಿರುವವಳು. ಪಲ್ಲವಿಯ ಥರ ಮೊಂಡು ಬುದ್ಧಿಯವಳಲ್ಲ. ನಾವು ನೋಡಿದ ಹುಡುಗನನ್ನು ಕಣ್ಣುಮುಚ್ಚಿ ಮದುವೆ ಆಗ್ತಾಳೆ. ಯಾವ ಪ್ರತಿಷ್ಠೆಯೂ ಇಲ್ಲ, ನನ್ನ ಮಗಳಿಗೆ" ಹೆಮ್ಮೆಯಿಂದ ಹೇಳಿದಳು.

"ನಂಗೊಂದು ಆಸೆ ಸುಗುಣ, ಆದರೆ ನೀನೇನಂತೀಯೋ?" ಸಂದೇಹವನ್ನು ವ್ಯಕ್ತಪಡಿಸಿ ಅವಳ ಕಡೆ ನೋಡಿದ.

"ನಿಮ್ಮಾಸೆ ಏನು ಅಂತ ನಾನು ಹೇಳ್ಲಾ? ನಾನೂ ಅದರ ಬಗ್ಗೇನೇ ಯೋಚಿಸದ್ತಿದ್ದೆ. ಓದು ಮುಗಿದಿದ್ರೆ, ಈ ವರ್ಷದೊಳಗೆ ಮದುವೆ ಮಾಡಬಹುದಾಗಿತ್ತು. ಕನ್ಯಾದಾನ ಮಾಡಿದ ಶ್ರೇಯಸ್ಸು ನಮಗೆ ಸಿಗುತ್ತಿತ್ತು. ನಿಮ್ಮ ತಾಯಿಗೆ ಸದ್ಗತಿ ದೊರಕುತ್ತಿತ್ತು. ಇದೇ ಆಸೆ ತಾನೇ ನಿಮ್ಮದು?" ಮುಗುಳ್ನಕ್ಕು ಕೇಳಿದಳು.

"ಹೌದು ಸುಗುಣಾ ಇದೇ ನನ್ನಾಸೆ. ನೀನು ನನ್ನ ಧರ್ಮಪತ್ನಿಯಾಗಿದ್ದಕ್ಕೂ ಸಾರ್ಥಕ. ನನ್ನನ್ನು ಎಷ್ಟು ಚೆನ್ನಾಗಿ ಅರ್ಥ ಮಾಡ್ಕೊಂಡಿದೀಯಲ್ಲ" ಹೊಗಳಿದ.

"ಹೊಗಳಿದ್ದು ಸಾಕು. ಇನ್ನೆರಡು ವರ್ಷಗಳನ್ನು ಬಿಟ್ಟು ನಿಮ್ಮ ಮಗಳಿಗೆ ಮದುವೆ ಮಾಡಿದರಾಯ್ತು, ಈ ವರ್ಷದಲ್ಲಿ ಗೋದಾನ ಮಾಡೋಣ. ಅದೂ ಶ್ರೇಷ್ಠವಾದ ದಾನವೇ"

"ಅನಂತ, ರಮಾಕಾಂತ ಹಣಕಾಸಿನ ವಿಷಯವನ್ನು ಮಾತಾಡುಕ್ಕೆ

ಮುಜುಗರವಾಗುತ್ತೆ. ಅವನದ್ದು ರಿಟೈರ್ ಆಗುವ ವಯಸ್ಸು, ಅವನದ್ದೂ ದೊಡ್ಡ ಸಂಸಾರವೇ. ಪ್ರಕಾಶ ಬೇರೆ ಊರ್ನಲ್ಲಿದಾನೆ. ಪ್ರಶಾಂತನಿಗೆ ಕೆಲಸ ಸಿಕ್ಕಿಲ್ಲ. ಪಲ್ಲವಿಗೆ ಮದುವೆ ಆಗಿಲ್ಲ. ಅವನ ಪ್ಲಾನ್‌ಗಳು ಏನಿದೆಯೋ ಏನೋ! ಈಗಾಗ್ಲೇ, ಎಲ್ಲರಿಗೂ ಸಾಕಷ್ಟು ಖರ್ಚಾಗಿದೆ. ಅವನು ಅನುಮಾನಿಸಿದರೆ?"

"ರಮಾಕಾಂತ ಭಾವನ್ನ ಕೇಳಿ"

"ಅತ್ತಿಗೆ ಒಪ್ಪಬೇಕಲ್ಲ, ಅವರ ಒಪ್ಪಿಗೆ ಇಲ್ಲದೇ ಅಣ್ಣ ಹೂಂ ಎನ್ನುವುದಿಲ್ಲ. ಈಗ ಅವರ ಮಕ್ಕಳೂ ಬೆಳೆದಿದಾರೆ. ಅವರೆಲ್ಲರೂ ಒಂದು ರಮಾಕಾಂತಣ್ಣನಿಗೆ ಬೇಸರವಾಗುವಂತೆ ಮಾತಾಡಿದರೆ?"

"ಅವರುಗಳ್ಯಾರಿಗೂ ತಿಳಿಯದಂತೆ ಮಾತಾಡಿ. ಅವರುಗಳು ಬೇರೆ ಸಂಸಾರ ಹೂಡಿ, ಎಷ್ಟೋ ವರ್ಷಗಳಾಗಿವೆ. ಬಾಡಿಗೆಯ ಖರ್ಚಿಲ್ಲ, ತಂದೆ ಮಗನ ಸಂಪಾದನೆಯೂ ಚೆನ್ನಾಗಿದೆ. ಸೇವಿಂಗ್ಸ್ ಚೆನ್ನಾಗಿಯೇ ಇರುತ್ತೆ"

"ನೀನೇ ಸಮಯ ನೋಡಿ, ಅತ್ತಿಗೆಯ ಹತ್ರ ಯಾಕೆ ಮಾತಾಡ್ಬಾರ್ದು?"

ನಾನು ಮಾತಾಡಿದ್ರೆ ಅಧಿಕಪ್ರಸಂಗಿತನ ಅಂತ ಅಂದ್ಕೋತಾರೆ. ಅಕ್ಕ ಭಾವನಿಗೆ ಹೇಳದೇ ಸುಮ್ಮನಿದ್ದು ಬಿಡಬಹುದು"

"ಹೌದು ಅತ್ತಿಗೆ ಹಾಗೇ ಮಾಡಲೂಬಹುದು. ಸರಿ ನಾನೇ ಸಮಯ ನೋಡಿ, ಅಣ್ಣಂದಿರ ಹತ್ರ ಮಾತಾಡ್ತೀನಿ. ಈಗ ಮಾತು ಸಾಕು, ಮಲಗೋಣ. ಬೆಳಗ್ನಿಂದ ಓಡಾಡಿ ಓಡಾಡಿ ನಿಂಗೆ ಸುಸ್ತಾಗಿಲ್ವಾ?"

"ಸುಸ್ತಾಗಿದೆ. ಆದರೆ, ನೀವು ಮಾತಿಗೆ ಸಿಕ್ಕೇ ಇರ್ಲಿಲ್ಲ. ಸಧ್ಯ ಎಲ್ಲಾ ಕಾರ್ಯವೂ ಲೋಪವಿಲ್ಲದೇ ನಡೀತಲ್ಲ. ಅತ್ತೆಯವರ ಆತ್ಮಕ್ಕೆ ತೃಪ್ತಿ ಆಗಿರಲೇಬೇಕು. ಇದನ್ನು ಕಂಡೇ ಶಾಸ್ತ್ರಿಗಳು ದಾನಗಳ ಮಹತ್ವವನ್ನು ತಿಳಿಸಿದ್ದು"

"ಹೌದು, ಯಾವುದಕ್ಕೂ ಕಡಿಮೆ ಮಾಡಲಿಲ್ಲ. ಆದರೂ, ಅಮ್ಮ, ಇನ್ನೂ ಒಂದೆರಡು ವರ್ಷಗಳು ಬದುಕಿದ್ದಿದ್ರೆ ಚೆನ್ನಾಗಿರ್ತಿತ್ತು. ಒಂದಾದ್ರೂ ಮರಿ ಮಗುವಿನ ಮುಖವನ್ನು ನೋಡಬೇಕಾಗಿತ್ತು"

"ಅದು ನಮ್ಮ ಕೈಲಿದೆಯಾ? ಪಲ್ಲವಿಗೆ ಸರಿಯಾದ ವಯಸ್ನಲ್ಲಿ ಮದುವೆ ಆಗಿದ್ದಿದ್ರೆ, ಅವಳಿಗೆ ಎರಡು ಮಕ್ಕಳಾಗಿರ್ತಿದ್ವು, ಪ್ರಕಾಶನಿಗೂ ಮದುವೆಯಾಗಿ, ನಿಮ್ಮ ಅಣ್ಣ ತಾತ ಆಗಿರುತ್ತಿದ್ದು, ನಿಮ್ಮಮ್ಮ ಮುತ್ತಜ್ಜಿ ಆಗಿರುತ್ತಿದ್ರು"

"ಏನ್ಮಾಡೋದು! ಪಲ್ಲವಿಗೆ ಕಂಕಣ ಬಲ ಒದಗಿಬಂದಿಲ್ಲ, ನಾವು ನಮ್ಮ ಮಾಧವಿಗೆ ಆದಷ್ಟು ಬೇಗ ಮದುವೆ ಮಾಡಿಬಿಡೋಣ, ಮುಂದೆ ಮುಂದೆ ತಳ್ಳುವುದು ಬೇಡ"

"ಆಗಲಿ ಈ ವರ್ಷ ಕಳೆಯಲಿ. ಯಾವ ಗಂಡು ಮಕ್ಕಳಿಗೂ ಈ ವರ್ಷ ಮದುವೆ ಮಾಡುವಂತಿಲ್ಲ. ಪಲ್ಲವಿಯ ಮದುವೆ ಈ ವರ್ಷದಲ್ಲಿ

ಆಗುತ್ತೋ ಇಲ್ವೋ. ಹೇಗೆ ಹೇಳೋದು! ಕಾಲಿನ ಬಳಿ ಇದ್ದ ಹೊದ್ದಿಕೆಯನ್ನು ಮೈ ಮೇಲೆ ಎಳೆದುಕೊಂಡು ಮಲಗಿದಳು.

"ಮಕ್ಕಳು ಮಲಗಿದ್ರಾ...?"

"ಮಲಗಿರಬಹುದು. ಹದಿನೈದು ದಿನಗಳಿಂದ ಮಕ್ಕಳನ್ನು ವಿಚಾರಿಸುಕ್ಕೆ ಆಗಿಲ್ಲ. ಕಾಲೇಜಿಗೆ ಸರಿಯಾಗಿ ಹೋಗ್ತಿದಾಳೊ ಇಲ್ಲವೋ ಅದೂ ಕೂಡಾ ಗೊತ್ತಿಲ್ಲ. ಇನ್ನು ಆನಂದ, ಮುಕುಂದರೋ, ಆಟ ಆಡ್ಕೊಂಡು ಕಳೀತಿದಾರೋ, ಪರೀಕ್ಷೆಗೆ ತಯಾರಿ ನಡೆಸ್ತಿದಾರೋ, ಅದನ್ನು ವಿಚಾರಿಸುಕ್ಕೇ ಆಗ್ಲಿಲ್ಲ. ಇನ್ಮುಂದೆ ಮಕ್ಕಳ ಕಡೆ ಹೆಚ್ಚು ಹೆಚ್ಚು ಗಮನ ಕೊಡ್ಬೇಕು...."

"ಹೌದು ಮಕ್ಕಳಿಗೆ ಯಾವುದೇ ರೀತಿಯಲ್ಲಿ ಉದಾಸೀನ ಬರಬಾರ್ದು. ಅದ್ರಲ್ಲೂ ಮಾಧವಿಗೆ. ತನ್ನನ್ನು ಯಾರೂ ವಿಚಾರಿಸ್ತಿಲ್ಲ, ಅಂತನ್ನಿಸಬಾರ್ದು. ಅವಳಿಗೂ ಪಲ್ಲವಿಗೂ ವಯಸ್ಸಿನ ಅಂತರ ಜಾಸ್ತಿ. ಉಳಿದವರು ಬರೀ ಗಂಡು ಹುಡುಗರು, ಅವರುಗಳ ಮನಸ್ಸು ಹುಡುಗಿಯರ ಮನಸ್ಸಿನಂತೆ ಸೂಕ್ಷ್ಮವಾಗಿರುಲ್ಲ. ಆನಂದ, ಮುಕುಂದರು ಒಬ್ಬರಿಗೊಬ್ಬರು ಸ್ನೇಹಿತರಂತೆ ಇರುತ್ತಾರೆ. ಮಾಧವಿ ಒಂಟಿಯಾಗಿ ಕಾಲ ಕಳೆಯೋದು ಅಂದ್ರೆ, ಅವಳಿಗೆ ಎಷ್ಟು ಬೇಸರವಾಗಿರುತ್ತೋ, ಇನ್ಮುಂದೆ ಅವಳ ಕಡೆ ಹೆಚ್ಚು ಗಮನಕೊಡು. ನಮ್ಮ ಮಗಳು ಪಲ್ಲವಿಯಂತೆ ಮೂಡಿಯಾಗಬಾರ್ದು. ಆಮೇಲೆ ಅವಳಿಗೇ ಕಷ್ಟ..." ಎನುತ್ತಾ ರೂಮಿನ ದೀಪವನ್ನಾರಿಸಿ, ಮಂಚದ ಮೇಲೆ ಮಲಗಿಕೊಂಡ.

ತಾಯಿಯೊಡನೆ ಕಳೆದ, ಬಾಲ್ಯದ, ಯೌವನದ ದಿನಗಳು, ನೆನಪಿಗೆ ಬಂದವು.

ತಂದೆಗೆ ಮಕ್ಕಳೊಡನೆ ಬೆರೆಯಲು ಹೆಚ್ಚು ಸಮಯ ಇರುತ್ತಿರಲಿಲ್ಲ. ದೊಡ್ಡವನಾದರೂ, ತಾಯಿಯ ಹಿಂದೆ ತಿರುಗುತ್ತಿದ್ದ. ತಾಯಿ ಗೇಲಿ ಮಾಡುತ್ತಿದ್ದಳು. "ನೀನು ಹೀಗೆ ಇದ್ದರೆ ನಿನ್ನ ಹೆಂಡ್ತಿ ಏನಂದ್ಕೊಳ್ತಾಳೆ! ಕೋಪ ಮಾಡ್ಕೊಂಡು ತವರಿಗೆ ಹೊರಟುಹೋಗ್ತಾಳೆ"

"ಅಂಥಾ ಹೆಂಡ್ತಿ ನಂಗೆ ಬೇಡ್ವೇ ಬೇಡ. ನನ್ನನ್ನೂ ನಿನ್ನನ್ನೂ ಅರ್ಥ ಮಾಡ್ಕೊಂಡು ತಾನೂ ಖುಷಿಯಾಗಿದ್ದುಕೊಂಡು, ನಮ್ಮನ್ನು ಖುಷಿಯಾಗಿಟ್ಕೊಳ್ಳುವಂಥವಳೇ ಬೇಕು. ಇಲ್ಲದಿದ್ರೆ ನಂಗೆ ಮದುವೆಯೇ ಬೇಡ" ತಾಯಿಯ ಸೀರೆಯ ಸೆರಗಿನ ತುದಿಯನ್ನು ಬೆರಳಿಗೆ ಸುತ್ತಿಕೊಳ್ಳುತ್ತಾ ನುಡಿದ. ತಾಯಿ ಸೆರಗನ್ನು ಬಿಡಿಸಿಕೊಂಡಳು.

"ಇನ್ನಾದ್ರೂ ಬೆಳೆಯೇ ಮಗನೇ, ನಾನು ಇನ್ನೆಷ್ಟು ವರ್ಷಗಳು ಬದುಕಿರ್ತೀನಿ? ನಿಮ್ಮ ತಂದೆ ಅಲ್ಲಿ ಒಂಟಿಯಾಗಿದಾರೆ" ತಾಯಿ ಹಾಗೆ ಹೇಳುವಾಗ ಮನಸ್ಸು ಮುದುಡುತ್ತಿತ್ತು.

"ಅಪ್ಪಂಗೆ ಗೊತ್ತಮ್ಮ ಇಲ್ಲಿ ನಮಗೆ ನಿನ್ನ ಅಗತ್ಯವಿದೆ. ನೀನು ಇಲ್ಲದೆ ನಾವು ಹೇಗೆ ಇರುಕ್ಕೆ ಆಗುತ್ತೇ?"

"ಹುಚ್ಚಾ, ನೋಡ್ತಿರು. ನಿನ್ನ ಹೆಂಡ್ತಿ ಬಂದ್ಮೇಲೆ, ಈಗಿನಂತೆ ನನ್ನ ಅಗತ್ಯ ನಿನಗೆ ಇರುಲ್ಲ. ನಿನ್ನ ಅಣ್ಣಂದಿರು, ನನ್ನತ್ರ ಮಾತನಾಡೋದಕ್ಕೆ ಸಮಯವಿಲ್ಲದಂತೆ. ಹೆಂಡ್ತಿ ಮಕ್ಕಳು ಅಂತ ಅದರಲ್ಲೇ ತಲ್ಲೀನರಾಗಿ ಬಿಡ್ತಾರೆ. ಅದೇ ಪ್ರಪಂಚ..."

"ಹಾಗಾದ್ರೆ ನಂಗೆ ಮದ್ವೇನೇ ಬೇಡ" ಹಾಗೆ ಅವನು ಹೇಳಿದ್ದರೂ, ಅವನ ಮದುವೆ ಸುಗುಣಳೊಂದಿಗೆ ನೆರವೇರಿತ್ತು. ಒಂದು ವರ್ಷದೊಳಗೆ ತಂದೆಯೂ ಆಗಿದ್ದ. ಮಾಧವಿ ಅಜ್ಜಿಗೆ ನೆಚ್ಚಿನ ಮೊಮ್ಮಗಳು. ಅಜ್ಜಿಯ ತೊಡೆಯ ಮೇಲೆ ಮಲಗಿ, ಮುದ್ದು ಮಾಡಿಸಿಕೊಂಡು ಬೆಳೆದಳು. ಅಮ್ಮನಿಗೆ ನಾನು ಮುದ್ದಿನ ಮಗ, ಸುಗುಣ ಮುದ್ದಿನ ಸೊಸೆ. ಮಾಧವಿ ಮುದ್ದಿನ ಮೊಮ್ಮಗಳು. ಶ್ರೀನಾಥನಿಗೆ ತನ್ನ ಸಂಸಾರದ ಬಗ್ಗೆ ಒಲವು ಹೆಚ್ಚಾಗಿತ್ತು. ಅಮ್ಮ ನಮ್ಮನ್ನೆಲ್ಲಾ ಎಷ್ಟು ಪ್ರೀತಿಸುತ್ತಿದ್ದಳು? ಅಮ್ಮನ ನೆನಪಿನಲ್ಲಿ ಕಣ್ಣುಗಳು ಒದ್ದೆಯಾದವು. ಅಮ್ಮ ಇನ್ನು ಬರೀ ನೆನಪು ಅಷ್ಟೇ ಎಂದು ಹೇಳಿಕೊಂಡು ಮಲಗಲು ಪ್ರಯತ್ನಿಸಿದ.

* * *

ರಮಾಕಾಂತ, ಭವಾನಿ ಹೊರಗೆ ಹೋಗಿದ್ದ ಸಮಯದಲ್ಲಿ ಕೆಳಗಿನ ಮನೆಗೆ ಬಂದ. ಅಲ್ಲಿ ಅನಂತನೂ ಕುಳಿತಿದ್ದ. "ನೀನೂ ಇಲ್ಲೇ ಇದೀಯಾ? ಒಳ್ಳೇದೇ ಆಯ್ತು" ಎನ್ನುತ್ತಾ ಖುರ್ಚಿಯ ಮೇಲೆ ಕುಳಿತ "ಶಾಸ್ತ್ರಿಗಳು ದಾನಗಳ ಬಗ್ಗೆ ಹೇಳಿದ್ರಲ್ಲ, ನೀವುಗಳು ಏನು ತೀರ್ಮಾನ ತಗೊಂಡ್ರೀ?" ಕೇಳಿದ.

"ಯಾವ ದಾನದ ಬಗ್ಗೆ ಕೇಳ್ತಿದೀಯಾ?" ಸಂದೇಹದಿಂದ ಕೇಳಿದ.

"ಕನ್ಯಾದಾನ, ಭೂದಾನ, ಗೋದಾನ, ಸುವರ್ಣದಾನ ಇತ್ಯಾದಿ... ಯಾವ್ಯಾವಾಗ ಯಾವ ದಾನ ಕೊಡ್ಬೇಕು ಅಂತ ಒಂದು ತೀರ್ಮಾನಕ್ಕೆ ಬಂದರೆ ಒಳ್ಳೇದಲ್ವಾ? ಅದಕ್ಕೇ ಕೇಳಿದೆ" ಇಬ್ಬರ ಕಡೆಗೂ ನೋಡಿದ.

ಈ ವರ್ಷದಲ್ಲಿ ಮಾಧವಿಗೆ ಮದುವೆ ಮಾಡುವ ಆಲೋಚನೆ ನಮಗಿಲ್ಲ. ಅವಳಿನ್ನು ಚಿಕ್ಕವಳು. ಅಲ್ಲದೇ ಅವಳು ಓದು ಮುಗಿಸಿಲ್ಲ.

"ಪಲ್ಲವಿಗೆ ಮಾಡಬಹುದಲ್ಲ, ಆ ಬಗ್ಗೆ ಯೋಚಿಸಿದೀಯಾ ಅನಂತಣ್ಣ?"

"ಇಲ್ಲ, ಈವರೆಗೆ ಯಾವ ಗಂಡು ಸಿಗ್ಲಿಲ್ಲ. ಈಗ ವರ್ಷದೊಳಗೇ ಗಂಡು ಸಿಕ್ಕಿ ಮದುವೆ ಆಗಿ ಬಿಡುತ್ತೆ ಅಂತ ನಾನು ಹೇಗೆ ಹೇಳ್ಲಿ? ಪಲ್ಲವಿ ಒಪ್ಪಬೇಕಲ್ಲ? ಮಗಳ ಮೇಲೆ ನೆವವನ್ನು ತಳ್ಳಿದ.

"ಸರಿ ಬಿಡು ಕನ್ಯಾದಾನದ ವಿಷಯ ಇಲ್ಲ ಅಂತಾಯ್ತು, ಗೋದಾನವನ್ನು ಮಾಡಬಹುದಲ್ಲ" ತನ್ನ ಮನಸ್ಸಿನಲ್ಲಿದ್ದುದನ್ನು ಹೊರಹಾಕಿದ.

"ಆ ಆಲೋಚನೆ ನನಗೂ ಇದೆ. ಆದರೆ ನೀವಿಬ್ರೂ ಏನಂತೀರೋ ಅಂತ ನಾನು ಸುಮ್ಮನಿದ್ದೆ"

"ಯಾಕೆ? ಏನು ಸಮಸ್ಯೆ?"

"ಇನ್ನೇನು ಸಮಸ್ಯೆ? ನನಗೆ ಹಣದ್ದೇ ಸಮಸ್ಯೆ ನನ್ನ ಹತ್ತಿರ ಹಣ ಇಲ್ಲ ಎಷ್ಟು ಖರ್ಚಾಗುತ್ತೋ ಏನೋ.... ಈಗಾಗ್ಲೇ ನಿಮ್ಮಿಬ್ಬರಿಗೂ ಸಾಕಷ್ಟು ಖರ್ಚಾಗಿದೆ"

"ಖರ್ಚು ಅಂತ ಯೋಚಿಸಿದ್ರೆ ಆಗುತ್ತಾ ಅಣ್ಣಾ? ಗೋದಾನ ಒಂದ ನ್ನಾದ್ರೂ ಮಾಡೋಣ. ಇದರಿಂದಾದ್ರೂ ಅಮ್ಮನಿಗೆ ಸದ್ಗತಿ ಸಿಗ್ಲಿ. ಶೇಷಮ್ಮನವರಿಗೆ, ಮೂರು ಜನ ಶೂರರಂತಹ ಗಂಡು ಮಕ್ಕಳು. ದಾನ ಕೊಡುವ ಸಮಯದಲ್ಲಿ ಚೌಕಾಸಿ ಮಾಡಿಬಿಟ್ಟರು ಅಂತ ನೆಂಟರಿಷ್ಟರು ಆಡ್ಕೊಳ್ಳೋಕೆ ಆಸ್ಪದ ಕೊಡಬಾರದು ನಾವುಗಳು. ರಮಾಕಾಂತ, ಇಬ್ಬರ ಕಡೆಯೂ ಎರಡೆರಡು ಸಾರಿ ನೋಡಿ ಮತ್ತೆ ಮುಂದುವರೆಸಿದ ನೆಂಟರಿಷ್ಟರಿಗೂ ಗೊತ್ತಾಗಲಿ, ನಮಗೆ ಏನೂ ಕಡಿಮೆ ಇಲ್ಲ ಅಂತ..." ತನ್ನ ನುಡಿಗೆ ತಾನೇ ಹೆಮ್ಮೆಯಿಂದ ಬೀಗಿದ.

"ಅವರಿವರನ್ನು ಮೆಚ್ಚಿಸೋಕೆ ನಾವುಗಳು, ದಾನಧರ್ಮ ಕೊಡಬೇಕಾಗಿಲ್ಲ.... ನಮ್ಮ ಶ್ರದ್ಧೆ, ನಮ್ಮ ಕರ್ತವ್ಯಕ್ಕೆ ಅನುಗುಣವಾಗಿ ಮಾಡಬೇಕು. ಅಲ್ಲದೇ ಇನ್ನು ಎಂಟು ಹತ್ತು ತಿಂಗಳು ಸಮಯವಿದೆಯಲ್ಲ, ಅಮ್ಮನ ಆತ್ಮಕ್ಕೂ ನಮ್ಮ ಪರಿಸ್ಥಿತಿ, ಸ್ಥಿತಿ ಗತಿಗಳ ಬಗ್ಗೆ ಅರಿವಿರುತ್ತೆ. ಆತುರವನ್ನೇನೂ ಪಡಿಸುವುದಿಲ್ಲ" ಅನಂತ ತನ್ನ ಜಾಣತನವನ್ನು ನುಡಿಗಳಲ್ಲಿ ತೋರಿಸಿ, ಹಲ್ಲುಗಳು ಕಾಣದಂತೆ, ಮುಚ್ಚಿದ ತುಟಿಗಳ ನಡುವೆ ನಗುವನ್ನು ತೋರಿಸಿದ.

"ಸರಿಯಪ್ಪಾ.... ನಾನೂ ಅಮ್ಮನಿಗೆ ಮಗನೇ ಆದುದರಿಂದ ಹೇಳಿದೆ. ನನಗೇನಾದರೂ, ಒಬ್ಬಳು ಮದುವೆ ವಯ್ಸಿಗೆ ಬಂದ ಮಗಳಿದ್ದಿದ್ದರೆ, ಮದುವೆಯ ತಯಾರಿ ನಡೆಸ್ತಿದ್ದೆ" ರಮಾಕಾಂತ ಮಾತಿನಲ್ಲಿ ತನ್ನ ಪಟ್ಟನ್ನು ಬಿಡಲು ಸಿದ್ಧನಿರಲಿಲ್ಲ.

"ಏನು ನಿನ್ನ ಮಾತಿನ ಅರ್ಥ? ನಿನಗೆ ಹೆಣ್ಣು ಮಗಳಿಲ್ಲ, ಅದಕ್ಕೇ ಸಲೀಸಾಗಿ ಹೀಗೆ ಮಾತಾಡ್ತೀಯ... ನಿನಗೆ ಕನ್ಯಾದಾನದ ಚಿಂತೆ ಯಾಕೆ? ಬಿಡು" ಶ್ರೀನಾಥ ನುಡಿದ.

"ನಮ್ಮ ಮನೇಲಿ ಇಬ್ಬಿಬ್ಬರು ಕನ್ಯೆಯರಿದ್ದಾರೆ.... ಆದರೂ, ಅಮ್ಮ ಸತ್ತ ವರ್ಷದಲ್ಲಿ ಕನ್ಯಾದಾನ ಮಾಡುಕ್ಕೆ ಯಾಕೆ ಅಡಚಣೆ ಅಂತ ಯೋಚಿಸ್ತಿದ್ದೆ.

ನಿಮ್ಮಿಬ್ಬರಿಗೂ ನನ್ನ ಥರ ಅನ್ನಿಸ್ತಿಲ್ಲ ಯಾಕೆ? ಅಮ್ಮನ ಸದ್ಗತಿಗಾಗಿ ಮಾಡುವ ವಿಷಯ ಇದು ಅಷ್ಟೇ..."

"ಅನ್ನಿಸೋದು ಬೇರೆ, ನಡೆಯೋದು ಬೇರೆ ರಮಾಕಾಂತ. ಅಮ್ಮ ಇಷ್ಟು ಬೇಗ ಸತ್ತು ಹೋಗ್ತಾಳೆ ಅಂತ ನಾವೇನಾದ್ರೂ ಅಂದ್ಕೊಂಡಿದ್ವಾ! ಅಮ್ಮನ ಅಗಲಿಕೆಯ ದುಃಖವೇ ಇನ್ನು ಕಡಿಮೆ ಆಗಿಲ್ಲ.... ನಮ್ಮ ನಮ್ಮ ಮಾತಿನಲ್ಲಿ ಭಿನ್ನಾಭಿಪ್ರಾಯ ಬರೋಕೆ ಪ್ರಾರಂಭವಾದರೆ, ಹೊರಗಿನವರು ಅದರ ದುರುಪಯೋಗವನ್ನು ಪಡೆದುಕೊಳ್ತಾರೆ. ನಾವು ಮೊದಲಿನಂತೆಯೇ ಒಗ್ಗಟ್ಟಾಗಿರಲು ಪ್ರಯತ್ನಿಸೋಣ. ಅದು ಮುಖ್ಯ" ಅನಂತ ಗಂಭೀರವಾಗಿ ಹೇಳಿದ.

"ಮೊದಲು ತಾನೇ ಎಲ್ಲಿ ಒಗ್ಗಟ್ಟಾಗಿದ್ವಿ? ಅಮ್ಮನಿಗೆ ಆ ಕೊರಗು ಇರಲಿಲ್ವಾ? ಈಗ ನಮ್ಮ ನಮ್ಮ ಸಂಸಾರವೂ ಬೆಳೆದಿದೆ. ಭಿನ್ನಾಭಿಪ್ರಾಯ ಬಂದೇ ಬರುತ್ತೆ. ಭಾಗ ಮಾಡಿಕೊಳ್ಳೋಣ, ಆಗ ನಮ್ಮ ಮಧ್ಯೆ ವಿರಸ ಮೂಡುವುದಿಲ್ಲ" ರಮಾಕಾಂತನೆಂದ.

"ಇಷ್ಟು ಬೇಗ? ವರ್ಷವಾದ್ರೂ ಕಳೀಲಿ ಅವಸರ ಏನು?"

"ಅವಸರ ಏನಿಲ್ಲ ಮಾತು ಮಾತಿಗೆ ಹೇಳಿದೆ ಅಷ್ಟೇ. ಬೇಜಾರು ಮಾಡ್ಕೋಬೇಡಿ ಒಂದಲ್ಲ ಒಂದು ದಿನ ಅದೂ ಇತ್ಯರ್ಥವಾಗಬೇಕಾದ ವಿಷಯವೇ. ನಾನು ಗೋದಾನಕ್ಕೆ ವ್ಯವಸ್ಥೆ ಮಾಡ್ತೀನಿ. ಯಾವುದಾದರೂ ಗೋವು ಸಂರಕ್ಷಣಾ ಕೇಂದ್ರದಲ್ಲಿ ವಿಚಾರಿಸ್ತೀನಿ. ಒಳ್ಳೆಯ ತಳಿಯನ್ನು ಖರೀದಿಸಿ ಆಶ್ರಮದವರಿಗೆ ದಾನ ಮಾಡೋಣ" ಶ್ರೀನಾಥ, ಅನಾವಶ್ಯಕ ಚರ್ಚೆಯನ್ನು ತುಂಡರಿಸುವಂತೆ ಹೇಳಿದ.

"ಒಂದ್ಮಾತು ಶ್ರೀನಾಥ. ಗೋದನಾಕ್ಕೆ ತಗಲುವ ಖರ್ಚು ವೆಚ್ಚ ನನಗಿರಲಿ. ಅಮ್ಮನ ಹೆಸರಿನಲ್ಲಿ ಗೋದಾನ ಮಾಡುವ ಪುಣ್ಯದ ಫಲ ನನಗೆ ಸಿಗಲಿ"

"ಯಾಕಪ್ಪಾ ಅಷ್ಟು ಸ್ವಾರ್ಥತನ ನಿನಗೆ?" ಶ್ರೀನಾಥನ ದನಿಯಲ್ಲಿ ವ್ಯಂಗ್ಯವಿತ್ತು.

"ನಿಮ್ಮಿಬ್ಬರಿಗೂ ಕನ್ಯಾದಾನ ಮಾಡುವ ಯೋಗ, ಭಾಗ್ಯ ಎರಡೂ ಇದೆ. ಆ ಭಾಗ್ಯ ನಮಗಿಲ್ಲ. ನಮ್ಮಿಬ್ಬರಿಗೂ ಅದೇ ಕೊರಗು. ಅದಕ್ಕೇ ಹೇಳಿದೆ..."

"ಸರಿ ನಿನ್ನಿಷ್ಟ. ಆದರೆ, ಅತ್ತಿಗೆಯ ಹತ್ತಿರ ಮೊದಲು ಮಾತಾಡಿ ನಂತರ ಈ ನಿರ್ಧಾರಕ್ಕೆ ಬಾ. ಆಮೇಲೆ ನಿಷ್ಠುರದ ಮಾತುಗಳು ಬರಬಾರದು. ಹಾಗೇ ನಿನ್ನ ನಿರ್ಧಾರವನ್ನು ಬದಲಾಯಿಸುವಂತಾಗಬಾರದು."

"ಸಧ್ಯಕ್ಕೆ ಈ ವಿಷಯ ಗುಟ್ಟಾಗಿರಲಿ. ಭವಾನಿಗಾಗಲೀ, ನನ್ನ ಮಕ್ಕಳಿಗಾಗಲೀ, ಈಗಲೇ ಈ ವಿಷಯ ತಿಳಿಯೋದು ಬೇಡ. ನನಗೂ ಈ

ಕಜಕಜೆ ಇಷ್ಟವಿಲ್ಲ”

“ಯೋಚಿಸು ಹತ್ತಾರು ಸಲ ಯೋಚಿಸು, ಆಮೇಲೆ ನಿರ್ಧರಿಸು. ನಮ್ಮಗಳದ್ದೇನೂ ಅಭ್ಯಂತರವಿಲ್ಲ. ಅಥವಾ ನಾವುಗಳೂ ಹಣ ಕೊಡುವುದು ಸೂಕ್ತ ಅಂತನ್ನಿಸಿದರೆ, ನಮಗೆ ಮುಂಚಿತವಾಗಿ ತಿಳಿಸಿಬಿಡು. ವಿನಾಕಾರಣ, ಅತ್ತಿಗೆಯ ಕೈಯಲ್ಲಿ ಆಡಿಸುವುದು ಬೇಡ”

“ಇಲ್ಲ ಶ್ರೀನಾಥ... ಇದು ನನ್ನ ದೃಢ ನಿರ್ಧಾರ... ನಾನು ಖಂಡಿತಾ ಮನಸ್ಸನ್ನು ಬದಲಾಯಿಸುವುದಿಲ್ಲ. ನೀನು ಎಲ್ಲವನ್ನು ವಿಚಾರಿಸಿ, ವ್ಯವಸ್ಥೆ ಮಾಡು. ನಾನು ಚೆಕ್ ಕೊಡ್ತೀನಿ. ಮನೆಯವರೆಲ್ಲರೂ ಬಸ್ ಮಾಡಿಕೊಂಡು ಆಶ್ರಮಕ್ಕೆ ಹೋಗಿಬರೋಣ. ಆ ಖರ್ಚು ನನ್ನದೇ ನಾನು ಸಾಕಷ್ಟು ಸಂಪಾದಿಸ್ತಿದೀನಿ ಇಷ್ಟು ಮಾಡದಿದ್ದರೆ ಹೇಗೆ?” ಅಣ್ಣತಮ್ಮಂದಿರ ಕಡೆ ನೋಡಿ ನುಡಿದ ಅವನ ದನಿಯಲ್ಲಿ ದೈನ್ಯತೆ ಇದೆಯೆಂದು ಅನಂತ ಭಾವಿಸಿದ. ದನಿಯಲ್ಲಿ ವಿಷಾದ ಅಡಗಿದೆ ಎಂದು ಶ್ರೀನಾಥ ಊಹಿಸಿದ.

ಒಂದೆರಡು ತಿಂಗಳಿನಲ್ಲಿ, ಮೈಸೂರಿಗೆ ಸಮೀಪದ ಹಳ್ಳಿಯಲ್ಲಿದ್ದ ಒಂದು ಗೋ ಸಂರಕ್ಷಣಾ ಕೇಂದ್ರಕ್ಕೆ ಹೋಗಿ, ಶ್ರೀನಾಥ ಅಲ್ಲಿಯ ಮುಖ್ಯಸ್ಥರೊಡನೆ ಮಾತನಾಡಿದ. ನಮಗೆ ಒಂದು ಒಳ್ಳೆ ತಳಿಯ ಹಸು ಬೇಕಾಗಿದೆ. ಆಶ್ರಮಕ್ಕೆ ದಾನ ಮಾಡುವ ಇರಾದೆ ಇದೆ. ಅದಕ್ಕೆ ವ್ಯವಸ್ಥೆ ಮಾಡಿಕೊಡಿ. ಖರ್ಚು ವೆಚ್ಚ ನಮಗಿರಲಿ. ಹಾಗೇ ಅದಕ್ಕೆ ಸಂಬಂಧಪಟ್ಟಂತೆ ಕಾಯಿದೆ ಕಾನೂನುಗಳೇನೇ ಇದ್ದರೂ, ಅದರ ಜವಾಬ್ದಾರಿ ನಮಗಿರಲಿ. ಅಂತಹ ಹಸುಗಳಿದ್ದರೆ ನಮಗೆ ತಿಳಿಸಿ” ಎಂದು ಕೇಳಿದ.

ಅವರು ತಮ್ಮ ಬಳಿ ಇಟ್ಟುಕೊಂಡಿದ್ದ ರಿಜಿಸ್ಟರ್ ತೆಗೆದು, ಹಸುಗಳ ವಿವರಗಳನ್ನು ತಿಳಿಸಿದರು. ಅದರಲ್ಲಿ ಹಸುವಿನ ತಳಿ ಬಣ್ಣ ವಯಸ್ಸು ಇತ್ಯಾದಿಗಳ ವಿವರಗಳಿದ್ದವು

“ಹಸುವಿನ ಮೈಬಣ್ಣ ಯಾವುದೇ ಆಗಿದ್ದರೂ ಪರವಾಗಿಲ್ಲ. ವಯಸ್ಸು ಹೆಚ್ಚಾಗಿರಬಾರದು. ದಾನ ಪಡೆದವರಿಗೆ ಹೆಚ್ಚು ದಿನ ಉಪಯೋಗಕ್ಕೆ ಬರುವಂತಿರಬೇಕು. ಹೆಚ್ಚು ಹೆಚ್ಚು ಹಾಲು ಸಿಗುವಂತಿರಬೇಕು. ಸದೃಢವಾಗಿದ್ದು ಅರೋಗ್ಯವಂತವಾಗಿದ್ದು ಸಾಧು ಆಗಿದ್ದರೆ ಸರಿ. ಕರು ಹಾಕಿದ್ದು, ದಂಡಿಯಾಗಿ ಹಾಲನ್ನು ಕೊಡುವಂಥ ಹಸು ಇದ್ದರೆ ತಿಳಿಸಿ. ಅದು ನಮಗೆ ಬೇಕಾಗುತ್ತದೆ. ಅದರ ಬೆಲೆಯನ್ನು ತಿಳಿಸಿ ನಿಮಗೆ ತಲುಪಿಸುತ್ತೇನೆ”ಎಂದ

“ತಕ್ಷಣಕ್ಕೆ ನೀವು ಕೇಳುವಂಥ ಹಸು ಯಾವುದೂ ಇಲ್ಲ. ಒಂದು ವಾರದೊಳಗೆ ಕರು ಹಾಕುವಂಥ ಒಂದೆರಡು ಗಬ್ಬದ ಹಸುಗಳಿವೆ. ಕರು ಹಾಕಿದ ನಂತರ, ದಾನ ಕೊಡಲು ಯೋಗ್ಯವಾಗುತ್ತವೆ. ಅಲ್ಲಿಯವರೆಗೆ ನೀವು

ಕಾಯಬೇಕಾಗುತ್ತದೆ" ಎಂದು ಹೇಳಿ ಅಲ್ಲಿಯ ನೌಕರರೊಬ್ಬನನ್ನು ಕರೆದರು" ಗಬ್ಬವಾಗಿರುವ ಹಸುಗಳನ್ನು ಇವರಿಗೆ ತೋರಿಸು. ನೋಡಿ..." ಎಂದು ಹೇಳಿ ಅವನೊಡನೆ ಶ್ರೀನಾಥನನ್ನು ಕಳಿಸಿದರು.

"ಈಕೆ ಹೆಸರು 'ತುಂಗಾ' ಅಂತ. ಮೈ ಕೈ ತುಂಬಿಕೊಂಡು ಎಷ್ಟು ದಿವಿನಾಗಿದಾಳೆ ನೋಡಿ. ಬೀದಿಯೋರ ಕಣ್ಣು ಬೀಳಬಾರ್ದು ಅಂತ, ಗೋಶಾಲೆಯೊಳಗೇ ಕಟ್ಟಿ, ಹುಲ್ಲು ಹಾಕಿ ನೀರನ್ನು ಇಡ್ತೀವಿ" ಅವನು ಸಂಭ್ರಮದಿಂದ ಹೇಳಿದ. ಶ್ರೀನಾಥನಿಗೆ ಹಸುವಿನ ಸಂದರತೆ, ಹೆಸರಿನ ಮೇಲೆ ಗಮನವಿರಲಿಲ್ಲ. ಇದು ಎಷ್ಟು ಬೇಗ ಕರು ಹಾಕಿದರೆ, ಅಷ್ಟು ಬೇಗ ದಾನ ಕೊಡಬಹುದು ಎಂದು ಚಿಂತಿಸುತ್ತಿದ್ದ.

"ಸಾರ್, ಈ ಕಡಸು ಇನ್ನೂ ಚಿಕ್ಕದು. ಮೊದಲ ಬಾರಿಗೆ ಗಬ್ಬ ಆಗಿದೆ. ನಾವೆಲ್ಲ ಬಹಳ ಪ್ರೀತಿಯಿಂದ ನೋಡ್ಕೋತೀವಿ. ತುಂಬಾ ಒಳ್ಳೆಯವಳು ಈ ತುಂಗಾ. ನೀವೂ ಮೈ ಮುಟ್ಟಿ ಮಾತಾಡ್ಸಿ ಸಾರ್. ಏನೂ ಮಾಡಲ್ಲ, ಸಾಧು" ಎಂದು ಹೇಳಿ ಅದರ ಮೈ ಸವರಿ ಕೊರಳ ಮೇಲೆ ಕೈಯಾಡಿಸಿದ. ಕೊರಳಿಗೆ ಕಟ್ಟಿದ್ದ ಸಣ್ಣ ಗಂಟೆ ಸದ್ದು ಮಾಡಿತು. ಶ್ರೀನಾಥ ಹಸುವಿನ ಕಡೆ ಆಸಕ್ತಿಯಿಂದ ನೋಡಿದ. ಭಾರಿಯಾಗಿದ್ದ ತುಂಬು ದೇಹವನ್ನು ಹೊತ್ತು ಆಯಾಸಗೊಂಡ ವಳಂತೆ ನಿಂತಿದ್ದ ತುಂಗಾಳನ್ನು ಕಂಡು ಮರುಕ ಹುಟ್ಟಿತು. ತಾಯಿಯಾಗುವುದು ಎಷ್ಟು ತ್ರಾಸದಾಯಕ? ತಟ್ಟನೆ ಅವನಿಗೆ ತನ್ನ ತಾಯಿಯ ನೆನಪು ಒತ್ತಿಕೊಂಡು ಬಂತು. ಭಾವುಕನಾಗಿ ನಿಂತಿದ್ದವನನ್ನು ಆಳು ಕರೆದ, 'ಸಾರ್ ಹೋಗೋಣ್ವಾ, ನೋಡಿದ್ದಾಯ್ತಲ್ಲ" ಶ್ರೀನಾಥ ಹೂಂ ಎಂದು ಅವನ ಹಿಂದೆ ನಡೆದ. ನೆನಪಿಸಿ ಕೊಂಡವನಂತೆ, ಮತ್ತೆ ಹಿಂದೆ ಬಂದು, ಹಸುವಿನ ಮೈಮೇಲೆ ಕೈಯಾಡಿಸಿ, ಮೈದಡವಿದ. ಆಳು ಅವನನ್ನೆ ಅಚ್ಚರಿಯಿಂದ ನೋಡಿದ.

"ಹಸುಗಳ ಯೋಗಕ್ಷೇಮವನ್ನು ನೋಡಿಕೊಳ್ಳಲು ಪಶುವೈದ್ಯರು ಬರ್ತಿರ್ತಾರೆ ಅಲ್ವಾ?" ಆಳನ್ನು ಕೇಳಿದ.

"ಹೂಂ ಬರ್ತಾರಲ್ಲ, ಡಾಕ್ಟರು ಇಲ್ಲದಿದ್ರೆ ಆಗುತ್ತಾ?" ಅವನೂ ನಗುತ್ತಾ ಪ್ರಶ್ನಿಸಿದ.

"ಹೌದು ಅವರು ಬರದೇ ಇದ್ದರೆ, ಹಸುಗಳು ಇಷ್ಟು ಆರೋಗ್ಯವಾಗಿರು ವುದು ಹೇಗೆ ಸಾಧ್ಯ" ಎಂದುಕೊಂಡು ಮತ್ತೆ ಪ್ರಶ್ನಿಸದೇ ಮುಗುಳ್ನಕ್ಕು ಅವನ ಹಿಂದೆ ನಡೆದ.

"ಇನ್ನೂ ಎರಡು ಹಸುಗಳಿವೆ ನೋಡ್ತೀರಾ ಸಾರ್?" ಅವನು ಕೇಳಿದ.

"ಬೇಡ, ಈ ಹಸುವೇ ಇರಲಿ, ನನಗೆ ಇಷ್ಟವಾಗಿದೆ" ಎಂದು ನುಡಿದು ಸೀದಾ ಆಫೀಸಿಗೆ ಬಂದ, ತಾನು ತುಂಗಾಳನ್ನು ಆಯ್ಕೆ ಮಾಡಿರುವುದಾಗಿ

ತಿಳಿಸಿ, ಅಡ್ವಾನ್ಸ್ ಹಣವನ್ನಿತ್ತು, ಅದಕ್ಕೆ ಸಂಬಂಧಿಸಿದ ಕಾಗದ ಪತ್ರಗಳನ್ನೆಲ್ಲ ಸಿದ್ಧಗೊಳಿಸುವಂತೆ ಹೇಳಿ, ರಶೀತಿಯನ್ನು ಪಡೆದು ತನ್ನ ಪೋನು ನಂಬರನ್ನು ಕೊಟ್ಟು, ಅಲ್ಲಿಂದ ಹಿಂದಕ್ಕೆ ಹೊರಟ.

ಮನೆಗೆ ಬಂದವನೇ ಅಣ್ಣಂದಿರನ್ನು ಕರೆದು, ತಾನು ಆಯ್ಕೆ ಮಾಡಿದ್ದ ಹಸುವಿನ ವಿವರಗಳನ್ನು ತಿಳಿಸಿದ ದಾನಕ್ಕೆ ಹಸು ತುಂಬಾ ಯೋಗ್ಯವಾಗಿದೆ, ಕರು ಹಾಕಿದ ಕೂಡಲೇ ನಮಗೆ ಪೋನು ಮಾಡಿ ತಿಳಿಸ್ತಾರೆ, ಆಶ್ರಮದವರಿಗೆ ಮುಂಚಿತವಾಗಿ ತಿಳಿಸಿರಬೇಕು, ಹಾಗೇ ಗೋಧಾನದ ವಿಧಿ ವಿಧಾನಗಳನ್ನು ನಡೆಸಿ ಕೊಡುವುದಕ್ಕೆ ಪುರೋಹಿತರನ್ನು ಗೊತ್ತು ಮಾಡ್ಕೋಬೇಕು. ಹೋಗಿ ಬರಲು, ಬಸ್ಸಿನ ವ್ಯವಸ್ಥೆಯನ್ನು ಮಾಡಬೇಕು ನಮ್ಮ ಹತ್ತಿರದ ನೆಂಟರಿಷ್ಟರಿಗೆಲ್ಲಾ ಆಹ್ವಾನವನ್ನು ಕೊಡಬೇಕು. ತಿಂಡಿ ಊಟಕ್ಕೆ ವ್ಯವಸ್ಥೆ ಮಾಡಬೇಕು, ಬೇಕಾದಷ್ಟು ಕೆಲಸಗಳಿವೆ, ಇದನ್ನೆಲ್ಲ ನೀನು ಮಾಡು" ರಮಾಕಾಂತನಿಗೆ ಹೇಳಿದ ಅವನು ತಬ್ಬಿಬ್ಬುಗೊಂಡ.

"ನನಗೆ ಇದಕ್ಕೆಲ್ಲ ಸಮಯ ಎಲ್ಲಿದೆ? ಅಲ್ಲದೇ ಭವಾನಿಗೆ ತಿಳಿಯದಂತೆ ನಾನು ಯಾವ ಕೆಲಸವನ್ನು ಮಾಡುಕ್ಕೆ ಆಗುಲ್ಲ. ಬಸ್ಸಿನ ವ್ಯವಸ್ಥೆಯನ್ನು ನಾನು ಮಾಡ್ತೀನಿ. ಉಳಿದ ಕೆಲಸಗಳನ್ನು ಅಣ್ಣ ಮಾಡಲಿ" ಅನಂತನ ಕಡೆ ನೋಡಿದ.

"ನನಗೆಲ್ಲಿದೆ ಬಿಡುವು! ಸ್ಕೂಲಿಗೆ ಹೋಗಿ ಬರೋದ್ರಲ್ಲೇ ದಿನವೆಲ್ಲಾ ಕಳೆದು ಹೋಗುತ್ತೆ. ಬೇಕಾದ್ರೆ ಶಾಸ್ತ್ರಿಗಳ ಹತ್ರ ಮಾತಾಡಿ, ಸೂಕ್ತವಾದ ದಿನಾಂಕವನ್ನು ಗೊತ್ತು ಮಾಡಿಕೊಡುವಂತೆ ಹೇಳ್ತೀವಿ. ಇದಕ್ಕಿಂತ ಹೆಚ್ಚಿನ ಕೆಲಸಗಳನ್ನು ನನಗೆ ಹೇಳ್ಬೇಡಿ" ಅನಂತನೆಂದ.

"ಸರಿ ಬಿಡಿ ಉಳಿದದ್ದನ್ನೆಲ್ಲ ನಾನು ನೋಡ್ಕೋತೀನಿ" ಶ್ರೀನಾಥನೆಂದ.

"ಅಂತೂ ನನ್ನ ಆಸೆ ಈಡೇರುವ ಸಮಯ ಒದಗಿ ಬಂದಿದೆ" ಎಂದು ಹೇಳಿ ತನ್ನ ಸಂತಸವನ್ನು ವ್ಯಕ್ತಪಡಿಸಿದ. ಸಂಭ್ರಮದಿಂದ ಭವಾನಿಯೊಡನೆ ಗೋಧಾನದ ಅದಕ್ಕೆ ಸಂಬಂಧಿಸಿದ ವ್ಯವಸ್ಥೆಯ ಬಗ್ಗೆ ತಿಳಿಸಿದ. ಅವಳು ಉತ್ಸುಕಗೊಂಡಳು.

"ನಾನು ಎಂದೂ ಇಂಥಾ ಗೋ ಸಂರಕ್ಷಣಾ ಕೇಂದ್ರವನ್ನು ನೋಡಿಲ್ಲ. ನನ್ನನ್ನೂ ಅಲ್ಲಿಗೆ ಕರ್ಕೊಂಡ್ಹೋಗಿ ಮೈತುಂಬಿರುವ ಮುದ್ದಾದ ಹಸುವನ್ನು ನೋಡ್ಬೇಕು ಅಂತ ನಂಗೂ ಆಸೆ ಆಗ್ತಿದೆ" ತನ್ನ ಆಸೆಯನ್ನು ವ್ಯಕ್ತಪಡಿಸಿದಳು.

"ಸರಿ ನೀನು ಅತ್ತಿಗೆಯ ಹತ್ತಿರ ಸುಗುಣಳ ಹತ್ತಿರ ಮಾತಾಡು, ಎಲ್ಲರೂ ಒಟ್ಟಿಗೆ ಹೋಗಿ ಬರೋಣ" ರಮಾಕಾಂತ ಹೆಂಡತಿಯ ಮಾತಿಗೆ ಪುಷ್ಟಿಯನ್ನು ನೀಡಿದ. ಭವಾನಿ ಸಂಭ್ರಮದಿಂದ ಕೆಳಗಿಳಿದು ಬಂದಳು. ವಾರಗಿತ್ತಿಯರೊಡನೆ

ಮಾತನಾಡಿದಳು. ವನಜಳಿಗೆ ಈ ವಿಷಯ ತಿಳಿದಿರಲಿಲ್ಲ. ಅವಳು ಸುಗುಣಳ ಕಡೆ ನೋಡಿದಳು. ಅವಳು ಮೌನದಿಂದಿದ್ದಳು. ಶ್ರೀನಾಥ ಪ್ರಯಾಣ ಮಾಡುವ ಮೊದಲು ಈ ವಿಷಯವನ್ನು ತಿಳಿಸಿದ್ದನಾದ್ದರಿಂದ ಅವಳಿಗೆ ತಿಳಿದಿತ್ತು. ಆದರೆ ಈಗಲೇ ಎಲ್ಲರಿಗೂ ತಿಳಿಯುವುದು ಬೇಡವೆಂದು ಮಾತನಾಡಿಕೊಂಡಿದ್ದರು. ವನಜಳ ಮುಖ ಕೆಟ್ಟಿತ್ತು.

"ಈ ಮನೆಗೆ ನಾನು ಹಿರಿಯ ಸೊಸೆ. ನನ್ನ ವಾರಗಿತ್ತಿಯರಿಂದ ನನಗೆ ಮುಖ್ಯವಾದ ವಿಷಯಗಳು ತಿಳಿಯುತ್ತಿದೆ ಎಂದುಕೊಂಡು ಉದಾಸೀನತೆಯನ್ನು ಪ್ರದರ್ಶಿಸಿದಳು. "ಭವಾನಿ ಈ ಹಸು ಕರು, ಸಗಣಿ ಗಂಜಲ ಎಲ್ಲಾ ನಿನಗೆ ಹೊಸದು. ನನಗೆ ಯಾವುದೂ ಹೊಸದಲ್ಲ, ನೀನು ಹೋಗಿ ಬಾ. ನನಗೆ ಅದರಲ್ಲೆಲ್ಲಾ ಆಸಕ್ತಿಯಿಲ್ಲ" ಎಂದು ಹೇಳಿ ಮುಖವನ್ನು ಅತ್ತ ತಿರುಗಿಸಿದ್ದಳು. ಸುಗುಣಳೂ ಹಿರಿಯ ಅಕ್ಕನ ಮಾತನ್ನು ಅನುಮೋದಿಸಿದಳು.

"ನಾವುಗಳು ಹಳ್ಳಿಯಲ್ಲಿ ಬೆಳೆದವರು. ನೀವು ಪಟ್ಟಣದವರು ನಿಮಗೆ ಇರುವ ಕುತೂಹಲ ನಮಗೆ ಬರಲು ಸಾಧ್ಯವಿಲ್ಲ. ಅಲ್ಲದೇ, ಆಶ್ರಮಕ್ಕೆ ಗೋದಾನದ ಸಮಯದಲ್ಲಿ ಮನೆಯವರೆಲ್ಲರೂ ಹೋಗಲೇಬೇಕು. ಈಗ ನಾನು ನಿಮ್ಮೊಂದಿಗೆ ಬರುಕ್ಕಂತೂ ಸಾಧ್ಯವಿಲ್ಲ."

"ಮನೇಲಿ ಸಾಕಷ್ಟು ಕೆಲಸಗಳಿವೆ, ನೀವು ಭಾವನ ಜತೆ ಹೋಗ್ಬನ್ನಿ" ಎಂದುಬಿಟ್ಟಳು.

"ಎಲ್ಲಾ ವಿಷಯಗಳಲ್ಲೂ ನೀವಿಬ್ರೂ ಒಂದು. ಎಷ್ಟಾಗಲೀ ನೀವಿಬ್ರೂ ಸ್ವಂತ ಕಸಿನ್ಸ್. ನನ್ನನ್ನು ದೂರವೇ ಇಟ್ಟು ಬಿಟ್ಟಿದೀರಿ. ಹೋಗಲಿ, ನನ್ನ ಉತ್ಸಾಹದಲ್ಲಿ ಪಾಲುಗೊಳ್ಳಲೂ ನಿಮಗೆ ಇಷ್ಟ ಇಲ್ಲವಲ್ಲ. ನನ್ನ ಗಂಡ ನನ್ನನ್ನು ಕರ್ಕೊಂಡು ಹೋಗ್ತೀನಿ ಅಂತ ಹೇಳಿದಾರೆ. ಈ ಅವಕಾಶವನ್ನು ನಾನೇಕೆ ತಪ್ಪಿಸಿಕೊಳ್ಳಲಿ? ಆಮೇಲೆ ಭವಾನಿ ನಮಗೆ ಒಂದ್ಮಾತು ತಿಳಿಸಲಿಲ್ಲ ಅಂತ ಬೈಯ್ಯೋಕೆಬೇಡಿ. ಅಷ್ಟಕ್ಕೂ ನಿಮ್ಮಿಬ್ಬರಿಗೂ ತಿಳಿಸಿ, ಕರೆಯುವಂತೆ ಹೇಳಿದ್ದು, ನಿನ್ನ ಭಾವನೇ, ನಿಮ್ಮ ಮೈದುನನೇ ಹೇಳಿದ್ದು" ಎಂದು ಇಬ್ಬರ ಕಡೆಯೂ ನೋಡಿ ಹೇಳಿ, ಅಲ್ಲಿಂದ ಹೊರಟು ಹೋಗಿದ್ದಳು.

"ನೋಡಿದ್ಯಾ ಸುಗುಣ, ಮನೆಯ ಹಿರಿಸೊಸೆ ಹೆಸರಿಗೆ ಮಾತ್ರ. ವಿಷಯಗಳು ನನಗೆ ತಿಳಿಯೋದು ಎಲ್ಲರಿಗಿಂತ ಕಡೆಯಲ್ಲಿ. ನಿಂಗೆ ಗೊತ್ತಿದ್ರೂ ನಂಗ್ಯಾಕೆ ಹೇಳಲಿಲ್ಲ, ನೀನು! ಭವಾನಿ ಬಂದು ಹೇಳಿದಾಗ, ನಾನು ಮಿಕಿ ಮಿಕಿ ಅಂತ ಅವಳನ್ನೇ ನೋಡ್ದೆ"

"ಇಲ್ಲ ಅತ್ಗೇ ನಿಮ್ಮ ಮೈದುನ ನಂಗೆ ಏನೂ ಹೇಳಿಲ್ಲ. ಅವರು ಹೊರಗೆ ಹೋಗಿದ್ದು ನಿಜ. ಆದರೆ ಆಮೇಲೆ ಅವರು ಮಾತಿಗೆ ಸಿಕ್ಕೇ ಇಲ್ಲ. ರಮಾಕಾಂತ

ಭಾವನಿಗೆ ಆತುರ ಜಾಸ್ತಿ. ಅಕ್ಕನಿಗೆ ತಿಳಿಸಿದಾರೆ.... ಅಕ್ಕ ಓಡಿ ಬಂದಿದಾರೆ ನೀವೇ ಹೇಳಿದ ಹಾಗೆ. ನಿಮಗೆ ಹಸು, ಹುಲ್ಲು, ಸಗಣಿ, ಬೆರಣಿ ಯಾವುದೂ ಹೊಸದಲ್ಲ. ಅಲ್ವಾ ಅಕ್ಕಾ?" ವನಜಳ ಮನಸ್ಸನ್ನು ಹಗುರಗೊಳಿಸಲು ನೋಡಿದಳು.

"ನಾನು ಅದನ್ನು ಯೋಚಿಸ್ತಿಲ್ಲ ಸುಗುಣ. ಗೋದಾನದ ಜವಾಬ್ದಾರಿಯೆಲ್ಲಾ ತಮ್ಮದೇ ಎನ್ನುವಂತೆ ಹೇಗೆ ಮಾತಾಡಿದ್ರು ನೋಡು. ನಾನೇನಾದ್ರೂ ಹೀಗೆ ಮಾತಾಡಿದ್ದಿದ್ರೆ, ನಿನ್ನ ಭಾವ ಕಪಾಲಕ್ಕೆ ಹೊಡೆದಿರುತಿದ್ರು. ರಮಾಕಾಂತ ತನ್ನ ಹೆಂಡ್ತಿನ ತಲೆಮೇಲೆ ಕೂರಿಸ್ಕೊಂಡು ಮೆರಿಸ್ತಾನೆ. ಪಟ್ಟಣದಲ್ಲಿ ಬೆಳೆದವಳು ಅಂತ. ಅದಕ್ಕೇ, ಇವಳಿಗೆ ನಾವಿಬ್ಬರೂ ಹಳ್ಳಿಯವರು ಅಂತ ತಾತ್ಸಾರ" ವನಜ ಪಟಪಟನೆ ನುಡಿದಳು.

"ಬಿಡಿ ಅಕ್ಕಾ ಅವರು ದಿಳ್ಳಿಯವರಾದ್ರೇನು? ನಾವು ಹಳ್ಳಿಯವರಾದ್ರೇನು? ನಾವೂ ಮೂರು ಮೂರು ಮಕ್ಕಳನ್ನು ಹೆತ್ತಿದೀವಿ. ಅವರೂ ಮೂರು ಮಕ್ಕಳನ್ನು ಹೆತ್ತಿದಾರೆ. ಈ ವಿಷಯದಲ್ಲಿ ಮೂವರೂ ಒಂದೇ" ತಮಾಷೆ ಹೇಳಿದವಳಂತೆ ನಸುನಕ್ಕಳು.

"ಅದನ್ನು ಅವಳು ಹೆಚ್ಚುಗಾರಿಕೆಯಿಂದ ಹೇಳ್ಕೋತಾಳೆ. ಅವಳಿಗೆ ಬರೀ ಮೂರು ಗಂಡುಮಕ್ಕಳಂತೆ. ನಮಗೆ ಹೆಣ್ಣು ಮಕ್ಕಳೂ ಇವೆಯಂತೆ..."

"ಹೇಳಿದ್ರೆ ಹೇಳ್ಕೊಳ್ಳಲಿ ಬಿಡಿ ಅಕ್ಕ. ಅತ್ತೆಯವರಿಗೂ ಮೂರು ಜನ ಗಂಡು ಮಕ್ಕಳಿದ್ದರೂ, ಅವರು ಒಂದು ದಿನವೂ ಜಂಭದಿಂದ ಹೇಳಿಕೊಂಡವರಲ್ಲ. ಹಾಗೂ ಅವರಿಗೆ ಹೆಣ್ಣುಮಕ್ಕಳಿಲ್ಲ ಅನ್ನುವ ಕೊರಗು ಇತ್ತು. ಅದಕ್ಕೇ ಅವರಿಗೆ ಪಲ್ಲವೀನ, ಮಾಧವೀನ ಕಂಡ್ರೆ ಸ್ವಲ್ಪ ಪ್ರೀತಿ ಜಾಸ್ತಿ ಇತ್ತು. ಗಂಡು ಹುಡುಗರಿಗೆ ಕಾಣದಂತೆ, ಇವರಿಬ್ಬರಿಗೂ ತಿಂಡಿಗಳನ್ನು ಕೊಟ್ಟು ಮುದ್ದು ಮಾಡುತ್ತಿದ್ರು."

"ಅತ್ತೆಯವರ ದೊಡ್ಡಗುಣ ಇವಳಿಗೆ ಎಲ್ಲಿಂದ ಬರ್ಬೇಕು?"

"ಇವರೂ ತಮಗೆ ಹೆಣ್ಣುಮಗು ಇಲ್ಲ ಅಂತ ಒಳಗೊಳಗೇ ಕೊರಗ್ತಾರೆ. ಬಾಯಲ್ಲಿ ಹೀಗೆ ಮಾತಾಡ್ತಾರೆ. ಇವರ ಮಾತಿಗೆ ಬೆಲೆ ಕೊಡ್ಬೇಡಿ"

"ನಿನಗಿರುವಷ್ಟು ಸಹನೆ ನನಗಿಲ್ಲ ಸುಗುಣ. ಪಲ್ಲವಿಗೆ ಸಕಾಲದಲ್ಲಿ ಮದುವೆ ಆಗಲಿಲ್ಲ, ಆ ಕೊರಗು ನನಗಿದೆ. ಹಾಗಾಗಿ ಭವಾನಿಯ ಮಾತುಗಳು ನನ್ನನ್ನು ರೇಗಿಸುತ್ತವೆ."

"ಅದನ್ನೆಲ್ಲ ಮನಸ್ಸಿಗೆ ಹಚ್ಚಿಕೊಳ್ಳಲೇಬೇಡಿ. ದೇವರಿಚ್ಛೆ ಅಂತ ಸುಮ್ಮನಿದ್ದು ಬಿಡಿ. ಪಲ್ಲವಿಗೆ ಯೋಗ ಕೂಡಿ ಬಂದರೆ, ತಡವಾಗಿಯಾದರೂ, ಕಂಕಣಭಾಗ್ಯ ಒದಗಿಬರುತ್ತೆ. ನೀವು ಚಿಂತಿಸಲೇಬೇಡಿ" ಹಿರಿಯಕ್ಕನಿಗೆ ಸಮಾಧಾನವನ್ನು

ಹೇಳಿದಳು.

ಮಾರನೇ ದಿನವೇ ಭವಾನಿ, ಟ್ಯಾಕ್ಸಿ ಮಾಡಿಕೊಂಡು ಗಂಡನೊಡನೆ, ಗೋ ಸಂರಕ್ಷಣಾ ಕೇಂದ್ರಕ್ಕೆ ಹೋಗಿ ಬಂದಳು. ಅಲ್ಲಿ ಬರೀ ದನಗಳು ವಿವಿಧ ಜಾತಿಯ ತಳಿಗಳು, ಅವುಗಳನ್ನು ಕುರಿತ ಸಂಶೋಧನೆಗಳನ್ನು ಮಾಡಲು ಬಂದಿದ್ದ ವಿದ್ಯಾರ್ಥಿಗಳು. ಎಷ್ಟೋ ಅವಳಿಗೆ ಅರ್ಥವಾಗದ ವಿಷಯಗಳು. ಆದರೂ, ಕೆಲವರಿಗೆ ತಾನು ಬಂದಿರುವ ಉದ್ದೇಶವನ್ನು ತಾನಾಗಿಯೇ ತಿಳಿಸಿದಳು. ಗೋದಾನ ಮಾಡಲಿರುವುದನ್ನು ದೊಡ್ಡ ವಿಷಯವಾಗಿ ಹೇಳಿಕೊಂಡಳು.

"ರಮಾಕಾಂತ ಹಗುರವಾಗಿ ಗದರಿದ್ದ. ಗೋದಾನ, ಯಾವ ದೊಡ್ಡ ವಿಷಯ ಅಂತ ಪ್ರಚಾರ ಮಾಡ್ತಿದೀಯ. ಎಷ್ಟೋ ಜನ ಗೋದಾನ ಮಾಡ್ತಾರೆ. ನಮಗೆ ಆ ಯೋಗ ಬಂದಿದೆ ಅಷ್ಟೇ"

"ಅದೇನು ಸಾಮಾನ್ಯವಾದ ವಿಷಯಾನಾ? ಹಾಲು ಕೊಡುವ ಹಸುವಿನ ಬೆಲೆ ಏನು ಕಡಿಮೆ ಅಲ್ಲ. ಅಷ್ಟೊಂದು ಖರ್ಚು ನಾವು ಮಾಡ್ತಿದೀವಿ ಅಂತ ನಾವಾಗಿಯೇ ಹೇಳದಿದ್ರೆ ಬೇರೆಯವರಿಗೆ ತಿಳಿಯುವುದಾದ್ರೂ ಹೇಗೆ?" ತನ್ನ ಮಾತನ್ನು ಸಮರ್ಥಿಸಿಕೊಂಡಳು.

"ಯಾರಿಗೂ ತಿಳಿದು ಏನಾಗ್ಬೇಕಾಗಿದೆ! ನಮ್ಮ ಹತ್ತಿರದ ನೆಂಟರುಗಳಲ್ಲಿ ಕೆಲವು ಹಿರಿಯರನ್ನು ಈ ಕಾರ್ಯಕ್ರಮಕ್ಕೆ ಆಹ್ವಾನಿಸಬೇಕಾಗಿದೆ. ಆ ಕೆಲಸವನ್ನು ನೀನೇ ಮಾಡು. ಆಗ ನಿನಗೂ ಸಮಾಧಾನವಾಗುತ್ತೆ" ನಗುತ್ತಾ ಹೇಳಿದ.

"ನಂಗೇನೂ ಕಷ್ಟವಿಲ್ಲ. ನಾನು ಹೋಗಿ ಬರ್ತೀನಿ. ಆದರೆ, ನಿಮ್ಮ ಅತ್ತಿಗೆ ದೊಡ್ಡವರು. ಅವರೇ ಹೋಗಿ ಹೇಳಬೇಕು ಅಂತ ಶಾಸ್ತ್ರದಲ್ಲಿದ್ದರೇ?"

"ಶಾಸ್ತ್ರ, ಸಂಬಂಧ, ಅದೆಲ್ಲಾ ಏನಿಲ್ಲ. ಅತ್ತಿಗೆ ಯಾರ ಮನೆಗೂ ಹೋಗಲ್ಲ. ನಂಗೆ ಗೊತ್ತು, ಪಲ್ಲವಿಯ ಬಗ್ಗೆ ಅವರುಗಳು ವಿಚಾರಿಸದೇ ಬಿಡುವುದಿಲ್ಲ. ಅತ್ತಿಗೆಗೆ ಬೇಸರವಾಗುತ್ತೆ ಸುಗುಣಂಗೆ ಬಿಡುವಿದ್ದರೆ ಅವಳ ಜತೆ ಹೋಗು"

"ಅವಳು ಬಿಡುವಿದ್ದರೂ ನನ್ನ ಜತೇಲಿ ಬರುಕ್ಕೆ ಇಷ್ಟಪಡಲ್ಲ, ನೀವೇ ಬನ್ನಿ"

"ಆಗಲಿ ಆ ಕೆಲಸವೂ ಆಗಬೇಕಲ್ಲ" ಅವನು ಒಪ್ಪಿಕೊಂಡಾಗ, ಖುಷಿಯಾಗಿತ್ತು. ಅಲ್ಲಿಂದ ಹಿಂತಿರುಗಿದ ಭವಾನಿ, ತಾನಾಗಿಯೇ ಯಾರಿಗೂ ಏನನ್ನೂ ಹೇಳಲಿಲ್ಲ. ಸುಮ್ಮನಿದ್ದು ಬಿಟ್ಟಳು. ಅವರುಗಳು ಕೇಳಲಿಲ್ಲ, ಆದರೆ, ಅವರಿಬ್ಬರೇ ಮಾತನಾಡಿಕೊಂಡರು.

"ಯಾಕೋ ಅಲ್ಲಿಯ ವೈಭವವನ್ನು ಹೇಳಿಕೊಳ್ಳಲಿಲ್ಲ, ಇಷ್ಟೇಯಾ ಅಂತ ಅನ್ನಿಸಿರಬಹುದು. ಹಸುಗಳು ಹೊಸಬರನ್ನು ನೋಡಿ 'ಅಂಬಾ' ಅಂತ

ಕೂಗಿದಾಗ ಇವಳು ಹೆದರಿರಬಹುದು ಅದನ್ನು ಹೇಗೆ ಹೇಳಿಕೊಳ್ತಾಳೆ?" ವನಜ ಆಡಿಕೊಂಡಳು.

"ನೀವು ಏನೇ ಹೇಳಿ, ಈ ಭವಾನಕ್ಕ ಯಾವುದೋ ವಿಷಯವನ್ನು ಸುಮ್ಮನೆ ಕಗ್ಗ ಮಾಡ್ತಾರೆ. ಅವರ ಆಲೋಚನೆಗಳೇ ಬೇರೆ"

"ಅವಳು ಬೆಳೆದು ಬಂದಿರುವ ರೀತಿಯೇ ಹಾಗಿರಬಹುದು ನಾವು ಅವಳನ್ನು ತಿದ್ದುವುದಕ್ಕೂ ಆಗುಲ್ಲ. ಅಲ್ಲದೇ ತಿದ್ದಿ, ನಾವು ಏನು ಗಳಿಸಬೇಕಾಗಿದೆ?" ಹೌದು ಎಂಬಂತೆ ಸುಗುಣ ಗೋಣು ಆಡಿಸಿದಳು.

"ಭವಾನಿ ಉತ್ಸಾಹದಿಂದ ಸಮೀಪದವರನ್ನೆಲ್ಲಾ ಪೋನಿನಲ್ಲೇ ಮಾತನಾಡಿಸಿ, ಗೋದಾನದ ವಿಷಯವನ್ನು ತಿಳಿಸಿದಳು. ದಿನಾಂಕವನ್ನು ಗೊತ್ತು ಮಾಡಿದ ಕೂಡಲೇ, ಮನೆಗೇ ಬಂದು ಹೇಳುತ್ತೇವೆ. ಯಾರೂ, ಇಂಥ ಅಪರೂಪದ ಕಾರ್ಯಕ್ರಮವನ್ನು ತಪ್ಪಿಸಿಕೊಳ್ಳಬೇಡಿ, ಖಂಡಿತಾ ಬರ್ಬೇಕು" ಎಂದು ಒತ್ತಾಯಪೂರ್ವಕವಾಗಿ ಆಹ್ವಾನಿಸಿದಳು.

* * *

ಕೆಲವೇ ದಿನಗಳ ನಂತರದಲ್ಲಿ ತುಂಗಾ ಒಂದು ಹೆಣ್ಣು ಕರುವಿಗೆ ಜನ್ಮವಿತ್ತಳು. ಕೇಂದ್ರದವರು ತಕ್ಷಣವೇ ಈ ಶುಭ ಸಮಾಚಾರವನ್ನು ಶ್ರೀನಾಥನಿಗೆ ಪೋನಿನ ಮೂಖಾಂತರ ತಿಳಿಸಿದರು. ಶ್ರೀನಾಥ ಮನೆಯವರಿಗೆಲ್ಲ ಸಮಾಚಾರವನ್ನು ತಿಳಿಸಿದ. ಅದೇ ಸಾಯಂಕಾರ ಅನಂತ, ಶ್ರೀನಾಥನನ್ನು ಕರೆದುಕೊಂಡು ಶಾಸ್ತ್ರಿಗಳ ಮನೆಗೆ ಬಂದ.

"ಗೋದಾನಕ್ಕೆಂದು ನಾವು ತೆಗೆದುಕೊಂಡಿರುವ ಹಸು, ಕರುವನ್ನು ಹಾಕಿದೆ. ಗೋದಾನಕ್ಕೆ ಒಂದು ಪ್ರಶಸ್ತವಾದ ದಿನವನ್ನು ಗೊತ್ತು ಮಾಡಿಕೊಡಿ. ಆಶ್ರಮದವರಿಗೆ ತಿಳಿಸಬೇಕು. ಹಾಗೇ ಈ ಕಾರ್ಯಕ್ರಮದ ಮುಂದಾಳುತ್ವವನ್ನು ನೀವೆ ವಹಿಸಿಕೊಳ್ಳಬೇಕು" ವಿನಂತಿಸಿಕೊಂಡ.

ಶಾಸ್ತ್ರಿಗಳು ಹಸನ್ಮುಖರಾಗಿ ಪಂಚಾಗವನ್ನು ತೆಗೆದು, ನಕ್ಷತ್ರ, ತಿಥಿ, ವಾರಗಳನ್ನು ನೋಡುತ್ತಾ ನುಡಿದರು. ಹಾಗೆ ನೋಡಿದರೆ, ಈ ವರ್ಷದಲ್ಲಿ ನೀವು ಮಾಡುವ ಯಾವುದೇ ದಾನವನ್ನು ಎಂದೂ ಮಾಡಿದರೂ ಅದು ಪ್ರಶಸ್ತವೇ, ಆದರೂ ಎಲ್ಲರಿಗೂ ಅನುಕೂಲವಾಗಲೆಂದು ಒಂದು ದಿನಾಂಕವನ್ನು ಗೊತ್ತು ಮಾಡಿಕೊಡ್ತೀನಿ. ನೀವು ಎಲ್ಲಾ ಸಿದ್ಧತೆಗಳನ್ನು ಮಾಡಿಕೊಳ್ಳಬಹುದು" ಕರು ಹಾಕಿದ ಹದಿನೈದು ದಿನಗಳವರೆಗೆ, ಹಾಲು ಗಿಣ್ಣು ಹಾಲು ಆಗಿರುತ್ತದೆ. ಈ ಪಕ್ಷ ಕಳೆದ ನಂತರದಲ್ಲಿ, ದಿನಗಳು ಸೂಕ್ತವಾಗಿರುತ್ತದೆ" ಎಂದು ಹೇಳಿ ಒಂದು ದಿನವನ್ನು ಗೊತ್ತು ಮಾಡಿಕೊಟ್ಟರು. ಹಾಗೇ, ತಾವೇ ಮುಂದಾಗಿ ನಿಂತು ಗೋದಾನದ ವಿಧಿ ವಿಧಾನಗಳನ್ನ ಸಾಂಗವಾಗಿ ಪೂರೈಸಿಕೊಡುವುದಾಗಿ

ಒಪ್ಪಿಕೊಂಡರು. ಶಾಸ್ತ್ರಿಗಳಿಗೆ ದಕ್ಷಿಣೆಯನ್ನು ಕೊಟ್ಟು ನಮಸ್ಕರಿಸಿದರು.

"ಸಧ್ಯದಲ್ಲೇ ಗೋದಾನಕ್ಕೆ ತಗಲುವ ವೆಚ್ಚವನ್ನೂ, ಬೇಕಾಗುವ ಸಾಮಾಗ್ರಿಗಳ ಪಟ್ಟಿಯನ್ನು ತಯಾರಿಸಿಕೊಡ್ತೀನಿ. ಹಾಗೇ ಗೋದಾನವನ್ನು ಸ್ವೀಕರಿಸಲು, ಒಬ್ಬ ಉತ್ತಮ ಬ್ರಾಹ್ಮಣನನ್ನು ನಾನೇ ಕರೆದುಕೊಂಡು ಬರುತ್ತೇನೆ. ದಾನವನ್ನು ಸ್ವೀಕರಿಸಿ, ಅವರು ಹಸುವನ್ನು, ಕರುವನ್ನು ಆಶ್ರಮಕ್ಕೆ ವಹಿಸಿಕೊಡುತ್ತಾರೆ. ಇಲ್ಲದಿದ್ದರೆ, ಆ ಬ್ರಾಹ್ಮಣ ಹಸುವನ್ನು ಸಾಕುವುದಕ್ಕೆ ಸಾಧ್ಯವೇ! ಅದರ ಖರ್ಚುವೆಚ್ಚಗಳನ್ನು ಭರಿಸಲು ಸಾಧ್ಯವೇ?" ಶಾಸ್ತ್ರಿಗಳು ಮುಗುಳ್ನಕ್ಕರು, ಅಣ್ಣತಮ್ಮಂದಿರು, ಅವರ ನಗೆಯಲ್ಲಿ ತಮ್ಮ ನಗುವನ್ನು ಬೆರೆಸಿದರು.

"ನೀವು ಹೇಗೆ ಹೇಳಿದರೆ ಹಾಗೆ... ನಿಮಗೆ ಎಲ್ಲವೂಗೊತ್ತು. ನಮಗೆ ಏನೂ ಗೊತ್ತಿಲ್ಲ ಎಂದು ನುಡಿದು ಅಲ್ಲಿಂದ ಮನೆಗೆ ಬಂದರು. ಎಲ್ಲರಿಗೂ ವಿಷಯವನ್ನು ತಿಳಿಸಿ, ಎಲ್ಲರೂ ಬರಲೇಬೇಕು, ಯಾರೂ ತಪ್ಪಿಸಿಕೊಳ್ಳುವಂತಿಲ್ಲ. ಎಲ್ಲರು ಹೊತ್ತಿಗೆ ಸರಿಯಾಗಿ ಎದ್ದು ಬಸ್ಸು ಹೊರಡುವ ಹೊತ್ತಿಗೆ ಸಿದ್ಧರಾಗಿರ್ಬೇಕು. ಹಿಂದಿನ ದಿನವೇ ಎಲ್ಲಾ ಏನೇನ್ಬೇಕೋ ಎಲ್ಲಾದನ್ನು ತೆಗೆದಿಟ್ಟುಕೊಂಡಿರ್ಬೇಕು. ಕಡೇಗಳಿಗೆಯಲ್ಲಿ ಹುಡುಕ್ತಾ ನಿಂತ್ಕೋಬಾರ್ದು...." ಶ್ರೀನಾಥ ಎಲ್ಲರನ್ನು ಕುರಿತು ಹೇಳಿದ.

"ಹೌದು ಕ್ಯಾಮೆರಾಕ್ಕೆ ಫಿಲಂ ಲೋಡ್ ಮಾಡಿ ತೆಗೆದಿಟ್ಕೋಬೇಕು. ಡೈರಿ, ಪೆನ್ನು, ಪೆನ್ಸಿಲ್ಲು ಮರೆಯದೇ ತೆಗೆದಿಟ್ಟುಕೊಳ್ಬೇಕು" ಭವಾನಿ ಮಕ್ಕಳಿಗೆ ಹೇಳಿದಳು.

"ಕುಡಿಯಕ್ಕೆ ನೀರು, ಒಂದಿಷ್ಟು ಬಿಸ್ಕತ್ತು, ಹಣ್ಣುಗಳನ್ನು ಮರೆಯದೇ ನಮ್ಮ ಜತೆ ತಗೊಂಡು ಹೋಗ್ಬೇಕು. ಲೋಟಗಳು, ಪ್ಲಾಸ್ಟಿಕ್ ಚೀಲಗಳು, ಕೈ ಒರೆಸುಕ್ಕೆ ಸಣ್ಣ ಸಣ್ಣ ಟವೆಲ್ಲುಗಳು ಎಲ್ಲವೂ ಬೇಕಾಗುತ್ತದೆ" ಸುಗುಣ ನೆನಪಿಸಿದಳು

"ಹಸುವಿಗೆ ಗೋಪೂಜೆ ಮಾಡಿಸ್ತಾರೆ. ಮನೆಯಿಂದ ಒಂದಿಷ್ಟು ಅಕ್ಕಿ, ಬೆಲ್ಲ, ಬಾಳೆಹಣ್ಣುಗಳನ್ನು ತಗೊಂಡು ಹೋಗಿ, ನಮ್ಮ ಕೈಯಾರೆ ತಿನ್ನಿಸ್ಬೇಕು" ವನಜ ತನ್ನ ಆಸೆಯನ್ನು ವ್ಯಕ್ತಪಡಿಸಿದಳು. ಭವಾನಿ, ಸುಗುಣಳ ಕಡೆ ನೋಡಿ ಹುಬ್ಬು ಹಾರಿಸಿದಳು.

ಹತ್ತಿರದ ನೆಂಟರಿಷ್ಟರಿಗೆ ಆಪ್ತರಿಗೆ ಆಮಂತ್ರಣವನ್ನಿತ್ತರು. ಆಸಕ್ತಿಯಿದ್ದವರು, ಬಿಡುವಾಗಿದ್ದವರು, ಇವರುಗಳೊಡನೆ ಬರಲು ಇಚ್ಛೆಯನ್ನು ವ್ಯಕ್ತಿಪಡಿಸಿದರು. "ಬರೋರೆಲ್ಲಾ ಸಮಯಕ್ಕೆ ಸರಿಯಾಗಿ ನಮ್ಮ ಮನೆಗೆ ಬಂದುಬಿಡಿ. ಎಲ್ಲರೂ ಒಟ್ಟಿಗೇ ಒಂದೇ ಸಲಕ್ಕೆ ಹೊರಟು ಬಿಡೋಣ. ಎಷ್ಟು ಜನರು ಬರೋರಿದೀರಿ ಅಂತ ಗೊತ್ತಾದ್ರೆ, ಒಂದಲ್ಲ, ಎರಡು ಬಸ್ಸುಗಳನ್ನು ಮಾಡ್ಕೊಂಡು ಕರೆದ್ಕೊಂಡು ಹೋಗ್ತೀನಿ" ಅಣ್ಣತಮ್ಮಂದಿರು ಹೇಳಿದ್ದರು.

"ಸರಿ ನಾಲ್ಕು ದಿನ ಮುಂಚಿತವಾಗಿ ನಾವು ಬರ್ತೀವಿ ಅಥವಾ ಇಲ್ಲ ಅನ್ನೋದನ್ನ ಖಂಡಿತಾ ತಿಳಿಸ್ತೀವಿ ನಮ್ಮಿಂದ ನಿಮಗೆ ತೊಂದರೆ ಆಗಬಾರದು" ಅವರುಗಳು ತಮ್ಮ ಸೌಜನ್ಯವನ್ನು ತೋರಿದರು.

"ವನಜ, ಪ್ರಶಾಂತನಿಗೆ ಪೋನು ಮಾಡು, ಎರಡು ದಿನ ಮುಂಚಿತವಾಗಿ ಬರಲಿ" ಅನಂತ ಹೇಳಿದ.

"ನಾಲ್ಕೈದು ದಿನಗಳ ರಜ ಇದೆಯೋ ಇಲ್ಲವೋ. ಹಿಂದಿನ ದಿನ ಬಂದರೆ ಸಾಕು. ರಜ ಇಲ್ಲದೇ ಬರೋಕೆ ಆಗದಿದ್ರೆ, ಅವನನ್ನ ಬೈಯಬೇಡಿ" ವನಜ ಮೊದಲೇ ನಿಬಂಧನೆಯನ್ನು ಹಾಕಿದಳು.

"ಪಲ್ಲವಿಗೆ ಈಗಲಿಂದ್ಲೇ ಹೇಳಿ ಒಪ್ಪಿಸು. ಬರದೇ ಇದ್ದಾಳು ಮನೆಯವಳು ಅವಳೇ ಬರದಿದ್ದರೆ, ಕೇಳಿದವರಿಗೆ ಏನು ಹೇಳೋಣ"

"ಕೇಳಿದವರಿಗೆ ನಾನು ಹೇಳ್ತೀನಿ. ಹೆಂಗಸರ ಅನುಕೂಲ, ಅನಾನುಕೂಲದ ವಿಷಯ ನಿಮಗೆ ಹೇಗೆ ಗೊತ್ತಾಗುತ್ತೆ! ಅವಳು ಬರಲ್ಲ ಅಂತಂದ್ರೆ ನಾನು ಬವಲಂತ ಮಾಡಲ್ಲ"

"ದೊಡ್ಡೋಳಾಗಿ ನೀನೇ ಹೀಗೆ ಮಾತಾಡ್ತಿಯಲ್ಲ. ನಿಂಗೆ ಜವಾಬ್ದಾರಿ ಬೇಡ್ವಾ?"

"ನಂಗೆ ಜವಾಬ್ದಾರಿ ಇದೆ. ನಾನು ಬರಲ್ಲ ಅಂತ ಹೇಳಿಲ್ಲ, ಮಕ್ಕಳಿಗೆ ಬಲವಂತ ಮಾಡೋದು ಬೇಡ ಅಂತಂದೆ. ಅವರ ಪಾಡಿಗೆ ಅವರನ್ನು ಬಿಡೋಣ"

"ನಿಮ್ಮತನ್ನ ಕೇಳಿದ್ರೆ ನನ್ನನ್ನ ಆಡ್ಕೋತಾರೆ, ನಾನೇ ಪಲ್ಲವಿಯ ಹತ್ತಿರ ಮಾತಾಡ್ತೀನಿ. ಬರಲ್ಲ ಅಂತ ಅದ್ಹೇಗೆ ಹೇಳ್ತಾಳೆ ನಾನೂ ನೋಡ್ತೀನಿ. ಪ್ರಕಾಶಂಗೂ ನಾನೇ ಫೋನು ಮಾಡಿ ಬರ್ಲೇಬೇಕು ಅಂತ ಹೇಳ್ತೀನಿ"

"ಹಾಗೆ ಮಾಡಿ ಇದುವರೆಗೆ ಮಾಡ್ದೇ ಇದ್ದ ಕೆಲಸನಾ, ಇನ್ಮೇಲಾದ್ರೂ ಮಾಡಿ" ಎಂದು ಸ್ವಲ್ಪ ಒರಟಾಗಿಯೇ ಹೇಳಿ ಅಲ್ಲಿಂದ ಎದ್ದು ಹೋಗಿದ್ದಳು. ಅನಂತ ಅವಳನ್ನು ಕೆಕ್ಕರಿಸಿ ನೋಡಿದ.

ಭವಾನೀ ಮೊದಲೇ ತನ್ನ ಮಕ್ಕಳಿಗೆ ಹೇಳಿಬಿಟ್ಟಿದ್ದಳು, "ಬಟ್ಟೆಗಳನ್ನೆಲ್ಲ ಇಸ್ತ್ರಿ ಮಾಡಿಟ್ಟುಕೊಳ್ಳಿ. ಕ್ಯಾಮೆರಾಕ್ಕೆ ಫಿಲಂ ಹಾಕಿಸ್ಕೊಂಡು ಬನ್ನಿ. ನಿಮ್ಮ ಫ್ರೆಂಡ್ಸ್ ಯಾರಾದ್ರೂ ಬರೋರಿದ್ರೆ ಅವರೂ ಬರಲಿ. ಒಂದೇ ವಯಸ್ಸಿನವರು ನಾಲ್ಕಾರು ಜನ ಇದ್ದರೆ ಬೋರ್ ಆಗಲ್ಲ. ಇಲ್ದಿದ್ರೆ, ಆ ಪೂಜೆ ಪುನಸ್ಕಾರಗಳಲ್ಲಿ ನಿಮಗೆ ಏನು ಇಂಟರೆಸ್ಟ್ ಇರುತ್ತೆ? ಆಶ್ರಮ ಎಂದಮೇಲೆ ಮರ, ಗಿಡ, ಹಕ್ಕಿ ಪಕ್ಷಿ ಎಲ್ಲಾ ಇರುತ್ತೆ.... ಮಜವಾಗಿ ಕಾಲ ಕಳೆಯಬಹುದು"

"ಅಮ್ಮ ನನ್ನ ಕಲೀಗ್ಸ್‌ನೂ ಕರ್‍ಕೊಂಡು ಬರ್ಲಾ?" ರಮೇಶ ಕೇಳಿದ್ದ

"ಬರೋದಾದ್ರೆ ಬರಲಿ... ಅಲ್ವೇನ್ರೀ?" ರಮಾಕಾಂತನನ್ನು ಕೇಳಿದ್ದಳು.

"ಬರಲಿ ನಾವೇನು ಎತ್ಕೊಂಡು ಹೋಗ್ಬೇಕಾ! ಬಸ್ಸು ಎಲ್ರನ್ನು ಹೊತ್ಕೊಂಡು ಹೋಗುತ್ತೆ" ತಮಾಷೆ ಮಾಡಿದ ಎಲ್ಲರೂ ಕಿಸ ಕಿಸ ನಕ್ಕಿದ್ದರು.

ಬೆಳಿಗ್ಗೆ ಅಲಾರಾಂ ಹೊಡೆಯುವ ಮೊದಲೇ ಅನಂತನಿಗೆ ಎಚ್ಚರವಾಯಿತು. ವನಜಳನ್ನು ಎಬ್ಬಿಸಿದ. ಪಲ್ಲವೀನ, ಪ್ರಶಾಂತನನ್ನು ಎಬ್ಬಿಸು, ಬೇಗ ರೆಡಿಯಾಗಲಿ. ಪ್ರಕಾಶ ಬರಲೇ ಇಲ್ಲ" ಗೊಣಗಿಕೊಂಡ. ವನಜ ಆಕಳಿಸುತ್ತಾ ಎದ್ದಳು.

"ಮುಖ ತೊಳೆದು ಕಾಫಿ ಮಾಡಿ ಬಿಡ್ತೀನಿ.... ಆಮೇಲೆ ಸ್ನಾನ ಮಾಡಿ ಇಬ್ಬರನ್ನು ಎಬ್ಬಿಸ್ತೀನಿ. ಬೇಗ ಎದ್ದು ಏನ್ಮಾಡ್ಬೇಕು!" ಬೇಸರದಿಂದ ಕೇಳಿದಳು.

"ಮೇಲಿನ ಮನೆಯಲ್ಲಿ ಆಗಲೇ ದಡ ದಡ ಸದ್ದು ಕೇಳಿಸ್ತಿತ್ತು. ಭವಾನಿ ಮಕ್ಕಳು ಎಲ್ರೂ ಎದ್ದಿರ್ಬೇಕು" ಎದ್ದು ಬಚ್ಚಲ ಮನೆಯ ಕಡೆಗೆ ನಡೆದ.

"ಹೋಗಿ ನೋಡ್ಕೊಂಡ್ಬನ್ನಿ.... ಮೊದ್ಲು ನಾನು ಮುಖ ತೊಳೆದ್ಕೊಂಡು ಬರ್ತೀನಿ." ಎಂದು ಹೇಳಿ ಅವನಿಗಿಂತ ಮುಂಚೆ ಬಚ್ಚಲ ಮನೆಯನ್ನು ಹೊಕ್ಕಳು, ಇವರುಗಳು ಒಬ್ಬೊಬ್ಬರಾಗಿ ಎದ್ದು ಸ್ನಾನ ಮಾಡಿ, ಸಿದ್ಧರಾಗುವ ವೇಳೆಗೆ, ಭವಾನಿ ಮಕ್ಕಳೊಂದಿಗೆ ಕೆಳಗೆ ಇಳಿದು ಬಂದಿದ್ದಳು. ರಮಾಕಾಂತ ತನ್ನ ಮನೆಯ ಮುಂಬಾಗಿಲಿಗೆ ಬೀಗವನ್ನು ಹಾಕಿ ಕೆಳಗಿಳಿದು ಬಂದ.

"ಅಕ್ಕಾ ಎಲ್ಲಾ ರೆಡೀನಾ? ಸುಗುಣ ಎಲ್ಲಿ ಕಾಣ್ತೀಲ್ಲ? ಭವಾನಿ ಕೇಳಿದಳು.

"ಅವಳು ಮನೆಯ ತೋಟದಲ್ಲಿ ಬಿಟ್ಟಿರುವ ನಾಲ್ಕು ಹೂಗಳನ್ನು ಕೊಯ್ಕೊಂಡು ಬರ್ತೀನಿ ಅಂತ ಹೋದ್ಲು. ಶ್ರೀನಾಥನೂ ಬುಟ್ಟಿಯನ್ನು ಹಿಡ್ಕೊಂಡು ಹೋಗಿದಾನೆ. ಅವರಿಬ್ಬರದ್ದೂ ಸ್ನಾನ ಆಗಿದೆ. ಮಾಧವಿ ಸ್ನಾನಕ್ಕೆ ಹೋಗಿದಾಳೆ. ಆನಂದ, ಮುಕುಂದ ಅವಳು ಹೊರಕ್ಕೆ ಬರುವುದನ್ನೇ ಕಾಯ್ತಿದಾರೆ" ಅವಳು ಕೇಳಿದ ಪ್ರಶ್ನೆಗಳಿಗೆಲ್ಲಾ ಉತ್ತರವನ್ನು ಹೇಳಿದ್ದಳು

"ಅತ್ತಿಗೆ ಕಾಫಿ ಇದ್ದರೆ ಕೊಡ್ತೀರಾ! ಇವಳು ಮಾಡಿದ್ದನ್ನೆಲ್ಲಾ ಪ್ಲಾಸ್ಕಿನೊಳಕ್ಕೆ ತುಂಬಿಸಿಬಿಟ್ಟಿದ್ದಾಳೆ, ಬಸ್ಸಿನಲ್ಲೇ ಅಂತೆ ಕೊಡುವುದು" ಹೆಂಡತಿಯ ಕಡೆ ನೋಡಿದ.

"ಅದಕ್ಕೇನಂತೆ! ನಿಮಗೂ ಕೊಡ್ತೀನಿ ನಿಮ್ಮಣ್ಣನಿಗೂ ಕೊಡ್ತೀನಿ, ಸುಗುಣ ಈಗ್ತಾನೇ ಬೆರಸಿಟ್ಟಿದ್ದಳು" ಅಗತ್ಯಕ್ಕಿಂತ ಹೆಚ್ಚಿನ ಮಾತನ್ನು ಆಡಿದಳು.

"ನಂಗೆ ಬೇಡ, ಮತ್ತೆ ಮತ್ತೆ ಕುಡಿದರೆ, ಬಚ್ಚಲು ಮನೆಗೆ ಹೋಗಬೇಕಾಗುತ್ತೆ" ಅನಂತ ನಕಾರವನ್ನು ಸೂಚಿಸಿದ. ರಮಾಕಾಂತ ನಕ್ಕ.

"ಹೋಗ್ಬೇಕು ಅಂತ ಅನ್ನಿಸಿದರೆ ಇಳಿದು ಹೋದ್ರಾಯ್ತು, ಬಸ್ಸು ನಮ್ಮದೇ ನಿಲ್ಲಿಸು ಅಂತಂದ್ರೆ ನಿಲ್ಲಿಸ್ತಾನೆ" ಅದ್ಯಾವ ದೊಡಡ ಸಮಸ್ಯೆ ಎಂಬಂತೆ ಉತ್ತರಿಸಿದ.

"ಬೇಡ ರಮಾಕಾಂತ, ಪ್ರತಿ ಸಲವೂ ಕೈ ಕಾಲು ತೊಳೆಯೋಕೆ ನೀರು

ಎಲ್ಲಿ ಸಿಗುತ್ತೆ ಎರಡು ಗಂಟೆಗಳ ಪ್ರಯಾಣ ಅಷ್ಟೇ, ಇಲ್ಲಿ ಹತ್ತೋದು ಅಲ್ಲಿ ಇಳಿಯೋದು ಮಧ್ಯೆ ಎಲ್ಲಿಯೂ ನಿಲ್ಲಿಸೋದು ಬೇಡ"

"ಸರಿ ನಿನ್ನಿಷ್ಟ... ಅತ್ತಿಗೆ ನಂಗೆ ಕಾಫಿ ಕೊಡಿ, ನಿಮ್ಮ ಗಂಡಂಗೆ ಬೇಡ್ವಂತೆ," ಎಂದು ಕುಳಿತಿದ್ದಲ್ಲಿಂದಲೇ ಕೂಗಿ ಹೇಳಿದ. ಭವಾನಿ ಕಿಟಕಿಯ ಬಳಿ ನಿಂತು ಬಸ್ಸು ಕಾಣುವುದೇನೋ ಎಂದು ಕಣ್ಣು ಹಾಯಿಸಿದಳು. ಸುಗುಣ ಹೂವಿನ ಬುಟ್ಟಿಯನ್ನು ಹಿಡಿದು ಒಳಗೆ ಬಂದಳು.

"ರಸ್ತೇಲಿ ಎಲ್ಲಾದ್ರೂ ಕಟ್ಟಿದ ಹೂವನ್ನು, ಬಿಡಿ ಹೂವನ್ನು ತಗೊಂಡಿದ್ರೆ ಆಗ್ತಿತ್ತು. ಸುಗುಣಾ ಮನೆ ಹೂವು ಎಷ್ಟು ಮಹಾ ಇದೆ"

"ಮನೆಯಲ್ಲಿ ಬಿಡುವ ಹೂವು ಶ್ರೇಷ್ಠವಾದುದು. ಆಶ್ರಮದ ದೇವಸ್ಥಾನಕ್ಕೆ ಪೂಜೆಗೆ ಹಣ್ಣು ಕಾಯಿ ಎಲ್ಲವನ್ನೂ ತೆಗೆದಿಟ್ಟುಕೊಂಡಿದೀನಿ. ಅದರ ಜತೇಲಿ ಹೂವನ್ನು ಇಡ್ತೀನಿ" ಎನ್ನುತ್ತಾ ಹೂವನ್ನು ತೆಗೆದಿಟ್ಟಳು. ಕೆಲವನ್ನು ಮನೆಯ ದೇವರ ಪಟಗಳಿಗೆ ಇಟ್ಟಳು. ಮಾಧವಿ ಬೇಗ ಬಾ... ಆಯ್ತೋ ಇಲ್ವೋ? ಇನ್ನ, ಇವರಿಬ್ರೂ ಕಾಯ್ತಿದಾರೆ...." ಹೊರಗಿನಿಂದ ಕರೆದಳು. ನೀವಿಬ್ರೂ ಬೇಗ ಬೇಗ ಸ್ನಾನ ಮಾಡ್ಬೇಕು. ಇಲ್ಲದಿದ್ರೆ ಅಪ್ಪ ರೇಗ್ತಾರೆ ತಿಳೀತಾ?" ಗಂಡು ಮಕ್ಕಳನ್ನು ಎಚ್ಚರಿಸಿದಳು.

"ಅಕ್ಕಾ ಏನೇ ಮಾಡಿದ್ರೂ ನೀವಿಬ್ರೂ ಸುಮ್ಮನಿರ್ತೀರಿ. ನಮಗೆ ಮಾತ್ರ ಸದಾ ಬುದ್ಧಿನ ಹೇಳ್ತಾನೇ ಇರ್ತೀರಿ" ಅವರಿಬ್ಬರೂ ತಾಯಿಯ ಕಡೆ ತಿರುಗಿ ನುಡಿದರು.

"ಮಾತಿಗೆ ಮಾತು ಆಡಿದ್ರೆ, ಬೀಳುತ್ತೆ ಏಟು," ಸುಗುಣ ಕಣ್ಣು ಬಿಟ್ಟು ಹೆದರಿಸಿದಳು.

"ಸುಮ್ಮನೇ ಬೆಳಿಗ್ಗೆ ಬೆಳಿಗ್ಗೇನೇ ಮಕ್ಕಳನ್ನು ಯಾಕೆ ಗದರ್ತೀಯಾ, ಸುಗುಣಾ? ಇಬ್ಬರಿಗೂ ನಿದ್ದೆ ಗಣ್ಣು ಕನಸು ಕಾಣುವ ಸಮಯ ಅಲ್ವೇನ್ರೋ? ನಂದು, ಕುಂದು?" ಭವಾನಿ ಇಬ್ಬರ ಕೆನ್ನೆಯನ್ನು ಚಿವುಟಿದಳು.

"ದೊಡ್ಡಮ್ಮ ಅಮ್ಮ ಬರೀ ಗದರಿದ್ಲು, ನೀವು ಚಿವುಟ್ತಾ ಇದೀರಿ, ನೋಯುತ್ತೆ" ಇಬ್ಬರೂ ಕೆನ್ನೆಯನ್ನು ಉಜ್ಜಿಕೊಂಡರು. ಭವಾನಿಯ ಮಕ್ಕಳು ಕಿಸ ಕಿಸ ನಕ್ಕರು. ದೂರದಲ್ಲಿ ಕುಳಿತಿದ್ದ ಪಲ್ಲವಿ, ಪ್ರಶಾಂತ ಮೂಕ ಪ್ರೇಕ್ಷಕರಂತೆ ಅಲ್ಲಿ ನಡೆಯುತ್ತಿದ್ದನ್ನು ನೋಡುತ್ತಿದ್ದರು.

"ಬಚ್ಚಲು ಮನೆಯಿಂದ ಹೊರಬಂದ ಮಾಧವಿ "ಅಮ್ಮಾ ನಾನು ಬರಲ್ಲಮ್ಮ. ಯಾಕೋ ತಲೆ ನೋಯ್ತಿದೆ" ಎಂದು ಹೇಳಿ ತಲೆಯನ್ನು ಹಿಡಿದುಕೊಂಡು ಅಲ್ಲಿಯೇ ಕುಳಿತಳು. ತಮ್ಮಂದಿರು ಬಚ್ಚಲ ಮನೆಯ ಕಡೆಗೆ ಓಡಿದರು.

"ಬಿಸಿ ಬಿಸಿ ಕಾಫಿ ಕುಡಿ ಎಲ್ಲಾ ಸರಿ ಹೋಗುತ್ತೆ. ಮನೇಲಿ ಒಬ್ಬಳನ್ನೇ ಹೇಗೆ ಬಿಟ್ಟು ಹೋಗುಕ್ಕಾಗುತ್ತೆ" ಸುಗುಣ ಎಂದಳು.

"ಏನಾದ್ರೂ ಒಂಚೂರು ತಿಂದು, ತಲೆ ನೋವಿಗೆ ಮಾತ್ರೆಯನ್ನು ನುಂಗು ಮಾಧವಿ. ನೋವು ಕಡಿಮೆ ಆಗುತ್ತೆ. ಹೋಗೋ ಉಮೀ, ಡೈನಿಂಗ್ ಟೇಬಲ್ ಮೇಲೆ ಸ್ಪೆಷಲ್ ಬ್ರೆಡ್ ಇದೆ. ತಂದುಕೊಡು" ಚಿಕ್ಕಮಗನನ್ನು ಕಳಿಸಿದಳು ಅವನು ತಂದುಕೊಟ್ಟ.

"ಬೇಡ ದೊಡ್ಡಮ್ಮಾ, ಇಷ್ಟು ಹೊತ್ತಿಗೇ ಏನೂ ಸೇರಲ್ಲ, ನಿಧಾನವಾಗಿ ತಿಂತೀನಿ. ಮಾತ್ರೇನೂ ತಗೋತೀನಿ"

"ಸುಗುಣಾ ನೀನು ಸುಮ್ಮನೇ ಮಕ್ಕಳನ್ನು ಅಪ್ಪ ಹಾಗಂತಾರೆ, ಹೀಗಂತಾರೆ ಅಂತ ಹೇಳಿ ಹೆದರಿಸ್ತೀಯಾ? ಅವನು ಮಕ್ಕಳ ಮೇಲೆ ಗದರಿದ್ದನ್ನೇ ನಾನು ಕಂಡಿಲ್ಲ, ಭಾವನೂ ಅಷ್ಟೇ, ಮಕ್ಕಳನ್ನು ಜೋರಾಗಿ ಕೂಗಿದ್ದನ್ನು ಕೇಳಿಲ್ಲ, ಇವರೊಬ್ಬರೇ ಮಕ್ಕಳನ್ನು ಗದರಿಸೋದು. ಮಕ್ಕಳು ಕೂತರೆ ತಪ್ಪು, ನಿಂತರೆ ತಪ್ಪು ನಿನ್ನ ಭಾವನಿಗೆ." ಭವಾನಿ ಗಂಡನ ಕಡೆ ನೋಡುತ್ತಾ ನುಡಿದಳು.

"ಅಮ್ಮಾ ಯಾಕಮ್ಮಾ ಸುಳ್ಳು ಹೇಳ್ತೀಯಾ? ಅಪ್ಪ ನಾವು ಏನೇ ಮಾಡಿದ್ರೂ ಸುಮ್ಮನಿರ್ತಾರೆ. ನೀನೇ ಹೋಂ ವರ್ಕ ಆಯ್ತ! ಬೇಗ ಬೇಗ ರೆಡಿಯಾಗ್ಬಾರ್ದಾ? ಅದ್ಯಾಕೆ ಅಲ್ಲಿದೆ, ಇದ್ಯಾಕೆ ಇಲ್ಲಿದೆ? ಅಂತ ಗದರೋದು" ದಿನೇಶ ಎಲ್ಲರ ಎದುರಿಗೆ ಭವಾನಿಯ ಮಾತನ್ನು ಅವಳಿಗೇ ತಿರುಗಿಸಿದ. ಅವಳ ಮುಖ ಪೆಚ್ಚಾಗಿತ್ತು.

"ನೀವೇ ಹೇಳಿ ಭಾವ ನೀವು ಮೇಷ್ಟ್ರು ಆಗಿರೋರು, ಮಕ್ಕಳಿಗೆ ಶಿಸ್ತು ಮುಖ್ಯ ಅಲ್ವಾ? ಪುಸ್ತಕ, ಚೀಲ, ಎಲ್ಲೆಲ್ಲೋ ಬಿದ್ದಿರುತ್ತೆ. ಸ್ಕೂಲಿಗೆ ಹೊರಡುವ ಸಮಯದಲ್ಲಿ ಎಲ್ಲವನ್ನು ಗಡಿಬಿಡಿಯಿಂದ ತುರುಕಿಟ್ಟುಕೊಳ್ತಾರೆ ಅದಕ್ಕೇ ಹೇಳ್ತೀನಿ. ತಪ್ಪಾ?"

"ತಪ್ಪೇನಿಲ್ಲ ಭವಾನಿ. ಮಕ್ಕಳಿಗೆ ತಂದೆ ತಾಯಿ ತಿಳುವಳಿಕೆಯನ್ನು ಹೇಳಲೇಬೇಕು. ಅಮ್ಮ ಅಪ್ಪ ನಮಗೂ ತಿಳುವಳಿಕೆ ಹೇಳುತ್ತಿದ್ದರು. ನಮ್ಮನ್ನು ಶಿಸ್ತಿನಿಂದ ಬೆಳೆಸಿದರು. ಆದ್ದರಿಂದಲೇ ನಾವುಗಳು ಇಷ್ಟರಮಟ್ಟಿಗೆ ಮುಂದೆ ಬಂದಿರುವುದು" ಅನಂತ ಉಪನ್ಯಾಸವನ್ನೇ ನೀಡಿದ.

ಶ್ರೀನಾಥ ಮೊಬೈಲ್‌ನ್ನು ಕೈಯಲ್ಲಿ ಹಿಡಿದು ಒಳಬಂದ. ಬಸ್ಸು ಇನ್ನು ಹದಿನೈದು ಇಪ್ಪತ್ತು ನಿಮಿಷಗಳಲ್ಲಿ ಮನೆಯ ಬಳಿಗೆ ಬರುತ್ತೆ, ಎಲ್ಲರೂ ಸಿದ್ಧವಾಗಿದೀರಿ ತಾನೇ? ಆನಂದ, ಮುಕುಂದ ಎಲ್ಲಿ? ಇವಳ್ಯಾಕೆ ಹೀಗೆ ಕೂತು ಬಿಟ್ಟಿದ್ದಾಳೆ?" ಮಗಳ ಕಡೆ ತಿರುಗಿ ಕೇಳಿದ.

"ತಲೆ ನೋವಂತೆ, ಪಿತ್ತ ಆಗಿರಬಹುದು. ಯಾವಾಗ ನೋಡಿದ್ರೂ

ಪರೀಕ್ಷೆ ಪರೀಕ್ಷೆ ಅಂತ, ಸರಿಯಾಗಿ ನಿದ್ದೆ ಇಲ್ಲ, ಹೊಟ್ಟೆ ತುಂಬಾ ತಿನ್ನಲ್ಲ" ಸುಗುಣ ಅಲವತ್ತುಕೊಂಡಳು.

"ಸ್ಲಿಂ ಆಗಿರ್ಬೇಕು ಅಂತ ಹೆಚ್ಚು ತಿನ್ನಲ್ಲ. ಹೊಟ್ಟೆ ಅರೆ ಖಾಲಿ ಇರೋದ್ರಿಂದ ನಿದ್ದೆ ಬರಲ್ಲ. ಮಾಧವಿ ನನ್ನನ್ನು ನೋಡು ಹೇಗಿದೀನಿ. ಹೊಟ್ಟೆ ತುಂಬಾ ತಿಂತೀನಿ. ಕಣ್ತುಂಬಾ ನಿದ್ದೆ ಮಾಡ್ತೀನಿ. ಡಯಟ್ ಅನ್ನುವ ಪದಕ್ಕೆ ಅರ್ಥವೇ ಗೊತ್ತಿಲ್ಲ ನನಗೆ" ಭವಾನಿ, ಜೋಕಿನಂತೆ ಹೇಳಿ ನಕ್ಕಳು ಮಾಧವಿ ನಕ್ಕಂತೆ ಮಾಡಿದಳು

"ಬಸ್ಸು ಬಂತು ಅಂತ ಕಾಣುತ್ತೆ.... ವನಜಾ, ಪಲ್ಲವಿ.... ಹೊರಡಿ" ಅನಂತ ಅವಸರಿಸಿದ.... ವನಜ ತಾನು ಸಿದ್ಧ ಮಾಡಿಟ್ಟುಕೊಂಡಿದ್ದ ಚೀಲಗಳನ್ನೆತ್ತಿಕೊಂಡಳು.

"ಮೊದಲು, ದೊಡ್ಡವರಿಗೆ, ಹೆಂಗಸರಿಗೆ ಸೀಟುಗಳನ್ನು ಬಿಟ್ಟು ಕೊಡ್ಬೇಕು. ಚಿಕ್ಕವರೆಲ್ಲಾ ಮೊದಲು ಹತ್ತಿ ಕೂತ್ಕೊಂಡು ಬಿಡ್ಬೇಡಿ" ಶ್ರೀನಾಥ ತನ್ನ ಮಕ್ಕಳ ಕಡೆ ನೋಡಿ ಹೇಳಿದ.

ಬ್ರೆಡ್ಡನ್ನು ತಿಂದು ಕಾಫಿಯನ್ನು ಅಸಹ್ಯಿಸಿಕೊಂಡು ಕುಡಿದ ಮಾಧವಿ ಮಾತ್ರೆಯನ್ನು ನುಂಗುವ ಮೊದಲೇ ಬಚ್ಚಲ ಮನೆಗೆ ಓಡಿ ಹೋಗಿ ಕಕ್ಕಿ ಬಂದಳು. "ಒಳ್ಳೇದೇ ಆಯ್ತು, ಪಿತ್ತವೆಲ್ಲಾ ಆಚೆಗೆ ಹೋಯ್ತು. ಇನ್ನು ನೋವು ಕಡಿಮೆ ಆಗಿ ಹಾಯಾಗುತ್ತೆ. ನೀನು ಕಿಟಕಿಯ ಬಳಿಯ ಸೀಟಿನಲ್ಲಿ ಕೂತ್ಕೋ" ಭವಾನಿ ತಾನೇ ಸಲಹೆಯನ್ನು ನೀಡಿದಳು.

"ಬರೋರೆಲ್ಲಾ, ಬಸ್ಸಿನ ಬಳಿ ನಿಂತಿದಾರೆ. ಹೆಂಗಸರನ್ನು ಈಗಲೇ ಕರೆದು ಕುಂಕುಮ ಕೊಡೋದೋ ಅಥವಾ ಬರುವಾಗ ಕರೆದು ಕೊಟ್ಟರೆ ಆಗುತ್ತೋ" ಸುಗುಣ ವನಜಳನ್ನು ಕೇಳಿದಳು.

"ಈಗ ಬೇಡ. ಅಲ್ಲಿ ಗೋಪೂಜೆಯೆಲ್ಲಾ ಆದಮೇಲೆ ಅಲ್ಲಿಯೇ ಕೊಟ್ಟರಾಯ್ತು. ವಾಪಸ್ಸು ಬರುವಾಗ ಎಲ್ಲರಿಗೂ ಬೇಗ ಮನೆಗೆ ಹೋಗುವ ಅವಸರ... ಅವರ್‍ಯಾರೂ ಇಲ್ಲಿಯತನಕ ಬರ್ತಾರೋ ಇಲ್ಲವೋ....?"

"ಹೌದು ಅಕ್ಕ ಹೇಳೊದು ಸರಿ, ಈಗಾಗ್ಲೇ ಹೊತ್ತಾಗಿದೆ. ಬರುವಾಗ ಯಾರೂ ನಮ್ಮ ಕೈಗೆ ಸಿಗುವುದಿಲ್ಲ. ಆಶ್ರಮದಲ್ಲಿ ಎಲ್ಲರೂ ಒಟ್ಟಿಗೇ ಸೇರಿರುವಾಗ ಕೊಡುವುದೇ ಸರಿ"

"ಆಶ್ರಮ ಎಂದಮೇಲೆ, ಇಂತಹ ಕಾರ್ಯಕ್ರಮ ಎಂದಮೇಲೆ ಪರಿಚಯ ಇಲ್ಲದವರು ಕೂಡಾ ಬಂದು ಸೇರಿಕೊಳ್ತಾರೆ. ಜನಕ್ಕೆ ಜನ ಆಗುತ್ತಲ್ಲ ಅಕ್ಕಾ" ಆತಂಕವನ್ನು ತೋರಿದಳು.

"ಆಗಲಿ ಬಿಡು, ನಾನೂ ಒಂದಿಷ್ಟು ಹತ್ತರ ನೋಟುಗಳನ್ನು

ತೆಗೆದಿಟ್ಟುಕೊಂಡಿದೀನಿ, ದಾನ ಕೊಡುವಾಗ ಭೇದ ಮಾಡಬಾರದು" ವನಜ ಎಂದಳು. ಭವಾನಿ ತನ್ನ ಹ್ಯಾಂಡ್‌ಬ್ಯಾಗನ್ನು ತೆಗೆದು ಅದರಲ್ಲಿದ್ದ ಹಣವನ್ನು ಎಣಿಸಿಟ್ಟುಕೊಂಡಳು. ಸುಗುಣ ತನ್ನಲ್ಲಿದ್ದ ಹಣವನ್ನು ಅವಳ ಕೈಗೇ ಕೊಟ್ಟಳು. ಮೂವರೂ ಮನೆಯಿಂದ ಹೊರಗೆ ಬಂದರು ರಮಾಕಾಂತ ಎಲ್ಲರನ್ನು ಹೊರಡಿಸಿ, ಮನೆಯ ಮುಂಬಾಗಿಲಿಗೆ ಬೀಗವನ್ನು ಹಾಕಿ ಬೀಗದ ಕೈಯನ್ನು ಹೆಂಡತಿಯ ಕೈಗೆ ಕೊಟ್ಟ.

ಫುಟ್‌ಪಾತ್‌ನಲ್ಲಿ ನಿಂತಿದ್ದ ಹಿರಿಯರೆಲ್ಲರೂ ಬಸ್ಸನ್ನು ಹತ್ತಿ, ಸೀಟುಗಳನ್ನು ಹುಡುಕಿಕೊಂಡು ಕುಳಿತಿದ್ದರು. ಪಲ್ಲವಿ, ವನಜಳ ಪಕ್ಕ ಕುಳಿತಳು. ಮಾಧವಿ, ತನ್ನ ಇಬ್ಬರು ಸ್ನೇಹಿತೆಯರೊಂದಿಗೆ, ಹಿಂದಿನ ಸೀಟಿನಲ್ಲಿ ಕುಳಿತಿದ್ದಳು. ಬಸ್ಸು ಸ್ವಲ್ಪ ದೂರ ಚಲಿಸಿತ್ತು. ಬಸ್ಸು ಎತ್ತಿ ಹಾಕಲಾರಾಂಭಿಸಿದಾಗ ಮಾಧವಿಯ ಹೊಟ್ಟೆ ತೊಳುಸುವಿಕೆ ಹೆಚ್ಚಾಗಿತ್ತು, ತಡೆಯಲಾರದೇ ಕಿಟಕಿಯಿಂದ ತಲೆಯನ್ನು ಹೊರಹಾಕಿ ಮತ್ತೆರಡು ಬಾರಿ ವಾಂತಿ ಮಾಡಿದ್ದಳು. ಅಲ್ಲೇ ಮುಂದಿನ ಸೀಟಿನಲ್ಲಿ ಕುಳಿತಿದ್ದ ಸುಗಣಳ ತಮ್ಮನ ಹೆಂಡತಿಗೆ ತಿಳಿಯಿತು. ಮಾಧವಿಯ ಸಂಕಟವನ್ನು ಗಮನಿಸಿದಳು ಹುಶಾರಿಲ್ಲದ ಈ ಹುಡುಗಿಯನ್ನು ಅಷ್ಟು ದೂರ ಕರೆದುಕೊಂಡು ಹೋಗುವುದು ಸರಿಯಲ್ಲ ಎಂದುಕೊಂಡು ತೂರಾಡಿಕೊಂಡು ಸುಗುಣಳ ಬಳಿಗೆ ಬಂದಳು.

"ಅತ್ತಿಗೇ ಮಾಧವಿಗೆ ಹುಶಾರಿಲ್ಲ. ಹೀಗೆ ಅವಳು ಪ್ರಯಾಣ ಮಾಡಕ್ಕೆ ಆಗುತ್ತಾ? ನಮ್ಮ ಮನೆಗೆ ಕರ್ರೊಂಡು ಹೋಗ್ತೀನಿ. ಅವಳು ರೆಸ್ಟ್ ತಗೊಳ್ಳಲಿ. ನೀವುಗಳು ನಿಶ್ಚಿಂತೆಯಿಂದ ಹೋಗ್ಬನ್ನಿ. ನಾನು ಅವಳನ್ನು ನೋಡ್ಕೊಳ್ತಿನಿ" ಎಂದಳು.

"ಏನಾಯ್ತು ಈ ಹುಡುಗಿಗೆ? ನೀನು ಹೇಳೀದು ಸರಿ. ಅವಳು ಹೊಟ್ಟೆಯಲ್ಲಿ ಸಂಕಟವನ್ನಿಟ್ಟುಕೊಂಡು ಅಲ್ಲಿಗೆ ಬಂದು ಒದ್ದಾಡೋದು ಯಾಕೆ? ನಿನಗೆ ಬರೋದು ತಪ್ಪಿ ಹೋಗುತ್ತಲ್ಲಾ ರಾಧಾ" ಎಂದಳು.

"ಪರವಾಗಿಲ್ಲ ಈಗ ನೀವುಗಳು ಹೋಗಿ ಬರುವುದು ಮುಖ್ಯ. ನಾವು ಇಲ್ಲಿಂದ ರಿಕ್ಷಾದಲ್ಲಿ ಮನಗೆ ಹೋಗ್ತೀವಿ" ಎಂದು ಹೇಳಿ ಒಪ್ಪಿಸಿದಳು. ಬಸ್ಸು ನಿಂತಿತು. ರಾಧಾ ಮಾಧವಿಯನ್ನ ಅವಳ ಇಬ್ಬರು ಸ್ನೇಹಿತೆಯರನ್ನು ಇಳಿಸಿ ತಾನೂ ಇಳಿದಳು. ಹೆಚ್ಚು ಕಡಿಮೆ ಬಸ್ಸಿನಲ್ಲಿ ಇದ್ದವರಿಗೆಲ್ಲಾ ವಿಚಾರ ತಿಳಿಯಿತು. ಆದರೆ ಯಾರೂ ಹೆಚ್ಚು ಗಮನ ಕೊಡಲಿಲ್ಲ. ಸುಗುಣ ಮಾತ್ರ ಬೇಸರಗೊಂಡಿದ್ದಳು. ಅಪರೂಪಕ್ಕೆ ಮನೆಯಿಂದ ಎಲ್ಲರೂ ಒಟ್ಟಿಗೇ ಹೊರಟಿದ್ದೇವು. ಹೀಗೆ ಆರೋಗ್ಯ ಕೆಡುತ್ತೆ ಅಂತ ನೆನ್ನೆಯೇ ಗೊತ್ತಾಗಿದ್ದಿದ್ದರೆ ಡಾಕ್ಟರ್ ಹತ್ತಿರ ಕರೆದುಕೊಂಡು ಹೋಗಬಹುದಾಗಿತ್ತು ಎಂದಕೊಂಡಳು.

ಹುಬ್ಬು ಗಂಟಿಕ್ಕಿಕೊಂಡು ನೋಡುತ್ತಿದ್ದ ಶ್ರೀನಾಥನಿಗೆ ಕೆಳದನಿಯಲ್ಲಿ ನಡೆದದ್ದನ್ನು ತಿಳಿಸಿದಳು ಬಸ್ಸು ಮತ್ತೆ ಚಲಿಸಿತು.

"ಏನು ಮಕ್ಕಳೋ ಅಪಥ್ಯ ಮಾಡಿಕೊಂಡು ಬಿಡ್ತಾರೆ. ತಾವೂ ನೆಮ್ಮದಿಯಿಂದ ಇರಲ್ಲ ನಮ್ಮನ್ನು ನೆಮ್ಮದಿಯಿಂದ ಇರುಕ್ಕೆ ಬಿಡುಲ್ಲ. ನೀನು ಮೊದಲೇ ವಿಚಾರಿಸಬಾರ್ದಾಗಿತ್ತಾ?" ಹೆಂಡತಿಯ ಮೇಲೆ ರೇಗಿದ.

"ನಂಗೇನು ಗೊತ್ತಿತ್ತು ಹೀಗಾಗುತ್ತೆ ಅಂತ. ಅವಳ ಸ್ನೇಹಿತೆಯರನ್ನು ಕರ್ರೊಂಡು ಹೊರಟಿರ್ಲಿಲ್ವಾ? ಬೆಳಿಗ್ಗೆ ಏಳ್ತಿದ್ದ ಹಾಗೇ ತಲೆನೋವು ಅಂತಾದ್ಲು. ಬಿಡಿ ಕಾರ್ಯಕ್ರಮವನ್ನು ನೋಡುವ ಅದೃಷ್ಟವಿಲ್ಲ. ಇವಳಿಂದ ರಾಧಾಳಿಗೂ ತಪ್ಪಿತು. ಅವಳ ಮನೆಗೆ ಕರ್ರೊಂಡು ಹೋಗಿದಾಳೆ ನೋಡ್ಕೋತಾಳೆ ಬಿಡಿ" ಗಂಡನಿಗೆ ತಾನೇ ಸಮಾಧಾನವನ್ನು ಹೇಳಿದಳು

ಬಸ್ಸು ಆಶ್ರಮವನ್ನು ಸೇರಿತು ಎಲ್ಲರೂ ಇಳಿದು ಆರ್ಶರಮವನ್ನು ಒಳಹೊಕ್ಕರು.

* * *

ಆಶ್ರಮದವರು ಇವರುಗಳನ್ನು ಹಾರ್ದಿಕವಾಗಿ ಸ್ವಾಗತಿಸಿದರು. ಗೋದಾನಕ್ಕೆ ಎಲ್ಲಾ ಸಿದ್ಧತೆಗಳೂ ಆಗಿವೆ. ಎಲ್ಲರೂ ಕೈಕಾಲು ತೊಳೆದು ಬನ್ನಿ. ಮಡಿ ಬಟ್ಟೆಗಳನ್ನು ತೊಟ್ಟುಕೊಳ್ಳಿ. ಶಾಸ್ತ್ರಿಗಳು ಎಲ್ಲವನ್ನು ತೆಗೆದಿಟ್ಟಿದ್ದಾರೆ. ನಿಮ್ಮಗಳ ಬರುವನ್ನೇ ಕಾಯುತ್ತಿದ್ದಾರೆ.

ಎಲ್ಲರೂ ಬಾವಿಯ ಬಳಿಗೆ ಬಂದರು. ಅಲ್ಲಿ ಬಕೆಟ್ಟುಗಳಲ್ಲಿ ಬಾವಿಯ ನೀರನ್ನು ಸೇದಿ ತುಂಬಿಸಿಟ್ಟಿದ್ದರು. ಎಲ್ಲರೂ ಶುದ್ಧವಾದ ನೀರಿನಲ್ಲಿ ಕೈ, ಕಾಲು, ಮುಖವನ್ನು ತೊಳೆದು ಶುಭ್ರವಾದ ವಸ್ತ್ರದಿಂದ ಒರೆಸಿಕೊಂಡರು. ಗೋದಾನದ ಕಲಾಪಗಳಿಗೆ ವ್ಯವಸ್ಥೆ ಮಾಡಿದ್ದ ಸ್ಥಳಕ್ಕೆ ಬಂದರು. ಶಾಸ್ತ್ರಿಗಳು ಅಣ್ಣತಮ್ಮಂದಿರ ಹಣೆಗೆ ಕುಂಕುಮವನ್ನು ಹಚ್ಚಿದರು ಉಳಿದವರೂ ಹಣೆಗೆ ಕುಂಕುಮವನ್ನು ಹಚ್ಚಿಕೊಂಡರು.

"ಎಲ್ಲರೂ ಸುಧಾರಿಸಿಕೊಂಡಿದ್ದರೆ. ಪೂಜಾ ವಿಧಿಯನ್ನು ಪ್ರಾರಂಭಮಾಡೋಣ. ಶಾಸ್ತ್ರಿಗಳು ಹೇಳಿದರು. ಮೊದಲು ಗೋಪೂಜೆ ಮಾಡಬೇಕು ಪೂಜಾ ಸಾಮಾಗ್ರಿಗಳನ್ನು ಎತ್ತಿಕೊಳ್ಳಿ" ಹೆಂಗಸರಿಗೆ ಹೇಳಿದರು ಗೋದಾನಕ್ಕೆ ಸಿದ್ಧಗೊಳಿಸಿದ್ದ ಹಸುವನ್ನು ಅಲ್ಲಿದ್ದ ಗೂಟಕ್ಕೆ ಕಟ್ಟಿಹಾಕಿದ್ದರು. ಅದರ ಪಕ್ಕದಲ್ಲೇ ಮುದ್ದಾದ ಕರುವನ್ನು ಕಟ್ಟಿ ಹಾಕಿದ್ದರು. ಹಸು ತನ್ನ ಬಳಿಗೆ ಸಮೀಪಿಸಿದವರನ್ನು ಬೆರಗು ಕಣ್ಣುಗಳಿಂದ ನೋಡಿತು. ಆದರೆ, ಸುಮ್ಮನೆ ನಿಂತಿತ್ತು. ಹಸುವಿನ ಕೋಡುಗಳಿಗೆ ಬಣ್ಣವನ್ನು ಬಳಿದಿದ್ದರು. ಹಣೆಗೆ ಒಂದು ಬಾಸಿಂಗವನ್ನು ಕಟ್ಟಿದ್ದರು. ಕೊರಳಿಗೆ ಒಂದು ಹಾರವನ್ನು, ಕರಿಯ

ಕಂಬಳಿಯ ದಾರವನ್ನು ಕಟ್ಟಿದ್ದರು. ಕೊರಳಿನಲ್ಲಿ ಒಂದು ಸಣ್ಣ ಹಿತ್ತಳೆಯ ಗಂಟೆಯೂ ಕಟ್ಟಲ್ಪಟ್ಟಿತ್ತು. ಹಸುವಿನ ಬೆನ್ನ ಮೇಲೆ ಒಂದು ಜರಿಯ ವಸ್ತ್ರವನ್ನು ಹೊದಿಸಿ ಅಲಂಕಾರಗೊಳಿಸಿದ್ದರು. ನೋಡಿದವರಿಗೆ, ಗೋಮಾತೆ, ದೇವತೆಯಾಗಿ ಗೋಚರಿಸಿದ್ದಳು. ಕರು ನಿಂತಲ್ಲೇ 'ಚಂಗ್ ಚಂಗ್' ಎಂದು ಕುಣಿಯುತ್ತಿತ್ತು. ಕುಣಿದಾಗ ಅದರ ಕೊರಳಿನ ಗಂಟೆ ಸದ್ದನ್ನು ಮಾಡುತ್ತಿತ್ತು. ಮುದ್ದಾದ ಕರುವನ್ನು ಮುದ್ದಾಡುವ ಮನಸ್ಸಾಗುತಿತ್ತು ಎಲ್ಲರಿಗೂ.

"ರಮೇಶ, ಉಮೇಶ ಮೊದಲು ಹಸು ಕರುವಿನ ಫೋಟೋ ತೆಗಿರ್‍ರೋ. ಎಷ್ಟು ಚೆನ್ನಾಗಿ ಅಲಂಕಾರ ಮಾಡಿದಾರೆ" ಭವಾನಿ ತನ್ನ ಮಕ್ಕಳನ್ನು ಕರೆದು ಹೇಳಿದಳು. ಅವರಿಬ್ಬರೂ ತಮ್ಮ ಕೈಯಲ್ಲಿದ್ದ ಕ್ಯಾಮೆರಾವನ್ನು ಹಸು ಹಾಗೂ ಕರುವಿನ ಮೇಲೆ ಫೋಕಸ್ ಮಾಡಿದರು.

"ಅಮ್ಮಾ, ಮೊದಲು ಈ ತಂಬಿಗೆಯಲ್ಲಿರುವ ನೀರನ್ನು ತೆಗೆದುಕೊಂಡು ಗೋವಿನ ಪಾದಗಳನ್ನು ತೊಳೆಯಿರಿ. ವಸ್ತ್ರದಿಂದ ಒರೆಸಿ, ಅರಿಶಿನ ಕುಂಕುಮವನ್ನು ಗೊರಸುಗಳಿಗೆ ಹಚ್ಚಿ. ಕಟ್ಟಿದ ಹೂಗಳನ್ನು ಪಾದಗಳಿಗೆ ಸುತ್ತಿ... ಮೊದಲು, ಬಲಗಾಲಿಗೆ ಪೂಜೆ ಮಾಡಿ... ಆ ನಂತರ, ಹಣೆಗೆ ಅರಿಶಿನ ಕುಂಕುಮ ಚಂದನವನ್ನು ಲೇಪಿಸಿ ಕೊರಳಿಗೆ ಹೂವಿನ ಹಾರವನ್ನು ಹಾಕಿ. ಅವರು ಪೂಜಾ ವಿಧಾನವನ್ನು ಒಂದೊಂದಾಗಿ ಹೇಳತೊಡಗಿದರು.

"ಹಸು ಆಸೆಗಣ್ಣಿನಿಂದ ನೋಡ್ತಿದೆ. ಅದಕ್ಕೆ ಗೋಗ್ರಾಸ ಕೊಡೋಣ್ವಾ?" ವನಜ ಕೇಳಿದಳು.

"ಹೂಂ, ಗೋಗ್ರಾಸವನ್ನು ಸಿದ್ಧವಾಗಿ ಇಟ್ಟಿದ್ದಾರೆ. ಧೂಪವನ್ನು ಹಚ್ಚಿ, ಗೋಗ್ರಾಸವನ್ನು ಇಡಿ..." ಇವರುಗಳು ಘಮಗುಟ್ಟುವ ಊದಿನಕಡ್ಡಿಗಳನ್ನು ಹಚ್ಚಿಕೊಂಡರು. ಶ್ರದ್ಧೆಯಿಂದ ಧೂಪಾದಾರತಿಯನ್ನು ಮಾಡಿದರು. ಹಿತ್ತಾಳೆಯ ಹರಿವಾಣದಲ್ಲಿ ಬಾಳೆ ಎಲೆಯ ಮೇಲೆ ಬಡಿಸಿದ್ದು ಗೋಗ್ರಾಸವನ್ನು ಹಸುವಿನ ಮುಂದೆ ಇಟ್ಟರು. ಹಸು ನಿಧಾನವಾಗಿ ತಿನ್ನತೊಡಗಿತು. ಕರುವನ್ನು ಹಸುವಿನ ಕೆಚ್ಚಲಬಳಿಗೆ ಬಿಟ್ಟರು. ಕರು ಸೊರ ಸೊರನೆ ನೊರೆಯ ಹಾಲನ್ನು ಕುಡಿಯತೊಡಗಿತು. ಈ ಸುಂದರ ದೃಶ್ಯವನ್ನು ಕ್ಯಾಮೆರಾ ತಂದಿದ್ದವರೆಲ್ಲ ಸೆರೆ ಹಿಡಿದರು.

ಗೋವಿಗೆ ಮಂಗಳಾರತಿಯನ್ನು ಎತ್ತಿದರು. ಪ್ರದಕ್ಷಿಣೆ ನಮಸ್ಕಾರವನ್ನು ಹಾಕಿದರು. ಬಾಲವನ್ನು ಮುಟ್ಟಿ ಕಣ್ಣಿಗೆ ಒತ್ತಿಕೊಂಡರು" ಹಸು ಅಂದ್ರೆ ಹೀಗಿರ್ಬೇಕು ಸ್ವಲ್ಪವೂ ಗಲಾಟೆ ಇಲ್ಲ" ವನಜ ಮಗಳಿಗೆ ಹೇಳಿದಳು, ಪಲ್ಲವಿ ತಲೆಯಾಡಿಸಿದಳು.

ಈ ಗೋವು ದಾನಕ್ಕೆ ಅತ್ಯಂತ ಯೋಗ್ಯವಾಗಿದೆ. ದಾನ ಕೊಡುವವರು

ಶ್ರದ್ಧಾಭಕ್ತಿಯಿಂದ ದಾನವನ್ನು ಕೊಡಲು ಕಾತುರರಾಗಿದ್ದಾರೆ. ದಾನವನ್ನು ಸ್ವೀಕರಿಸುವ ಬ್ರಾಹ್ಮಣರು ನೇಮ ನಿಷ್ಠೆಯಿಂದ ಸಿದ್ಧರಾಗಿದ್ದಾರೆ. ಇನ್ನು ತಡವೇಕೆ! ಆ ವಿಧಿಯನ್ನು ಪೂರೈಸಿ ಬಿಡೋಣ" ಶಾಸ್ತ್ರಿಗಳು ದಾನವನ್ನು ಸ್ವೀಕರಿಸುವ ಬ್ರಾಹ್ಮಣನನ್ನು ಕರೆದು ಪರಿಚಯಿಸಿದರು. ಅವರಿಗಾಗಿ ಸಿದ್ಧವಾಗಿದ್ದ ಮಣೆಯ ಮೇಲೆ ಅವರು ಕುಳಿತರು.

ಮೊದಲು ಬ್ರಾಹ್ಮಣ ಪೂಜೆಯನ್ನು ಮಾಡಿ. "ಸಂಕಲ್ಪವನ್ನು ಮಾಡಿಕೊಂಡು, ಬ್ರಾಹ್ಮಣನಿಗೆ ಮಧುಪರ್ಕಾದಿಗಳನ್ನು ಕೊಟ್ಟು, ಹಸ್ತೋದಕ, ಪಾದೋದಕಗಳನ್ನು ನೀಡಿ, ಹೂವು ಮಂತ್ರಾಕ್ಷತೆಯಿಂದ ಪೂಜಿಸಿ, ನಂತರ ದಕ್ಷಿಣೆ ಸಮೇತವಾಗಿ ಫಲಗಳನ್ನು ಸಮರ್ಪಣೆ ಮಾಡಿ. ಹೀಗೆ ಸಂಕಲ್ಪದೊಂದಿಗೆ ಪ್ರಾರಂಭಮಾಡಿ ಬ್ರಾಹ್ಮಣ ಪೂಜೆಯನ್ನು ಮಾಡಿಸಿದರು. ಅನಂತ ತನ್ನ ತಮ್ಮಂದಿರೊಡನೆ ಶಾಸ್ತ್ರಿಗಳು ಹೇಳಿದುದನ್ನೆಲ್ಲಾ ಮಾಡಿದ. ಆಗ ಬ್ರಾಹ್ಮಣನಿಗೆ ನಮಸ್ಕರಿಸಿ ಗೋದಾನವನ್ನು ಸ್ವೀಕರಿಸಿ ಎಂದು ವಿನಂತಿಸಿಕೊಳ್ಳಿ" ಅಂತೆಯೇ ಸಹೋದರರು ವಿನಂತಿಸಿಕೊಂಡು ಕೈ ಮುಗಿದರು. ಆತ ಒಪ್ಪಿಕೊಂಡರು.

ಈಗ ಕಟ್ಟಿರುವ ಹಸುವಿನ ಹಗ್ಗವನ್ನು ಬಿಚ್ಚಿ, ನಿಮ್ಮ ಕೈಗಳಲ್ಲಿ ಹಿಡಿದುಕೊಳ್ಳಿ. ಕರುವನ್ನು ಇನ್ನೊಬ್ಬರು ಹಿಡಿದುಕೊಳ್ಳಿ. ನಿಮ್ಮ ನಿಮ್ಮ ಪತ್ನಿಯರ ಕೈಯಿಂದ, ಉದ್ಧರಣೆಯಿಂದ ನೀರನ್ನು ಧಾರೆ ಎರೆಸಿಕೊಂಡು, ಹಗ್ಗವನ್ನು ಬ್ರಾಹ್ಮಣರ ಕೈಗೆಕೊಟ್ಟು, ದಾನವನ್ನು ಸ್ವೀಕರಿಸಿ ಎಂದು ಕೇಳಿಕೊಂಡು ನಮಸ್ಕರಿಸಿ. ನಂತರ ಇವರ ಆಶೀರ್ವಾದವನ್ನು ಪಡೆಯಿರಿ.

ಮುವರೂ, ಭಕ್ತಿಪೂರ್ವಕವಾಗಿ, ಬ್ರಾಹ್ಮಣನಿಗೆ ದಾನದ ರೂಪದಲ್ಲಿ ಹಸುವನ್ನು ಕರುವಿನ ಸಮೇತ ಒಪ್ಪಿಸಿದರು. ಆತ ದಾನವನ್ನು ಸ್ವೀಕರಿಸಿ, ಕೃತಾರ್ಥನಾದೆ ಎಂದು ನುಡಿದು ಗೋಮಾತೆಗೆ ವಂದಿಸಿ, ಸಹೋದರರನ್ನು ಆಶೀರ್ವದಿಸಿದರು. ಈ ಎಲ್ಲಾ ವಿಧಿ ವಿಧಾನಗಳನ್ನು ವೀಡಿಯೋದವರು ರೆಕಾರ್ಡ್ ಮಾಡಿಕೊಂಡರು. ಕ್ಯಾಮೆರಾ ಹಿಡಿದಿದ್ದವರು ಫೋಟೋ ತೆಗೆದರು. ದಾನವನ್ನು ಕೊಟ್ಟವರ ಮುಖದಲ್ಲಿ ಧನ್ಯತೆಯ ಕಳೆ, ದಾನವನ್ನು ಸ್ವೀಕರಿಸಿದವರ ಮುಖದಲ್ಲಿ ತೃಪ್ತಿಯ ಕಳೆ. ಇಷ್ಟೆಲ್ಲಾ ಆಗುವ ವೇಳೆಗೆ, ಸಾಕಷ್ಟು ಗಂಟೆಗಳು ಕಳೆದಿದ್ದವು.

ಭವಾನಿ ತನ್ನ ಗಂಡ ಹಾಗೂ ಮಕ್ಕಳೊಡನೆ ಹಸು, ಕರುವಿನ ಬಳಿ ನಿಂತು ವಿವಿಧ ಭಂಗಿಗಳಲ್ಲಿ ಪೋಟೋ ತೆಗೆಸಿಕೊಂಡಳು. "ಅಕ್ಕಾ ಸುಗುಣ ನೀವೂ ಬನ್ನಿ ಪಲ್ಲವಿ, ನೀನೂ ಬಾ" ಭವಾನಿ ಕರೆದಳು.

"ಈಗಾಗ್ಲೆ ಸಾಕಷ್ಟು ಪೋಟೋಗಳನ್ನು ತೆಗೆದಿದ್ದಾಗಿದೆ. ಮತ್ಯಾಕೆ? ವನಜ ತಪ್ಪಿಸಿಕೊಂಡಳು ಪಲ್ಲವಿ ತಾಯಿಯ ಮರೆಯಲ್ಲಿ ನಿಂತಳು. ಸುಗುಣ ಮಂಕಾಗಿ

ದ್ದಳು. ಈಗ ಅವಳಿಗೆ ಮಗಳ ನೆನಪಾಗಿತ್ತು. ಅವಳು ಬಂದಿದ್ದರೆ, ಚೆನ್ನಾಗಿ ರ್ತಿತ್ತು. ಅತ್ತೆಯವರಿಗೆ, ಅತ್ಯಂತ ಪ್ರಿಯವಾದ ಮೊಮ್ಮಗಳು... ಅಜ್ಜಿ ಯನ್ನು ನೆನೆಸಿಕೊಂಡು ವಿಪರೀತ ಅತ್ತವಳು ಈ ಸಂದರ್ಭದಲ್ಲಿ ಅವಳೇ ಇಲ್ಲ. ಹೊರಟವಳಿಗೆ ಏನಾಯ್ತೋ? ಇದುವರೆಗೂ ಈ ಸಂಭ್ರಮದಲ್ಲಿ ಅವಳ ಬಗ್ಗೆ ಯೋಚಿಸಲೇ ಇಲ್ಲ. ಅವಳ ದೆಸೆಯಿಂದ ರಾಧಾಗೂ ಈ ಸಂಭ್ರಮವನ್ನು ನೋಡುವುದು ತಪ್ಪಿತು. ಒಂದಿಷ್ಟು ತಿಂಡಿಗಳನ್ನು ಅವರುಗಳಿಗೂ ಕಟ್ಟಿಸಿಕೊಳ್ಳ ಬೇಕು. ವಿವಿಧ ದಿಕ್ಕುಗಳಲ್ಲಿ ಮನಸ್ಸು ತಿರುಗಾಡಿತ್ತು.

ಆಶ್ರಮದಲ್ಲಿ ಎಲ್ಲರಿಗೂ ಊಟದ ವ್ಯವಸ್ಥೆಯನ್ನು ಮಾಡಲಾಗಿತ್ತು. ನೇಮದಿಂದ ಇದ್ದ ಬ್ರಾಹ್ಮಣರಿಗೆ ಫಲಾಹಾರದ ವ್ಯವಸ್ಥೆಯನ್ನು ಮಾಡಿದ್ದರು. "ಅಕ್ಕಾ ಹೆಂಗಸರಿಗೆಲ್ಲ ಅರಿಶಿನ ಕುಂಕುಮವನ್ನು ಕೊಡೋಣ್ವಾ?" ಭವಾನಿ ವನಜಳನ್ನು ಕೇಳಿದಳು.

"ಹೂಂ, ಸುಗುಣ ಎಲ್ಲಿ ಕರಿ. ಅವಳ ಹತ್ತಿರ ದಕ್ಷಿಣೆಯ ಹಣ ಇದೆ"

"ಅವಳು ಯಾರ ಹತ್ರವೋ ಪೋನಿನಲ್ಲಿ ಮಾತಾಡ್ತಿದಾಳೆ. ಊಟಕ್ಕೆ ಎಲ್ಲಾ ಬರಬೇಕು ಅಂತ ಹೇಳ್ತಿದಾರೆ. ನೀವೂ ಬನ್ನಿ ಅಕ್ಕಾ.... ನನ್ನ ಹತ್ರವೂ ದುಡ್ಡಿದೆ"ಎಂದು ಹೇಳಿ ವನಜ ಅವಳಿಗೆ ಸಹಾಯಕಳಾಗಿದ್ದಳು" ಇಂಥಾ ಕೆಲಸವನ್ನೆಲ್ಲ ಚಿಕ್ಕ ಹುಡುಗಿಯರು ಮಾಡಬೇಕು, ಪಲ್ಲವಿ ಯಾವುದಕ್ಕೂ ಮುಂದೆ ಬರುವುದಿಲ್ಲ. ಮಾಧವಿ ಬಂದಿದ್ದರೂ ಇದನ್ನೆಲ್ಲ ಮಾಡುವುದಿಲ್ಲ. ಎದ್ದು ಬಗ್ಗಿ ಸೊಂಟ ಬಿದ್ದು ಹೋಗಿದೆ" ಭವಾನಿ ಸೊಂಟವನ್ನು ನೆಟ್ಟಗೆ ಮಾಡಿದಳು ವನಜ ನಕ್ಕಳು.

"ಈ ಮಕ್ಕಳು ನಮಗಿಂತ ಸೂಕ್ಷ್ಮ. ಪಲ್ಲವಿ ಕೂತು ಕೂತು ಬೆನ್ನು ನೋವು ಅಂತಿದಾಳೆ. ಮಾಧವಿ, ಹಾಳು ಮೂಳು ತಿಂದು ಹೊಟ್ಟೆ ಕೆಡಿಸಿಕೊಂಡಿದಾಳೆ. ಇಂಥಾ ಕೆಲಸಗಳಿಗೆ, ನಾನು ಸುಗುಣಾನೇ ಸರಿ"

"ಯಾಕೆ ಅಕ್ಕಾ ತಮಾಷೆ ಮಾಡ್ತಿರೀ. ನಾನೂ ಎಷ್ಟು ಕೆಲಸ ಮಾಡಿದೀನಿ ಗೊತ್ತಾ? ಈ ದಾನದಲ್ಲಿ ನಮಗೂ ಸಮಪಾಲು ಇದೆ"

"ಯಾರು ಇಲ್ಲ ಅಂದೋರು! ತಾಯಿಯ ಹೆಸರ್ನಲ್ಲಿ ಮಾಡಿದ ದಾನದ ಫಲ ಎಲ್ಲಾ ಮಕ್ಕಳಿಗೂ ಸೇರುತ್ತೆ. ಸುಗುಣನ ಮಾತು ಮುಗಿದಿದ್ರೆ ಕರ್ಕೊಂಡು ಬರ್ತೀನಿ. ನೀವುಗಳು ಹೋಗಿ" ಎಂದು ಹೇಳುತ್ತ ಸುಗುಣಳನ್ನು ಹುಡುಕಿ ಕೊಂಡು ನಡೆದಳು. ಪೋನಿನಲ್ಲಿ ಮಾತನಾಡುತ್ತಿದ್ದ ಸುಗುಣಳ ಮುಖದಲ್ಲಿ ಗಾಬರಿ ಎದ್ದು ಕಾಣುತ್ತಿತ್ತು. ವನಜ ಅವಳ ಬಳಿ ಸಾರಿದಳು.

"ಸುಗುಣ ಯಾರ ಹತ್ರ ಮಾತಾಡ್ತಿದ್ದೆ! ನಿನ್ನ ಮುಖ ಯಾಕೆ ಹೀಗಾಗಿದೆ?"

"ಅಕ್ಕಾ ಮಾಧವಿಗೆ ತೀರಾನೇ ಹುಶಾರಿಲ್ವಂತೆ ಆಸ್ಪತ್ರೆಗೆ ಸೇರಿಸಿದಾರಂತೆ.

ರಾಧಾ ಹೇಳಿದ್ಲು, ನಾನು ನಿಮ್ಮ ಮೈದುನನನ್ನು ಹುಡುಕ್ತಿದೀನಿ. ಅವರನ್ನು ಇಲ್ಲಿಗೆ ಕಳಿಸ್ತೀರಾ?"

"ಯಾಕೆ ಏನಾಯ್ತು ಅಂತ ರಾಧಾ ಏನಾದ್ರೂ ಹೇಳಿದ್ಲಾ! ಅಲ್ಲಿ ರಾಧಾ ನೋಡ್ಕೊತಾಳೆ, ನೀನ್ಯಾಕೆ ಇಷ್ಟು ಗಾಬರಿಯಾಗಿದೀಯ!"

"ಅಲ್ಲಾ ಅಕ್ಕ, ಮಾಧವಿಯ ತಾಯಿ ನಾನು. ಪಲ್ಲವಿಗೆ ಏನಾದ್ರೂ ಆದ್ರೆ ನಿಮ್ಗೆ ಆತಂಕ ಆಗಲ್ವಾ? ರಾಧಾ ಕೂಡ ಗಾಬರಿಯಾಗಿದ್ದಾಳೆ. ಊಟ ಆದ ಕೂಡ್ಲೇ ಹೊರಟು ಬಿಡಿ ಅಂತ ಹೇಳಿದ್ಲು"

"ಸರಿ. ನಡೀ ಊಟ ಮಾಡೋಣ. ನಾನು ಎಲ್ಲರಿಗೂ ಹೇಳ್ತೀನಿ."

"ಬೇಡ ಅಕ್ಕ, ಈಗ್ಲೇ ಯಾರ್ಗೂ ಹೇಳೋದು ಬೇಡ. ಭವಾನಿ ಅಕ್ಕ, ಅವರ ಕಡೆಯವರೆಲ್ಲಾ, ಊಟ ಆದ್ಮೇಲೆ ಕೆ.ಆರ್.ಎಸ್.ಗೆ ಹೋಗಿ ಬರೋಣ ಅಂತ ಮಾತಾಡಿಕೊಳ್ತಿದ್ರು. ನಾನೂ, ನಿಮ್ಮ ಮೈದುನ ಊರಿಗೆ ವಾಪಸ್ಸು ಹೋಗ್ತೀವಿ. ನೀವುಗಳು ಬೃಂದಾವನ ಗಾರ್ಡ್‌ನ್ಸ್‌ಗೆ ಹೋಗ್ಬಿಟ್ಟು ಬನ್ನಿ. ಸುಮ್ನೆ ಯಾರ್ಗೂ ತೊಂದರೆ ಆಗೋದು ಬೇಡ" ಅಷ್ಟರಲ್ಲಿ ಶ್ರೀನಾಥ ಅಲ್ಲಿಗೆ ಬಂದ ವನಜ ಅಲ್ಲಿಂದ ಸರಿದಳು.

"ಇಲ್ಲಿ ದೂರ ಎಲ್ಲೋ ನಿಂತ್ಕೊಂಡು ಏನ್ಮಾಡ್ತಿದೀಯ? ಊಟಕ್ಕೆ ಎಲೆ ಹಾಕಿದಾರೆ. ಊಟ ಆದ್ಮೇಲೆ ಬೃಂದಾವನ ಗಾರ್ಡನ್ಸ್‌ಗೆ ಹೋಗುವ ಪ್ಲಾನ್ ಇದೆ"

"ನಾವಿಬ್ರೂ ಊರಿಗೆ ವಾಪಸ್ಸು ಹೋಗೋಣ. ಉಳಿದವರೆಲ್ಲಾ ಹೋಗಿ ಬರಲಿ"

"ಯಾಕೆ! ನಾವೇನು ಪದೇ ಪದೇ ಬರೋಕೆ ಆಗುತ್ತಾ?"

"ಮಾಧವಿಗೆ ಹುಶಾರಿರಲಿಲ್ಲ, ಅವಳನ್ನು ಬಿಟ್ಟು ಬಂದಿದೀನಿ"

"ಅವಳು ನಿನ್ನ ತಮ್ಮನ ಮನೇಲಿದಾಳೆ, ಅವಳೂ ಬಂದಿದ್ರೆ ಚೆನ್ನಾಗಿತ್ತು"

"ಅವಳನ್ನು ಆಸ್ಪತ್ರೆಗೆ ಸೇರಿಸಿದಾರಂತೆ, ರಾಧಾ ಹೇಳಿದ್ಲು..."

"ಏನು? ಮಾಧವಿನ ಆಸ್ಪತ್ರೆಗೆ? ಅಂಥಾದ್ದೇನಾಯ್ತು? ನೀನು ಕೇಳಲಿಲ್ವಾ! ಬಿದ್ದಲೋ ಕೈಕಾಲು ಮುರಿದ್ಕೊಂಡ್ಲೋ?"

"ಮತ್ತೂ ನಾಲ್ಕು ಸಲ ವಾಂತಿ ಆಯ್ತಂತೆ. ಡ್ರಿಪ್ಸ್ ಕೊಡಿಸ್ಬೇಕು ಅಂತ ಅವಳನ್ನು ಹತ್ತಿರದ ಆಸ್ಪತ್ರೆಗೆ ಸೇರಿಸಿದೀವಿ ಅಂತ ಹೇಳಿದ್ಲು. ನಿಮ್ಮಮ್ಮ ತೀರಿ ಹೋಗಿ ಕೆಲವೇ ತಿಂಗಳುಗಳಾಗಿವೆ. ನನಗ್ಯಾಕೋ ಗಾಬರಿಯಾಗ್ತಿದೆ. ಈಗ್ಲೇ ವಾಪಸ್ಸು ಹೊರಟುಬಿಡೋಣ. ಇಲ್ಲಿ ಯಾವುದಾದ್ರೂ ಟ್ಯಾಕ್ಸಿ ಸಿಗುತ್ತಾ ಅಂತ ವಿಚಾರಿಸಿ"

"ಹೂಂ ಸರಿ ವಿಚಾರಿಸ್ತೀನಿ. ಆದ್ರೆ, ನೀನು ಹೀಗೆ ಮುಖ ಹಾಕ್ಕೊಂಡಿದ್ರೆ

ಎಲ್ರೂ ನಿನ್ನನ್ನ ಏನಾಯ್ತು ಅಂತ ಕೇಳ್ತಾರೆ. ಬೇರೆ ಯಾರಿಗೂ ನಾವು ಹೋಗ್ತಿದೀನಿ ಅಂತ ತಿಳಿಸೋದು ಬೇಡ. ಅವರುಗಳು ಸುತ್ತಾಡಿಕೊಂಡು ಬರಲಿ"

"ನಾನು ಅಕ್ಕನಿಗೆ ಮಾತ್ರ ಹೇಳಿದಿನಿ. ಆನಂದ ಮುಕುಂದನ್ನ ಅವರು ನೋಡ್ಕೋತಾರೆ. ನೀವು ರವಿಯ ಹತ್ರ ಮಾತಾಡ್ತೀರಾ?"

"ಅವನ ಹತ್ರ ಏನು ಕೇಳೋದು! ಇವಳ ದೆಸೆಯಿಂದ ಅವರಿಬ್ಬರೂ ಬರುವುದು ತಪ್ಪಿತು. ಆ ಬೇಸರ ಅವರಿಬ್ಬರಿಗೆ ಇರುತ್ತೆ. ಹೇಗೋ ನಾವೇ ಬೇಗ ಹೋದರಾಯ್ತು," ಇಬ್ಬರೂ ಊಟದ ಮನೆಗೆ ಬಂದರು. ಶ್ರೀನಾಥ ಬೇಗ ಬೇಗ ಊಟವನ್ನು ಮಾಡಿ ಎದ್ದ. ಸುಗುಣಳಿಗೆ ಊಟ ಸೇರುವಂತೆ ಇರಲಿಲ್ಲ. ಅವನು ಎದ್ದೊಡನೆ ತಾನೂ ಎದ್ದಳು.

ಶ್ರೀನಾಥ ಅನಂತನ ಕೈಗೆ ಒಂದಿಷ್ಟು ಹಣವನ್ನು ಇತ್ತ. "ಉಳಿದ ಖರ್ಚು ಏನಾದ್ರೂ ಇದ್ದರೆ ಇರಲಿ ಅಂತ ಕೊಡ್ತಿದೀನಿ. ರಮಾಕಾಂತನಿಗೆ ನೀನೇ ಹೇಳಿಬಿಡು. ಈಗಲೇ ಹೊರಗಿನವರಿಗೆ ಏನೂ ಹೇಳೋದು ಬೇಡ"

"ವನಜ ಹೇಳಿದ್ಲು. ಆದರೆ ನೀವು ಹೋಗ್ಲೇಬೇಕಾ ಶ್ರೀನಾಥ. ಅಲ್ಲಿ ಹೇಗೂ ನಿನ್ನ ಹೆಂಡತಿಯ ತಮ್ಮ, ತಮ್ಮನ ಹೆಂಡ್ತಿ ಇದಾರಲ್ಲ."

"ಸುಗುಣ ಗಾಬರಿಯಾಗಿದಾಳೆ. ಅಲ್ಲದೇ ಮಾಧವಿ ನಮ್ಮ ಮಗಳು. ಅದಕ್ಕೂ ಬೇಜಾರಾಗುತ್ತಿರುತ್ತೆ. ನಾವು ಹೋಗೋದೇ ಸರಿ ಅಂತ ಅಂದುಕೊಂಡಿದೀವಿ. ನೀವುಗಳೆಲ್ಲಾ ತಿರುಗಾಡಿಕೊಂಡು ನಿಧಾನವಾಗಿ ಬನ್ನಿ, ಆನಂದ, ಮುಕುಂದ ನಿಮ್ಮ ಜತೇಲಿ ಇರ್ತಾರೆ. ಸ್ವಲ್ಪ ಅವರ ಕಡೆ ನಿಗಾ ಇರಲಿ.

"ನೀನು ಯೋಚಿಸ್ಬೇಡ. ಪಲ್ಲವಿ ಪ್ರಶಾಂತ ಅವರನ್ನು ನೋಡ್ಕೋತಾರೆ. ನೀವುಗಳು ಹುಶಾರಾಗಿ ಹೋಗಿ ತಲುಪಿದ ಕೂಡಲೇ ಫೋನುಮಾಡು. ಅಮ್ಮನ ಆಶಿರ್ವಾದ ಇದೆ. ಮಾಧವಿಗೆ ಏನೂ ಆಗಲ್ಲ" ತಮ್ಮನ ಭುಜದ ಮೇಲೆ ಕೈಯನ್ನಿಟ್ಟು ವಿಶ್ವಾಸವನ್ನು ತೋರಿದ. ಅಷ್ಟರಲ್ಲಿ ಅಲ್ಲಿಗೆ ಸುಗುಣ ಹಾಗೂ ವನಜ ಬಂದರು ಇವರಿಬ್ಬರೂ ಅಲ್ಲಿಂದ ಹೊರಟರು.

ಸೀದಾ ರಾಧ ತಿಳಿಸಿದ್ದ ನರ್ಸಿಂಗ್ ಹೋಂಗೆ ಬಂದರು. ರಿಸೆಪ್ಷನ್‌ನಲ್ಲಿ ವಿಚಾರಿಸಿಕೊಂಡು ಅವಳಿದ್ದ ವಾರ್ಡ್ ಬಳಿಗೆ ಬಂದರು. ಅವರುಗಳಿಗಾಗಿ ಕಾಯುತ್ತಿದ್ದ ರಾಧಾ ಕಾರಿಡಾರ್‌ನಲ್ಲೇ ನಿಂತಿದ್ದಳು. ಅವಳ ಮುಖ ಕಂಗೆಟ್ಟಿತ್ತು. ಮಗಳಿಗೆ ಏನಾಗಿ ಹೋಯ್ತೋ ಎಂಬ ತೀವ್ರವಾದ ಆತಂಕದಿಂದ ಸುಗುಣ ಅವಳ ಕಡೆ ನೋಡಿದಳು "ಮಾಧವಿ ಈಗ ಹೇಗಿದಾಳೆ? ಡಾಕ್ಟ್ರು ಏನಂದ್ರು?" ವಿಚಾರಿಸಿದಳು.

"ಆರಾಮವಾಗಿದಾಳೆ ಅತ್ತಿಗೆ. ನಿದ್ದೆ ಮಾಡ್ತಿದಾಳೆ. ಅವಳ ಸ್ನೇಹಿತೆಯರು ಬೆಳಿಗ್ನಿಂದ ಅವಳ ಜತೆಗೇ ಇದಾರೆ. ನೀವು ಆತಂಕ ಪಡ್ಬೇಡಿ"

"ನಾನು ಅವಳನ್ನು ನೋಡ್ಬೇಕು" ಎಂದು ಸುಗುಣ ಒಳ ಹೊಕ್ಕಳು. ಎಚ್ಚರವಾಗಿದ್ದ ಮಾಧವಿ ನಿದ್ದೆಯನ್ನು ನಟಿಸಿದಳು. ಅವಳ ಸ್ನೇಹಿತೆ ಎದ್ದು ನಿಂತಳು. ಮಾಧವೀ ಮಾಧವೀ... ಮಗಳನ್ನು ಮೆಲ್ಲನೆ ಕರೆದು, ಹಣೆಯ ಮೇಲೆ ಕೈಯನ್ನಿಟ್ಟಳು. ಸ್ನೇಹಿತೆ ಹೊರ ನಡೆದಳು. ಮಾಧವಿ ಎಚ್ಚರಗೊಳ್ಳಲಿಲ್ಲ" ಎಚ್ಚರವಾಗದಷ್ಟು ಎಂಥಾ ನಿದ್ದೆ! ಏನು ಔಷಧ ಕೊಟ್ಟಿದಾರೆ?"

"ಸ್ವಲ್ಪ ಸುಸ್ತಾಗಿದ್ದಳಲ್ಲ... ನಿದ್ದೆ ಬಂದಿದೆ ಅಷ್ಟೇ ನೀವುಗಳು ಡಾಕ್ಟರ್ ಹತ್ತಿರ ಮಾತಾಡಿ. ಅವರು ನೀವು ಬಂದಕೂಡ್ಲೇ ತಿಳಿಸಿ, ಎಂದಿದಾರೆ"

"ಅಂಥಾದ್ದೇನಾಗಿದೆ? ಇವರು ಎಲ್ಲಿ ಹೋದ್ರು?" ಎನ್ನುತ್ತಾ ಹೊರಗೆ ಬಂದಳು. ಕಾರಿಡಾರಿನಲ್ಲಿ ಕೈ ಕಟ್ಟಿ ನಿಂತಿದ್ದ ಶ್ರೀನಾಥ ಇವಳ ಕಡೆ ಪ್ರಶ್ನಾರ್ಥಕವಾಗಿ ನೋಡಿದ.

"ನೀವು ಡಾಕ್ಟರ ಹತ್ರ ಮಾತಾಡ್ಕೊಂಡು ಬನ್ನಿ. ಅವರು ಹೇಳಿದಾರಂತೆ" ಗಂಡನಿಗೆ ಹೇಳಿದಳು.

"ಅಂಥಾದ್ದೇನಾಯ್ತು ಇವಳಿಗೆ?" ಎಂದುಕೊಂಡು ವಾರ್ಡಿನ ಬಾಗಿಲಲ್ಲಿ ನಿಂತು ಮಗಳ ಕಡೆ ನೋಡಿ, ಡಾಕ್ಟರನ್ನ ನೋಡಲೆಂದು ಹೊರಟ. ಸುಗುಣ, ರಾಧಾಳ ಕೈ ಹಿಡಿದಳು. ಅವಳ ಮುಖ ಕಪ್ಪಗಾಗಿತ್ತು.

"ರಾಧಾ, ಏನಾಯ್ತು ನಂಗೆ ಹೇಳು. ಏನೋ ಮುಚ್ಚಿಡ್ತಾ ಇದೀಯ ನೀನು"

"ಅತ್ತಿಗೇ ನೀವೇ ಡಾಕ್ಟರ್ ಹತ್ರ ಮಾತಾಡಿ" ಎಂದು ಅವಳನ್ನು ಕಳುಹಿಸಿದಳು. ಸುಗುಣ ಅನುಮಾನಿಸುತ್ತಾ ನಡೆದಳು. ಆದರೆ ಡಾಕ್ಟರಿದ್ದ ಛೇಂಬರ್ ಒಳಗೆ ಹೋಗಲು ಹೆದರಿ ಹೊರಗೇ ನಿಂತಳು. ಒಳಗೆ ಶ್ರೀನಾಥ ಅವರೊಡನೆ ಮಾತನಾಡುತ್ತಿದ್ದ. ಇವಳು ಚಡಪಡಿಸುತ್ತಾ ಕಾರಿಡಾರಿನ ಕಂಬಕ್ಕೆ ಒರಗಿ ನಿಂತಳು. ಅವನು ಕೈ ಮುಗಿದು, ಅವರ ಎದುರಿಗೆ ಕುಳಿತ.

ಡಾಕ್ಟರ್ ಹೇಳಿದ ಸುದ್ಧಿಯನ್ನು ಕೇಳಿ ಶ್ರೀನಾಥನಿಗೆ ಕರೆಂಟು ತಗುಲಿದಂತೆ ಆಗಿತ್ತು. ಮಾಧವಿ ಎರಡು ತಿಂಗಳ ಗರ್ಭಿಣಿ! ತಟ್ಟನೆ ಎದ್ದು ನಿಂತ ತೊದಲಿದ "ಇದ್ಹೇಗೆ ಸಾಧ್ಯ ಡಾಕ್ಟರ್? ಅವಳಿಗಿನ್ನು ಮದುವೆ ಆಗಿಲ್ಲ... ಏನ್ಹೇಳ್ತಿದೀರಿ ನೀವು?"

"ಗೊತ್ತಾಯ್ತು, ಆದರೆ ಈ ಮಾತು ನಿಜ. ನಿಮ್ಮ ಮಗಳಿಗೆ ಒಬ್ಬ ಬಾಯ್‌ಫ್ರಂಡ್ ಇದಾನೆ. ಈ ವಿಷಯ ನಿಮಗೆ ಗೊತ್ತಾ!" ಆಕೆ ಸ್ಪಷ್ಟವಾಗಿ ಹೇಳಿದಾಗ ಇವನು ತತ್ತರಿಸಿದ. ತಲೆ ತಗ್ಗಿಸಿದ. ಮಾಧವಿಗೆ ಬಾಯ್‌ಫ್ರೆಂಡ್!

ಅವಳಿನ್ನು ಚಿಕ್ಕವಳೆಂದು ತಾನು ಭಾವಿಸಿದ್ದೆನಲ್ಲ, ಕೋಪ ಅಪಮಾನಗಳಿಂದ ಮುಖ ಕೆಂಪಾಗಿತ್ತು. ಯಾವಾಗ ಹೀಗೆಲ್ಲಾ ನಡೆಯಿತು! ಎಲ್ಲಿ ಏನು ತಪ್ಪಾಯಿತು? ಇವಳು ಎಲ್ಲಿ ಎಡವಿದಳು? ಗೊಂದಲದ ಗೂಡಾಗಿತ್ತು ಅವನ ಚಿತ್ತ.

"ಎಸ್ ನಿಮಗೆ ಶಾಕ್ ಆಗುವುದು ಸಹಜ. ನಿಮ್ಮ ಮಗಳ ಬಾಯ್‌ಫ್ರೆಂಡ್ ಕೂಡಾ ಅವಳ ಜೊತೆ ಬಂದಿದ್ದ. ಇಬ್ಬರೂ ಒಬ್ಬರನ್ನೊಬ್ಬರು ಇಷ್ಟ ಪಡ್ತಿದಾರೆ," ಶ್ರೀನಾಥ ಎದ್ದು ನಿಂತ. ಡಾಕ್ಟರ್ ಸಹಜ ಎಂಬಂತೆ ನುಡಿದಿದ್ದಳು.

"ನಿಮ್ಮ ಮಿಸೆಸ್ ಬಂದಿದ್ರೆ ಅವರನ್ನ ಕಳಿಸಿ, ನಾನು ಅವರ ಹತ್ರ ಮಾತಾಡ್ತೀನಿ"

ಶ್ರೀನಾಥ ದುರ್ದಾನವನ್ನು ತೆಗೆದುಕೊಂಡವನಂತೆ ಹೊರಬಂದ. ಎದುರಾದ ಸುಗುಣಳಿಗೆ ನೀನು ಹೋಗು, ಎನ್ನುವಂತೆ ಕೈ ಸನ್ನೆ ಮಾಡಿ, ತಾನು ಎಲ್ಲೋ ಮರೆಯಾದ. ಸುಗುಣ ಒಳಬಂದಳು, ಕೈ ಮುಗಿದು ಕುಳಿತಳು.

"ಏನಾಗಿದೆ ನಮ್ಮ ಮಗಳಿಗೆ!" ದನಿ ನಡುಗಿತ್ತು, ಹಣೆಯಲ್ಲಿ ಬೆವರೊಡೆದಿತ್ತು.

"ನಿಮ್ಮ ಮಗಳು ಈಗ ಎರಡು ತಿಂಗಳ ಗರ್ಭಿಣಿ..." ಸುಗುಣ ನಂಬದವಳಂತೆ ಕಿವಿಗಳನ್ನು ಕೈಗಳಿಂದ ಮುಚ್ಚಿಕೊಂಡಳು. "ನಿಮಗೆ ನಿಮ್ಮ ಮಗಳು ಏನೂ ಹೇಳಿಲ್ವಾ! ಅವಳಿಗೆ ಬಾಯ್‌ಫ್ರೆಂಡ್ ಇರುವ ವಿಷಯ ನಿಮಗೆ ಗೊತ್ತಿಲ್ವಾ?" ಡಾಕ್ಟರು ನೇರವಾಗಿ ಕೇಳಿದ್ದಳು.

"ಇಲ್ಲ ಡಾಕ್ಟ್ರೇ? ಗೊತ್ತಿದ್ದಿದ್ರೆ ಈ ಅವಿವೇಕ ನಡೆಯೋಕೆ ಬಿಡ್ತಿದ್ನಾ?"

"ಆದದ್ದಾಯ್ತು ಈಗ ತಮ್ಮಿಬ್ಬರಿಗೂ ದೇಹ ಸಂಬಂಧ ಇತ್ತು ಅಂತ, ಇಬ್ಬರೂ ಒಪ್ಪಿಗೆ ಕೊಟ್ಟಿದಾರೆ, ಆದಷ್ಟೂ ಬೇಗ ಮದುವೆ ಮಾಡಿಬಿಡಿ" ಪರಿಹಾರವನ್ನು ಸೂಚಿಸಿದ್ದಳು.

"ಬೇಡ ಡಾಕ್ಟರ್, ಇಂಜೆಕ್ಷನ್ ಕೊಟ್ಟು ಅಬಾರ್ಷನ್ ಆಗುವಂತೆ ಮಾಡಿಬಿಡಿ ಪ್ಲೀಸ್" ಕೇಳಿಕೊಂಡಳು.

"ನಾವು ಹಾಗೇ ಮಾಡಲು ಸಾಧ್ಯವಿಲ್ಲ. ಮದುವೆ ಮಾಡಿದ್ರೆ ಪ್ರಾಬ್ಲಂ ಸಾಲ್ವ್ ಆಗುತ್ತೆ.

"ನಿಮಗೆ ಹೇಗೆ ಹೇಳಲಿ ಡಾಕ್ಟರ್, ಅವಳಿನ್ನ ಚಿಕ್ಕವಳು ಅವಳ ವಿದ್ಯಾಭ್ಯಾಸ ಇನ್ನು ಮುಗಿದಿಲ್ಲ. ಅವಳಿಗೆ ತಿಳಿಯದಂತೆ ಏನೋ ನಡೆದಿದೆ"

"ವಿದ್ಯಾಭ್ಯಾಸದ ಕಡೆ ಅವಳ ಗಮನ ಇರ್ಲಿಲ್ಲ ಅಂತ ಈಗ್ಲಾದ್ರೂ ಅರ್ಥವಾಗಿರಬೇಕಲ್ವಾ? ಇದೆಲ್ಲಾ ನಡೆಯದ ಹಾಗೆ ಎಚ್ಚರದಿಂದ ನೀವು ಇರ್ಬೇಕಾಗಿತ್ತು" ಡಾಕ್ಟರರ ಮಾತಿನಿಂದ ಅವಳಿಗೆ ಅವಮಾನವಾದಂತಾಗಿತ್ತು.

"ಮನೇಲಿ ಸಿಕ್ಕಾಬಟ್ಟೆ ಪ್ರಾಬ್ಲಂ ಆಗಿತ್ತು ಡಾಕ್ಟರೇ, ಮಕ್ಕಳ ಕಡೆ ಗಮನವನ್ನೇ

ಕೊಡುಕ್ಕೆ ಆಗ್ಲಿಲ್ಲ. ಮಾಧವಿ ಅಂಥವಳಲ್ಲ, ತಿಳುವಳಿಕೆ ಸಾಲದು. ಏನೋ ಮೋಸ ಆಗಿದೆ, ಅಬಾರ್ಷನ್ ಮಾಡಿಸಿಬಿಡಿ. ಇಲ್ಲದಿದ್ದರೆ, ಎಲ್ಲರ ಮರ್ಯಾದೆ ಹೋಗುತ್ತೆ" ಕೈ ಮುಗಿದಳು.

"ಮರ್ಯಾದೆ ಉಳಿಯಬೆಕು ಅಂತಿದ್ರೆ ಆದಷ್ಟು ಬೇಗ ಮದುವೆ ಮಾಡುವುದೇ ಸರಿಯಾದ ನಿರ್ಧಾರ. ಇಬ್ಬರಿಗೂ ಒಪ್ಪಿಗೆ ಇದೆ, ನೀವುಗಳು ಒಪ್ಪಂದ ಮಾಡಿಕೊಂಡು ಒಂದು ಡಿಸಿಷನ್ ತಗೊಳ್ಳಿ. ಪ್ರೆಗ್ನೆನ್ಸೀನ ಮುಚ್ಚಿಡೋಕೆ ಆಗುತ್ತಾ?"

"ಹಾಗೆ ಹೇಳ್ಬೇಡಿ ಡಾಕ್ಟರ್. ಎಷ್ಟು ಖರ್ಚಾದರೂ ಪರವಾಗಿಲ್ಲ. ಸಧ್ಯಕ್ಕೆ ನಾವು ಅವಳ ಮದುವೆಗೆ ಸಿದ್ಧರಾಗಿಲ್ಲ. ಈಗ ಅಬಾರ್ಷನ್ ಒಂದೇ ಉಪಾಯ" ಮತ್ತೆ ಕೈಮುಗಿದಳು.

"ನಾನು ಹೇಳಿದ್ದು ಮುಗೀತು. ನೀವು ಪೇರೆಂಟ್ಸ್, ನಿಮ್ಮ ಪ್ರಾಬ್ಲಂ ನಿಮ್ಮದು. ಈ ನರ್ಸಿಂಗ್ ಹೋಂನಲ್ಲಿ ಅಬಾರ್ಷನ್ ಮಾಡುವುದಿಲ್ಲ. ಬೇರೆ ಎಲ್ಲಾದ್ರೂ ವ್ಯವಸ್ಥೆ ಮಾಡಿಸಿಕೊಳ್ಳಿ. ನಾಳೆ ಬೆಳಿಗ್ಗೆ ಡಿಸ್ಚಾರ್ಜ ಮಾಡಿಸ್ಕೊಂಡು ಕರ್ಕೊಂಡು ಹೋಗಿ" ಆಕೆ ಮಾತು ಮುಗಿಯಿತು ಎಂಬಂತೆ ನೋಡಿದಳು. ಸ್ವಲ್ಪ ಹೊತ್ತು ಮಾತಿಲ್ಲದೇ ಕುಳಿತಿದ್ದ ಸುಗುಣ ಎದ್ದಳು. ಈಗ ಈ ಸನ್ನಿವೇಶವನ್ನು ಎದುರಿಸುವುದು ಹೇಗೆ? ಮಗಳು ಮನೆತನದ ಮರ್ಯಾದೆಯನ್ನೇ ಕಳೆದುಬಿಟ್ಟಳು. ಇವಳನ್ನು ನನ್ನ ಮಗಳು ಅಂತ ಹೇಗೆ ಹೇಳಿಕೊಳ್ಳುವುದು? ನೆಂಟರಿಷ್ಟರ ಎದುರಿಗೆ ತಲೆ ಎತ್ತಿಕೊಂಡು ಹೇಗೆ ತಿರುಗಾಡುವುದು, ಅವನ್ಯಾರೋ? ಎಂಥವನೋ...? ಪ್ರೀತಿಯಂತೆ ಪ್ರೀತಿ, ಪ್ರೀತಿ ಮಾಡುವ ವಯಸ್ಸಾ? ಮುಗ್ಧ ಮನಸ್ಸಿನ ಹುಡುಗಿಯ ಮನಸ್ಸನ್ನು ಕೆಡಿಸಿರುವ ಅವನನ್ನು ಸುಮ್ಮನೇ ಬಿಡಬಾರದು. ಪೋಲೀಸ್ ಕಂಪ್ಲೇಂಟ್ ಕೊಟ್ಟು ಜೈಲಿಗೆ ಕಳಿಸ್ಬೇಕು. ಅದಕ್ಕೆ ಮೊದಲು, ಹೇಗಾದರೂ ಸರಿ, ಈ ಪಿಂಡವನ್ನು ತೆಗೆಸಬೇಕು ಎಂದುಕೊಂಡು ಎದ್ದು ಹೊರ ಬಂದಳು

* * *

ಮಗಳೊಡನೆ ಮಾತನಾಡುವುದು ಬೇಕಿರಲಿಲ್ಲ. ಅವಳ ಮುಖವನ್ನು ನೋಡುವ ಮನಸ್ಸಾಗಲಿಲ್ಲ. ಸೀದಾ ನಡೆದು, ಯಾರೂ ಇಲ್ಲದ ಒಂದು ಸ್ಥಳಕ್ಕೆ ಬಂದು ನಿಂತಳು. ಅಲ್ಲಿಗೆ ಅವಳ ತಮ್ಮನೊಂದಿಗೆ ಶ್ರೀನಾಥನೂ ಬಂದ. "ಅಕ್ಕಾ ಡಾಕ್ಟರು ಏನಂದ್ರೆ?" ವಿಷಯ ತಿಳಿದಿದ್ದರೂ ಮತ್ತೆ ಕೇಳಿದ ಅವಳ ತಮ್ಮ ರವಿ.

"ಮಾಧವಿ ನಮ್ಮ ಮರ್ಯಾದೆ ಕಳೆದುಬಿಟ್ಳು ರವಿ. ಅವನನ್ನು ಬಿಡಬಾರದು"

"ಮೊದಲು ಇವಳನ್ನು ಕೊಂದು ಹಾಕಿಬಿಡ್ತೀನಿ" ಶ್ರೀನಾಥ ಕೋಪದಿಂದ ಗುಡುಗಿದ.

"ಅಬಾರ್ಷನ್ ಮಾಡಿಸಿ ಅಂತ ಕೇಳ್ಬೇಕಾಗಿತ್ತು... ಕೇಳಲಿಲ್ವಾ?" ತಮ್ಮ ಕೇಳಿದ.

"ಕೇಳದೇ ಇರ್ತೀನಾ? ಕೈ ಮುಗಿದು ಕೇಳ್ಕೊಂಡೆ ಇಲ್ಲಿ ಅಬಾರ್ಷನ್ ಮಾಡಿಸುಲ್ವಂತೆ. ನಾಳೆ ಬೆಳಿಗ್ಗೆ ಡಿಸ್ಚಾರ್ಜ ಮಾಡಿಸ್ಕೊಂಡು ಕರ್ಕೊಂಡ್ಹೋಗಿ ಎಂದುಬಿಟ್ರು"

"ಅವಳು ನನ್ನ ಮನಗೆ ಬರುವುದು ಬೇಡ. ಎಲ್ಲಾದ್ರೂ ಹಾಳಾಗಿ ಹೋಗ್ಲಿ"

"ತಾಳ್ಮೆಯಿಂದ ಮಾತಾಡಿ ಭಾವ, ಬೇರೆಲ್ಲಿಗೆ ಹೋಗ್ತಾಳೆ! ಬೇಸರ ಮಾಡ್ಕೊಂಡು ಆತ್ಮಹತ್ಯೆಗೆ ಪ್ರಯತ್ನಪಟ್ಟರೆ ಆಗ ಇನ್ನೂ ಕಷ್ಟವಾಗುತ್ತೆ"

"ಒಳ್ಳೆದೇ ಆಯ್ತು. ಕಾಟ ಕಳೀತು ಅಂತ ಅಂದ್ಕೊಳ್ತೀನಿ"

"ಪೋಲೀಸ್ ಕೇಸ್ ಆಗುತ್ತೆ ಎಲ್ಲರಿಗೂ ತಿಳಿಯುತ್ತೆ"

"ಹಾಗಂತ ಈ ವಿಷಯಾನ ಮುಚ್ಚಿಡೋಕೆ ಆಗುತ್ತಾ ರವಿ? ನಾನು ಹೇಗೆ ತಲೆ ಎತ್ತಿಕೊಂಡು ತಿರುಗಾಡ್ಲೀ? ನಿನಗಾದ್ರೂ ಬುದ್ಧಿ ಬೇಡ್ವಾ? ಮಗಳು ಏನ್ಮಾಡ್ತಾಳೆ? ಎಲ್ಲಿಗೆ ಹೋಗ್ತಾಳೆ ಅಂತ ಗಮನಿಸಬೇಡ್ವಾ?" ಹೆಂಡತಿಯ ಮೇಲೆ ರೇಗಿದ.

"ಅಕ್ಕಂಗೆ ಹೇಗೆ ಗೊತ್ತಾಗ್ಬೇಕು ಭಾವ? ಎಲ್ಲರಂತೆ ಇವಳೂ ಕಾಲೇಜಿಗೆ ಹೋಗ್ತಿದ್ದಲ್ಲ... ಏನೋ ಮೋಸ ಆಗಿದೆ..."

"ನೀನೂ ಹೀಗೆ ಮಾತಾಡ್ತೀಯಲ್ಲ, ಇವಳು ಬೆರಳು ಚೀಪುವ ವಯಸ್ಸಿನವಳಲ್ಲ, ಹೋಗ್ತಿದ್ದುದು ಕಾಲೇಜಿಗೆ ಓದುಕ್ಕೆ, ಚಕ್ಕಂದ ಆಡುಕ್ಕಲ್ಲ... ಅವನ್ಯಾರೋ ಅವನ ಸ್ನೇಹ ಯಾಕೆ ಬೇಕಿತ್ತು ಇವಳಿಗೆ? ಕದ್ದು ಮುಚ್ಚಿ ಓಡಾಡಿ, ಈಗ ಈ ಸ್ಥಿತೀನ ತಂದಿಟ್ಟುಕೊಂಡಿದಾಳಲ್ಲ, ಈಗ ಮರ್ಯಾದೆ ಹೋಗೋದು ನಮಗೆ? ಮೈಯೆಲ್ಲಾ ಧಗ ಧಗ ಅಂತ ಉರೀತಿದೆ. ನನ್ನೆದುರಿಗೆ ಅವಳು ಬಂದ್ರೆ ಅವಳನ್ನು ಭಸ್ಮ ಮಾಡಿಬಿಡ್ತೀನಿ. ಉರಿಗಣ್ಣು ಬಿಟ್ಟು ನುಡಿದ.

"ಭಾವ, ಆವೇಶದಲ್ಲಿ ಏನೇನೋ ಮಾತಾಡ್ತಿದೀರಿ. ಅವಿವೇಕ ನಡೆದುಹೋಗಿದೆ ನಿಜ. ಅದನ್ನು ಸರಿ ಮಾಡಬೇಕಾದದ್ದು ಮುಖ್ಯ. ಹೇಗೂ ಈ ವರ್ಷದಲ್ಲಿ ಕನ್ಯಾದಾನ ಮಾಡ್ಬಹುದು ಅಂತ ಶಾಸ್ತ್ರಿಗಳು ಹೇಳಿದ್ರಲ್ಲ..." ಅವನು ಮಾತನ್ನೂ ಪೂರೈಸಲು ಬಿಡಲಿಲ್ಲ.

"ನೀನು ಸುಮ್ನಿರು ರವಿ... ನಡತೆಗೆಟ್ಟವಳನ್ನು ಯಾರು ಮದುವೆಯಾಗ್ತಾರೆ! ಸುಳ್ಳು ತಟವಟ ಹೇಳಿ ಮದುವೆ ಮಾಡುವ ಮನುಷ್ಯ ನಾನಲ್ಲ. ನನಗೂ ಅವಳಿಗೂ ಇನ್ಮುಂದೆ ಯಾವ ಸಂಬಂಧವೂ ಇಲ್ಲ... ಅವಳು ನನ್ನ ಮಗಳಲ್ಲ, ನಾನು ಅವಳ ತಂದೆ ಅಲ್ಲ."

"ಬೇರೆ ಯಾರನ್ನೂ ಹುಡುಕೋದು ಬೇಡ, ಆ ಹುಡುಗ ಹೇಗೂ

ಮದುವೆಯಾಗಲು ಸಿದ್ಧನಾಗಿದ್ದನಂತೆ..."

"ಅವನ್ಯಾರೋ, ಅವನ ಕುಲಗೋತ್ರ ಎಂಥದೊ? ನನಗೆ ಒಪ್ಪಿಗೆ ಇಲ್ಲ" ಶ್ರೀನಾಥ ಮೊಂಡುವಾದ ಮಾಡಿದ

"ಹೋಗಲಿ ಬಿಡು ರವಿ. ನಿನ್ನ ಭಾವನ ಮನಸ್ಸು ಕೆಟ್ಟು ಹೋಗಿದೆ. ಮಾಧವಿಯನ್ನು ಒಪ್ಪಿಸಿ, ಅಬಾರ್ಷನ್ ಮಾಡಿಸ್ತೀನಿ. ಆಮೇಲೆ ಮದುವೆಯ ಮಾತು"

"ಸರಿ ಬೇಗ ಬೇಗ ಎಲ್ಲವನ್ನು ಮಾಡಿಬಿಡಿ. ಬೇಗ ಮತ್ತೊಬ್ಬ ಗಂಡನ್ನು ನೋಡಿ ಈ ವರ್ಷದೊಳಗೆ ಕನ್ಯಾದಾನ ಮಾಡಿಬಿಡಿ. ಯಾರಿಗೂ ಅನುಮಾನವೇ ಬರಲ್ಲ" ತಿಳುವಳಿಕಸ್ಥನಂತೆ ಸಲಹೆ ನೀಡಿದ.

"ಕನ್ಯಾದಾನ ಕನ್ಯಾದಾನ ಇದೊಂದೇ ಜಪ ನಿಂಗೆ ಗೊತ್ತಾಗ್ತಿರೋದು. ಅವಳೀಗ ಕನ್ಯೆಯಲ್ಲ, ಕಳಂಕಿನಿ. ಇವಳನ್ನು ದಾನ ಮಾಡಿದರೆ ಯಾರಿಗೂ ಸದ್ಗತಿ ಸಿಗಲ್ಲ. ಇನ್ನು ಹೆಚ್ಚು ಪಾಪ ಸುತ್ತಿಕೊಳ್ಳುತ್ತೆ. ನಾನು ಇಂಥ ಅಯೋಗ್ಯಕೆಲಸಗಳನ್ನು ಮಾಡಲ್ಲ. ನನಗೆ ಯಾರೂ ಏನೂ ಹೇಳ್ಬೇಡಿ. ನನ್ನ ಪಾಡಿಗೆ ನನ್ನನ್ನು ಬಿಡಿ" ಎಂದು ಹೇಳಿ ಅಲ್ಲಿ ನಿಲ್ಲದೇ ಹೊರಟು ಹೋದ. ತೇವವಾದ ಕಣ್ಣುಗಳನ್ನು ಒರೆಸಿಕೊಳ್ಳುತ್ತಾ ನಿಂತಿದ್ದ ಅಕ್ಕನ ಕಡೆ ನೋಡಿದ.

"ನಾನು ಹೇಳಿದ್ದರಲ್ಲಿ ತಪ್ಪು ಏನಾದ್ರೂ ಇದೆಯಾ, ನೀನೇ ಹೇಳು ಅಕ್ಕಾ. ಆ ಹುಡುಗನನ್ನು ನಾನೂ ನೋಡಿದೆ. ನನಗೂ ಅವನ ಕೆನ್ನಗೆ ನಾಲ್ಕು ಬಾರಿಸಬೇಕೆಂದು ಅಂತ ಅನ್ನಿಸಿದ್ದು ನಿಜ. ಆದರೆ ಇಲ್ಲಿ ಅವನೊಬ್ಬನಿಂದಲೇ ತಪ್ಪು ಆಗಿಲ್ಲ. ಮಾಧವಿಯೂ ತಪ್ಪು ಮಾಡಿದಾಳೆ. ಅಬಾರ್ಷನ್ ಮಾಡಿಸಿಕೊಳ್ಳುವಂತೆ ಉಪಾಯವಾಗಿ ಹೇಳು. ಬಲವಂತ ಮಾಡ್ಬೇಡ. ಪ್ರಾಣಕ್ಕೆ ಏನಾದ್ರೂ ಅಪಾಯ ಮಾಡ್ಕೊಂಡ್ರೆ ಏನ್ಮಾಡ್ತಿರಿ?"

"ಅವಳಿಗಿಂತ ಹೆಚ್ಚಿನ ಚಿಂತೆ, ನಿನ್ನ ಭಾವನದ್ದಾಗಿದೆ. ಸಿಟ್ಟು, ಹತಾಶೆ ಅವಮಾನಗಳಿಂದ ಕುಗ್ಗಿಹೋಗಿ, ಇವರಿಗೇನಾದ್ರೂ ಅಗಿ ಹೋದ್ರೆ, ನಮ್ಮಗಳ ಗತಿ ಏನು? ಅವಳೂ ಮನೆಗೆ ಬರುವುದೇ ಬೇಡ, ಅಂತ ಹಠ ಹಿಡಿದ್ರೆ, ನಾನು ಯಾರ ಪರವಾಗಿ ಮಾತಾಡ್ಲೀ? ನನಗೆ ಯಾರು ಸಹಾಯ ಮಾಡ್ತಾರೆ?"

"ನಾನಿದೀನಿ ಅಕ್ಕಾ, ನೀನು ಹೆದರ್ಬೇಡ. ನಾಳೆ ಡಿಸ್ಚಾರ್ಜ ಮಾಡಿಸ್ಕೊಂಡು ನಮ್ಮ ಮನೆಗೆ ಹೋಗ್ತೀನಿ. ನಯವಾಗಿ ಮಾತನಾಡಿ ಅಬಾರ್ಷನ್‌ಗೆ ಒಪ್ಪಿಸೋಣ. ಯಾರಿಗೂ ತಿಳಿಯದಂತೆ ಗುಟ್ಟಾಗಿ ಯಾವುದಾದ್ರೂ ನರ್ಸಿಂಗ್ ಹೋಂನಲ್ಲಿ ಅಬಾರ್ಷನ್ ಮಾಡಿಸೋಣ. ಅಲ್ಲಿಯವರೆಗೂ ನಮ್ಮ ಮನೇಲಿರ್ಲಿ"

"ಕೇಳಿದೋರ್ಗೆ ಏನು ಹೇಳೋದು ರವಿ?"

"ಏನಾದ್ರೂ ಸುಳ್ಳು ಹೇಳಲೇ ಬೇಕಾಗುತ್ತೆ. ಮೊದಲು ನಿನ್ನ ಗಂಡನ

ಕಡೆ ಗಮನ ಕೊಡು. ಮಾಧವಿಯ ಚಿಂತೆಯನ್ನು ಬದಿಗಿಡು, ಈ ರಾತ್ರಿ ರಾಧ ಅವಳ ಜತೆಲಿರ್ತಾಳೆ"

"ಖರ್ಚು ವೆಚ್ಚಕ್ಕೆ ನನ್ನತ್ರ ದುಡ್ಡಿಲ್ಲವಲ್ಲೋ"

"ನಾನೀಗ ಹಣ ಕೇಳಿದ್ನಾ? ನಾನೇನು ಹೊರಗಿನವನಾ! ಮೊದಲು ಈ ಸಮಸ್ಯೆಯಿಂದ ಪಾರಾಗುವ ಉಪಾಯವನ್ನು ಹುಡುಕೋಣ. ನೀನು ಈಗ ಮನೆಗೆ ಹೋಗು, ಭಾವ ಒಬ್ರೇ ಆಗಿಬಿಡ್ತಾರೆ...." ಅವನ ಮಾತಿಗೆ ತಲೆಯಾಡಿಸಿ, ಸುಗುಣ ಗಂಡನನ್ನು ಹುಡುಕುತ್ತಾ ನರ್ಸಿಂಗ್ ಹೋಂನ ಮುಂಭಾಗಕ್ಕೆ ಬಂದಳು. ಅಲ್ಲಿ ಗೇಟಿನ ಬಳಿ ನಿಂತಿದ್ದ ಶ್ರೀನಾಥನನ್ನು ಕಂಡು ಅವಳ ಎದೆಗುದಿ ಕಡಿಮೆ ಆಯಿತು.

"ಈಗ ಏನ್ಮಾಡೋದು?" ಕೆಳದನಿಯಲ್ಲಿ ಕೇಳಿದಳು

"ಏನ್ಮಾಡೋದು? ಎಲ್ಲಾ ನಿನ್ನಿಂದಲೇ... ಬೆಳೆದ ಮಗಳನ್ನು ಸರಿಯಾಗಿ ನೋಡಿಕೊಳ್ಳಕ್ಕೆ ಆಗ್ಲಿಲ್ಲ ನಿನ್ನಿಂದ, ಅನುಭವಿಸು"

"ಅವಳು ಬರೀ ನನ್ನ ಮಗಳಲ್ಲ, ನಿಮ್ಮ ಮಗಳೂ ಕೂಡಾ, ನೀವೂ ಹೀಗಾಡಿದ್ರೆ ಹೇಗೆ?" ಅತ್ತಳು.

"ಈಗ ಅತ್ತರೆ ಏನು ಪ್ರಯೋಜನ! ಯಾರ ಮನೆಯ ಹೆಣ್ಣು ಮಕ್ಕಳೂ ಕಾಲೇಜಿಗೆ ಹೋಗಲ್ವಾ? ಪಲ್ಲವಿ ತಾನಾಯಿತು ತನ್ನ ಕಾಲೇಜಾಯಿತು ಅಂತ ಗಂಭೀರವಾಗಿ ಹೋಗ್ತಿರಲಿಲ್ವಾ? ಅವಳ ಥರ ಇರುಕ್ಕೆ ನಿನ್ನ ಮಗಳಿಗೆ ಏನಾಗಿತ್ತು? ಬಾಯ್‌ಫ್ರೆಂಡ್ ಅಂತೆ ಅವನ ಜೊತೆ ಸುತ್ತಾಡಿ ಈಗ ಯಾವ ಸ್ಥಿತಿ ತಂದಿಟ್ಟುಕೊಂಡಿದಾಳೆ? ತಲೆ ಎತ್ತಿ ತಿರುಗಾಡುಕ್ಕೆ ಆಗುತ್ತಾ ನಾನು? ಮನೆಯ ಮರ್ಯಾದೆಯಲ್ಲೇ ಮಣ್ಣು ಪಾಲಾಯ್ತು, ಮನೆಗೆ ನಡೀ," ಎದುರಿಗೆ ಕಂಡ ರಿಕ್ಷಾ ಒಂದನ್ನು ನಿಲ್ಲಿಸಿದ ಇಬ್ಬರೂ ಮನೆಗೆ ಬಂದರು.

ಮನೆಗೆ ಬರುವಷ್ಟರಲ್ಲಿ ಉಳಿದವರೂ ಹಿಂತಿರುಗಿದ್ದರು. ಅವರುಗಳು ಪ್ರಯಾಣ ಆಯಾಸದಿಂದ ಸೋತಿದ್ದರೆ, ಇವರುಗಳು ಮಾಧವಿಯ ದೆಸೆಯಿಂದ ಮುಖವನ್ನು ಕೆಡಿಸಿಕೊಂಡಿದ್ದರು. ಅನಂತ, ರಮಾಕಾಂತ ಇಬ್ಬರೂ ಶ್ರೀನಾಥನ ಬಳಿಗೆ ಬಂದು ಮಾಧವಿಯ ಆರೋಗ್ಯದ ಬಗ್ಗೆ ವಿಚಾರಿಸಿದ್ದರು" ಇವತ್ತು ರಾತ್ರಿ ಅಲ್ಲೇ ಇರ್ತಾಳೆ. ನಾಳೆ ಡಿಸ್ಚಾರ್ಜ ಮಾಡ್ತಾರಂತೆ" ಎಂದಷ್ಟೇ ಹೇಳಿದ. ತಲೆ ನೋಯ್ತಿದೆ ಸ್ವಲ್ಪ ಹೊತ್ತು ಮಲಗಿರ್ತೀನಿ, ಎಂದು ಹೇಳಿ ರೂಮಿಗೆ ಹೋಗಿ ಬಾಗಿಲನ್ನು ಹಾಕಿಕೊಂಡ.

ಭವಾನಿ ಮಾಧವಿಯ ಬಗ್ಗೆ ವಿಚಾರಿಸಿ ಮೇಲೆ ಹೊರಟು ಹೊರಟುಹೋಗಿದ್ದಳು. ವನಜ ಸುಗುಣಳ ಮಂಕಾದ ಮುಖವನ್ನು ನೋಡಿ ಅನುಮಾನಿಸುತ್ತಾ ಕೇಳಿದಳು. ಸುಗುಣ ಅವಳ ಭುಜಕ್ಕೆ ಒರಗಿ ಅತ್ತು ಬಿಟ್ಟಳು.

"ಸುಗುಣ ಯಾಕೇ ಅಳ್ತೀದೀಯಾ? ಅಂತಾದ್ದೇನಾಗಿದೆ ನಿನ್ನ ಮಗಳಿಗೆ? ಏನೋ ಅಜೀರ್ಣ ಆಗಿರಬಹುದು. ಈ ಕಾಲದಲ್ಲಿ ಡಾಕ್ಟರು ಹೆದರಿಸಿ ಬಿಡ್ತಾರೆ. ಆ ಟೆಸ್ಟ್ ಮಾಡಿಸಿ ಈ ಟೆಸ್ಟ್ ಮಾಡಿಸಿ ಅಂತ... ಅದಕ್ಕೆಲ್ಲಾ ಹೆದರಿದ್ರೆ ಆಗುತ್ತಾ?"

"ಅದಲ್ಲಾ ಅಕ್ಕ, ಮಾಧವಿ ನಮ್ಮ ಮುಖಕ್ಕೆ ಮಸಿ ಮಸಿ ಬಳಿದು ಬಿಟ್ಲು. ಅವಳು ಹೀಗೆ ಮಾಡ್ತಾಳೆ ಅಂತ ನಾನು ಕನಸ್ನಲ್ಲೂ ಅಂದ್ಕೊಂಡಿರ್ಲಿಲ್ಲ..."

"ಏನು ಮಾಡಿದ್ಲು? ಏನಾಯ್ತು?..." ಸಂದೇಹದಿಂದ ಪ್ರಶ್ನಿಸಿದಳು.

"ಹೇಗೆ ಹೇಳಲಿ ಅಕ್ಕಾ? ಅವಳು ಬಸರಿಯಾಗಿಟ್ಟಿದ್ದಾಳೆ. ಎರಡು ತಿಂಗಳಾಗಿದೆಯಂತೆ. ನಾವು ಮುಖ ಎತ್ತಿ ತಿರುಗಾಡೋದು ಹೇಗೆ?" ವನಜ ಬೆಚ್ಚಿದಳು.

"ಏನ್ಹೇಳ್ತಿದಿಯಾ ನೀನು? ನಿಜನಾ? ಹಾಗಾಂತ ಡಾಕ್ಟರು ಹೇಳಿದ್ರಾ?" ಮತ್ತೆ ಮತ್ತೆ ಕೇಳಿದಳು. ಅವಳ ಕಣ್ಣುಗಳು ಅಚ್ಚರಿಯಿಂದ ಅಗಲವಾಗಿದ್ದವು.

"ಹೂಂ ಅಕ್ಕಾ, ನಾನ್ಯಾಕೆ ನನ್ನ ಮಗಳ ಮೇಲೆ ಸುಳ್ಳು ಹೇಳಲಿ? ಎಡವಟ್ಟು ಮಾಡ್ಕೊಂಡು ಬಿಟ್ಟಿದ್ದಾಳೆ. ನಮಗ್ಯಾರ್ಗೂ ಗೊತ್ತಾಗ್ಲೇ ಇಲ್ಲ. ನಾವೆಂಥಾ ಮೂರ್ಖರು"

"ಇದೆಲ್ಲಾ ಹೇಗಾಯ್ತು? ಯಾರು ಮೋಸ ಮಾಡಿದ್ರೂ ಅಂತ ಕೇಳ್ಬೇಕಾಗಿತ್ತು."

"ಕೇಳುಕ್ಕೆ ಏನು ಉಳಿದಿದೆ ಅಕ್ಕಾ, ಅವಳಿಗೊಬ್ಬ ಫ್ರೆಂಡ್ ಇದಾನಂತೆ. ಆಸ್ಪತ್ರೆಗೆ ಅವನೂ ಬಂದಿದ್ನಂತೆ ರಾಧಾ ಹೇಳಿದ್ಲು."

"ಪೋಲಿಸರಿಗೆ ಹಿಡಿದು ಕೊಡ್ಬೇಕಾಗಿತ್ತು. ಏನೂ ಅರಿಯದ ಹುಡುಗಿಯ ಜತೆ ಚೆಲ್ಲಾಟ ಆಡಿದಾನೆ, ಕೇಸು ಹಾಕಿ ಜೈಲಿಗೆ ಕಳಿಸ್ಬೇಕು ಅಂಥೋರನ್ನ.."

" ಅವನು ಡಾಕ್ಟರ್ ಹತ್ರ ಮಾತಾಡಿದಾನೆ. ನಮ್ಮಿಬ್ಬರಿಗೂ ಸ್ನೇಹ ಇತ್ತು. ನಾವಿಬ್ಬರೂ ಮದುವೆಯಾಗ್ತೀವಿ ಅಂತ ಕೂಡಾ ಹೇಳಿದ್ನಂತೆ" ಡಾಕ್ಟರ್ರೂ ಅವರಿಬ್ಬರ ಕಡೆಗೇ ಮಾತಾಡಿದ್ರು.

"ಚಂಡಾಲನ್ನ ತಂದು, ಎಷ್ಟು ಧೈರ್ಯ ಅವನಿಗೆ! ಇವಳೇನು ಬಿಟ್ಟಿ ಬಿದ್ದಿದಾಳ?

"ನಮ್ಮ ವಸ್ತುವೇ ಖೋಟಾ ಆಗಿರುವಾಗ, ಅವನನ್ನು ಅಂದು ಏನು ಪ್ರಯೋಜನ. ಅವನನ್ನು ಮದುವೆಯಾಗೋಕೆ ಇವಳೂ ಸಿದ್ಧವಾಗಿ ನಿಂತಿದ್ದಾಳೆ"

"ಮದುವೇನಾ? ಬುದ್ಧಿ ಗಿದ್ದಿ ಇದೆಯಾ ಅದಕ್ಕೆ? ಸುಮ್ಮನೆ ಅಬಾರ್ಷನ್ ಮಾಡಿಸು. ಮನೇಲಿ ಬಿದ್ದಿರಲಿ. ಆಮೇಲೆ ಸರಿಯಾದ ಗಂಡನ್ನು ನೋಡಿ ಮದುವೆ ಮಾಡಿ ಕೈ ತೊಳೆದುಕೊಂಡ್ರೆ ಆಯ್ತು" ವನಜ ಸ್ವಲ್ಪ ಬಿರುಸಾಗಿಯೇ

ನುಡಿದಳು.

"ಕಳಂಕ ಹೊತ್ತೋಳನ್ನು ಯಾರು ಮದುವೆ ಆಗ್ತಾರೆ ಅಕ್ಕಾ? ನಂಗಂತೂ ತಲೆ ಕೆಟ್ಟು ಹೋಗಿದೆ. ಅತ್ತೆ ಮುದ್ದು ಮಾಡಿ ಹಾಳು ಬಿಟ್ಟರು. ಒಟ್ನಲ್ಲಿ ನಾನು ಹಾಳಾದೆವು"

"ಒಂದು ಸಮಸ್ಯೆಗೆ ಒಂದು ಪರಿಹಾರ ಇದ್ದೆ ಇರುತ್ತೆ. ನಾಳೆ ಅವಳು ಮನೆಗೆ ಬಂದಮೇಲೆ ನಾವುಗಳೆಲ್ಲಾ ಸೇರಿ ಉಪಾಯವಾಗಿ ಅಬಾರ್ಷನ್‌ಗೆ ಒಪ್ಪಿಸೋಣ, ಆ ಫ್ರೆಂಡನ್ನ ಮರೆಯುವಂತೆ ತಿಳುವಳಿಕೆ ಹೇಳೋಣ. ನೀನು ಸುಮ್ನೆ ಚಿಂತಿಸ್ಬೇಡ"

"ಅದೆಲ್ಲಾ ಅಷ್ಟು ಸುಲಭವಲ್ಲ. ಆ ಡಾಕ್ಟರು ಕೂಡಾ ನಂಗೆ ತಿಳುವಳಿಕೆ ಹೇಳಿದ್ರು. ನಿಮ್ಮ ಮಗಳಿಗೆ ಹೇಗೂ ಹದಿನೇಳು ವರ್ಷ ತುಂಬಿದೆ. ಅವರಿಬ್ಬರೂ ಒಬ್ಬರನ್ನೊಬ್ಬರು ಇಷ್ಟಪಟ್ಟಿದಾರೆ. ಆ ಹುಡುಗ ಸಭ್ಯನಂತೆ ಕಾಣ್ತಾನೆ. ಮದುವೆ ಮಾಡಿಬಿಡಿ. ಎಲ್ಲಾ ಸರಿ ಹೋಗುತ್ತೆ. ಅಬಾರ್ಷನ್ ಯಾಕೆ ಮಾಡಿಸ್ಬೇಕು" ಅಂದುಬಿಟ್ಟರು.

"ಅಯ್ಯೋ ರಾಮಾ, ಡಾಕ್ಟರಾಗಿ ಹೀಗೆ ಹೇಳೋದಾ? ನಮ್ಮ ಮನೆಯ ಪರಿಸ್ಥಿತಿಯ ಬಗ್ಗೆ ತಿಳಿಸಿಬೇಕಾಗಿತ್ತು. ಈಗಾಗ್ಲೇ ಶ್ರಾದ್ಧಾ, ದಾನ, ದಕ್ಷಿಣೆ ಅಂತ ಲಕ್ಷಾಂತರ ರೂಪಾಯಿಗಳು ಖರ್ಚಾಗಿದೆ. ಈಗ ಮದುವೆ ಮಾಡುವ ಸ್ಥಿತಿಯಲ್ಲಿಲ್ಲ ಅಂತ ಹೇಳ್ಬೇಕಾಗಿತ್ತು"

"ಅದೆಲ್ಲಾ ಅವರಿಗೆಲ್ಲಿ ಅರ್ಥವಾಗುತ್ತೆ? ಅಲ್ಲದೇ ಆಸ್ಪತ್ರೆಯ ಖರ್ಚುವೆಚ್ಚವನ್ನು ನಾನೇ ಕೊಡ್ತೀನಿ ಅಂತ ಅವನು ಹೇಳಿದಾನೇನೋ. ಅವನೇನೂ ಕೊಡೋದು ಬೇಡ. ಯಾರಿಗೆ ಬೆಕು ಅವನ ದುಡ್ಡು...?"

"ಕೊಡ್ಲಿ ಬಿಡು. ಮಾಡಿರುವ ತಪ್ಪಿಗೆ ಅಷ್ಟಾದರೂ ದಂಡ ಕೊಡ್ಲಿ. ಇನ್ನು ಈ ಕಡೆ ತಲೆ ಹಾಕ್ಬೇಡ ಅಂತ ಅಟ್ಟಿದರಾಯ್ತು"

"ಹಾಗೆಲ್ಲಾ ಹೇಳುಕ್ಕೆ ಆಗುತ್ತಾ ಅಕ್ಕಾ? ನೀವು ಪುಣ್ಯವಂತರು. ಪಲ್ಲವಿ ನಿಮಗೆ ಕೆಟ್ಟ ಹೆಸರು ತರುವ ಕೆಲಸವನ್ನು ಮಾಡಲಿಲ್ಲ. ಇನ್ನೇನೇನು ಅಂತ ರಾದ್ಧಾಂತವಾಗುತ್ತೊ ಅಂತ ದಿಗಿಲಾಗುತ್ತೆ. ನಿಮ್ಮ ಮೈದುನ ಅವಳು ಮನೆಗೆ ಬರೋದೇ ಬೇಡ ಅಂತ ಹಠ ಹಿಡಿದಿದಾರೆ. ಇವರಿಗೇನು ಸಮಾಧಾನ ಹೇಳಲಿ! ಇವರೆನಾದ್ರೂ ಮಾಡಿಕೊಂಡರೆ, ನಮ್ಮ ಗತಿ ಏನು!?"

"ಛಿ ಬಿಡ್ತು ಅನ್ನು. ಹಾಗೆಲ್ಲ ಏನೂ ಆಗಲ್ಲ. ನಾವುಗಳೆಲ್ಲಾ ಇಲ್ವಾ?" ಮೊದಲು ನಿನ್ನ ಮಗಳ ಬಗ್ಗೆ ಯೋಚಿಸು."

"ನಾಳೆ ಅವಳು ಆಸ್ಪತ್ರೆಯಿಂದ ಸೀದಾ ರವಿಯ ಮನೆಗೆ ಹೋಗ್ತಾಳೆ. ಸಧ್ಯಕ್ಕೆ ಅಲ್ಲಿರಲಿ. ನಾಲ್ಕು ದಿನ ಕಳೆದ ಮೇಲೆ ನಿಮ್ಮ ಮೈದುನನ ಕೋಪ

ಕಡಿಮೆ ಆಗಬಹುದು. ಹಾಗೇ ಅಲ್ಲಿಯೇ ಯಾವುದಾದರೂ ನರ್ಸಿಂಗ್ ಹೋಂಗೆ ಕರೆದುಕೊಂಡು ಹೋಗಿ. ಅಬಾರ್ಷನ್ ಆಗುವಂತೆ ಇಂಜೆಕ್ಷನ್ ಕೊಡಿಸೋಕೆ ಹೇಳ್ತೀನಿ. ಇವಳ ದೆಸೆಯಿಂದ ರವಿಗೆ ಖರ್ಚು. ದುಡ್ಡು ಕೊಡಿ ಅಂತ ಇವರನ್ನು ಕೇಳೋಕೂ ಭಯ"

"ನಿನ್ನ ತಮ್ಮ ಏನು ಹೊರಗಿನೋನಾ? ಅವನಿಗೆ ನಿಧಾನವಾಗಿ ಕೊಟ್ಟರಾಯ್ತು. ಅವನ ಮನೆಗೆ ಬರೋರು ಹೋಗೋರು ಇದ್ದೇ ಇರ್ತಾರೆ. ವಿಷಯ ಹರಡಬಾರದು"

"ರಾಧಾ ಜಾಣೆ. ಎಚ್ಚರವಹಿಸಿ ಮಾತಾಡ್ತಾಳೆ. ಈ ರವೀನೇ ಎಡವಟ್ಟು. ಅವನು ಏನಂದ ಗೊತ್ತಾ? ಮಾಧವಿ ಬೇಸರಗೊಂಡು ಆತ್ಮಹತ್ಯೆ ಮಾಡಿಕೊಂಡ್ರೆ, ಊರಿಗೆಲ್ಲಾ ತಿಳಿಯುತ್ತೆ. ಅದರ ಬದಲು ಅವರಿಬ್ಬರಿಗೆ ಆದಷ್ಟು ಬೇಗ ಮದುವೆ ಮಾಡಿಬಿಡಿ. ಕನ್ಯಾದಾನ ಮಾಡಿದ ಫಲವೂ ನಿಮ್ಮ ತಾಯಿಗೆ ಸೇರುತ್ತೆ, ಅಂತಂದ. ಅವನು ಹಾಗೆ ಹೇಳ್ಬಹುದಾ ಅಕ್ಕಾ?"

"ಅವನು ಹೇಳೋದ್ರಲ್ಲೂ ಅರ್ಥ ಇದೆ ಅಂತನ್ಸುತ್ತೆ ಸುಗುಣ. ಅವಳೇನಾದ್ರೂ ಹೆಚ್ಚು ಕಡಿಮೆ ಮಾಡಿಕೊಂಡ್ರೆ ಜೀವಮಾನವೆಲ್ಲಾ ಕಾಡುತ್ತೆ. ಹೇಗೂ ಕನ್ಯಾದಾನ ಮಾಡಬಹುದು ಎನ್ನುವ ಮಾತು ಎದ್ದಿತಲ್ಲ. ಈಗ ಅ ಬಗ್ಗೇನೂ ಯೋಚಿಸಬಹುದು ಅಲ್ವಾ? ಶ್ರೀನಾಥ ಏನಂದ?"

"ಹಲ್ಲು ಕಡಿದು ಅವನ ಮೇಲೆ ರೇಗಿಬಿಟ್ಟರು. ಕನ್ಯತ್ವವನ್ನೇ ಕಳೆದುಕೊಂಡು ಕಳಂಕಿನಿ ಆಗಿದಾಳೆ. ಅರ್ಥವಿಲ್ಲದ ಮಾತನ್ನಾಡ್ಬೇಡ ಅಂದುಬಿಟ್ರು. ಮಗಳು ಕಳಂಕಿನಿ ಅಂತ ತಿಳಿದರೆ ಯಾರು ಮದುವೆಯಾಗ್ತಾರೆ? ಮರ್ಯಾದೆ ಎಲ್ಲಿ ಉಳಿಯುತ್ತೆ? ನಾನೇ ಈಗ ಯಾರ ಪರವಹಿಸಿ ಮಾತಾಡ್ಲಿ? ಗಂಡ, ತಮ್ಮ, ಮಗಳು ಮೂವರೂ ನನ್ನವರೇ. ನಾನೇ ಪ್ರಾಣ ಕಳೆದುಕೊಳ್ಳೋಣ, ಅಂತ ಅನ್ನಿಸ್ತಿದೆ ನಂಗೆ" ಸುಗುಣ ಬಿಕ್ಕಿದಳು.

"ಅಳ್ಬೇಡ ಸುಗುಣ, ನಾವುಗಳೆಲ್ಲಾ ನಿನ್ನ ಜತೆಗಿದೀವಿ. ಎಲ್ಲರೂ ಕೂತು, ಚರ್ಚಿಸಿ ಒಂದು ನಿರ್ಧಾರಕ್ಕೆ ಬರೋಣ. ಈಗ ಎಲ್ಲರೂ ಊಟ ಮಾಡೋಣ. ಮಕ್ಕಳು ಹಸಿದುಕೊಂಡು ಕುಳಿತಿವೆ. ನೀವಿಬ್ರೂ ಮಧ್ಯಾಹ್ನ ಸರಿಯಾಗಿ ಊಟ ಮಾಡಿಲ್ಲ"

"ಗಂಟಲಲ್ಲಿ ಅನ್ನ ಇಳಿಯುತ್ತಾ ಅಕ್ಕಾ? ನೀವುಗಳೆಲ್ಲಾ ಊಟ ಮಾಡಿ. ನಾನು ಬಡಿಸ್ತೀನಿ. ಎಂದು ಹೇಳಿ ಆಶ್ರಮದವರು ಕಟ್ಟಿಕೊಟ್ಟಿದ್ದ ಬುತ್ತಿಗಳನ್ನು ಬಿಚ್ಚಿ, ತಟ್ಟೆಗಳಿಗೆ ಹಾಕಿ ಎಲ್ಲರಿಗೂ ಕೊಟ್ಟಳು. ಅನಂತ ತನಗೆ ಊಟ ಬೇಡ ಫಲಾಹಾರವನ್ನು ತಗೋತೀನಿ" ಎಂದ.

"ಶ್ರೀನಾಥ ಏನ್ಮಾಡ್ತಾನೆ ಅಂತ ಕೇಳು."

"ನಾನು ಹೋಗಲ್ಲ ಅಕ್ಕಾ."

"ನೀನು ಕೇಳದಿದ್ರೆ ಹೇಗೆ? ಈಗ ನೀವಿಬ್ರೂ ಒಂದಾಗಿರ್ಬೇಕು. ಹೋಗು ಅವನಿಗೂ ಫಲಾಹಾರವನ್ನೇ ಕೊಡು..." ಎಂದು ಹೇಳಿ ಎರಡು ತಟ್ಟೆಗಳಲ್ಲಿ ಫಲಾಹಾರವನ್ನು ಸಿದ್ಧಗೊಳಿಸಿದಳು. ಭಾವನಿಗೆ ಒಂದು ತಟ್ಟೆಯನ್ನು ಕೊಟ್ಟು, ಇನ್ನೊಂದನ್ನು ಕೈಯಲ್ಲಿ ಹಿಡಿದು, ಶ್ರೀನಾಥ ಮಲಗಿದ್ದ ರೂಮಿಗೆ ಬಂದಳು. ಶ್ರೀನಾಥ ಮಾತಾಡದೇ ಫಲಾಹಾರವನ್ನು ತಿಂದು ಮುಗಿಸಿದ. ಸ್ವಲ್ಪ ಹಿತವೆನ್ನಿಸಿತು. ಸುಗುಣ ಸುಮ್ಮನೇ ಅವನ ಎದುರಿಗೆ ಕುಳಿತಿದ್ದಳು.

"ಶ್ರೀನಾಥ ತುಂಬಾ ಬೇಸರ ಮಾಡ್ಕೊಂಡಿದಾನೆ, ಹೋಗಿ ವಿಚಾರಿಸಿ" ವನಜ ಅನಂತನಿಗೆ ಹೇಳಿದಳು.

"ಮಗಳಿಗೆ ಹುಷಾರಿಲ್ಲ ಅನ್ನೋದನ್ನು ಮನಸ್ಸಿಗೆ ಅಷ್ಟೊಂದು ಹಚ್ಚಿಕೊಂಡಿದಾನಾ? ಏನು ಹುಡುಗನೋ" ಎಂದು ಹೇಳುತ್ತಾ ಎದ್ದು ಕೈ ಬಾಯಿ ತೊಳೆದು, ಶ್ರೀನಾಥನ ರೂಮಿಗೆ ಬಂದ.

"ತಲೆ ನೋವು ಕಡಿಮೆ ಆಯ್ತಾ?" ತಮ್ಮನನ್ನು ವಿಚಾರಿಸಿದ.

"ಹೂಂ ಅಣ್ಣಾ ಬಾ ಕೂತ್ಕೋ. ಸುಗುಣಾ, ಮುಕುಂದನನ್ನು ಕಳಿಸಿ ರಾಮಾಕಾಂತನಿಗೆ ಬರುವಂತೆ ಹೇಳು. ನಾನು ಇವರಿಬ್ಬರ ಹತ್ರ ಮಾತಾಡ್ಬೇಕು". ಶ್ರೀನಾಥ ನುಡಿದ.

"ನಿಧಾನವಾಗಿ ನಾಳೆ ಮಾತಾಡಿದ್ರೆ ಆಗಲ್ವಾ?"

"ಸುಮ್ನೆ ನಾನು ಹೇಳಿದಷ್ಟನ್ನು ಕೇಳು" ಹೆಂಡತಿಯ ಮೇಲೆ ರೇಗಿದ ಅವಳು ಹೊರಟು ಹೋಗಿದ್ದಳು. ಕೆಲವೇ ನಿಮಿಷಗಳಲ್ಲಿ ರಮಾಕಾಂತ ಬಂದ. ಅಣ್ಣನ ಪಕ್ಕದಲ್ಲಿ ಕುಳಿತ, "ನಾನು ನಿಮ್ಮಿಬ್ಬರ ಹತ್ರ ಒಂದು ಮುಖ್ಯವಾದ ವಿಷಯವನ್ನು ಮಾತಾಡ್ಬೇಕು" ಎಂದು ಹೇಳಿ ರೂಮಿನ ಬಾಗಿಲನ್ನು ಹಾಕಿದ. ಅಣ್ಣ ತಮ್ಮಂದಿರು ಮುಖ ಮುಖ ನೋಡಿಕೊಂಡರು.

"ಹಣಕಾಸಿನ ವಿಷಯ ಆದರೆ ನಿಧಾನವಾಗಿ ಮಾತಾನಾಡಿದ್ರಾಯ್ತು, ಅರ್ಜೆಂಟೇನಿಲ್ಲ" ರಮಾಕಾಂತನೆಂದ. ಅನಂತನೂ ಆ ಮಾತನ್ನು ಅನುಮೋದಿಸಿದ.

"ಇದು ನಮ್ಮ ಕುಟುಂಬಕ್ಕೆ ಸಂಬಂಧಿಸಿದ ವಿಷಯ. ನಿಮ್ಮಿಬ್ಬರಿಗೂ ತಿಳಿಯಲೇ ಬೇಕಾದದ್ದು. ಮಾಧವಿಯಿಂದ ಅವಿವೇಕ ನಡೆದುಹೋಗಿದೆ. ಅವಳು ಸಧ್ಯದಲ್ಲೇ ತಾಯಿಯಾಗಲಿದ್ದಾಳೆ"

"ಆಂ! ಏನು? ಯಾರು ಆ ಮೋಸಗಾರ! ಅವನನ್ನು ಸುಮ್ನೆ ಬಿಡ್ಬಾರ್ದು. ಕಂಪ್ಲೇಂಟ್ ಕೊಟ್ಟು ಶಿಕ್ಷೆ ಕೊಡಿಸೋಣ.." ರಮಾಕಾಂತ ಆವೇಶದಿಂದ ನುಡಿದ. ಅನಂಕ ಕೈ ಕಟ್ಟಿ ಕುಳಿತ

"ಅವನೊಬ್ಬನೇ ಅಲ ಮೋಸಗಾರ ಮಾಧವಿನೂ ಮೋಸ ಮಾಡಿಬಿಟ್ಲು. ಈಗ ಮರ್ಯಾದೆ ಹೋಗುವ ಪರಿಸ್ಥಿತಿ ಬಂದಿದೆ" ಶ್ರೀನಾಥ ಕೈ ಕೈ ಹೊಸೆದ.

"ಮೊದಲು ಇದನ್ನು ಸರಿ ಮಾಡ್ಬೇಕು. ಅಬಾರ್ಷನ್ ಮಾಡಿಸಿದರಾಯ್ತು"

"ಅದಕ್ಕೆ ಡಾಕ್ಟ್ರು ಒಪ್ತಿಲ್ಲ"

"ಅವರು ಕೇಳಿದಷ್ಟು ಹಣ ಕೊಟ್ಟು ಒಪ್ಪಿಸಿದ್ರೆ ಆಯ್ತು. ಯಾಕೆ ಮಾಡಲ್ಲ?"

"ಹಣದ ವಿಷಯ ಅಲ್ಲ. ಕಾನೂನು ವಿಷಯ, ಅವರು ಒಪ್ತಾನೇ ಇಲ್ಲ"

"ಯಾವ ಕಾನೂನು ಮದುವೆ ಇಲ್ಲದ ಹುಡುಗಿ ತಾಯಿಯಾಗೋದನ್ನ ಒಪ್ಪುತ್ತೆ? ನಾನು ಲಾಯರ್ರ ಹತ್ರ ಮಾತಾಡ್ತೀನಿ"

"ಡಾಕ್ಟ್ರೇ ಒಪ್ಪದಿದ್ದ ಮೇಲೆ ಯಾವ ಲಾಯರ್ರು ಏನು ಮಾಡ್ತಾರೆ? ಆದಷ್ಟು ಬೇಗ ಇಬ್ಬರಿಗೂ ಮದುವೆ ಮಾಡಿಬಿಡಿ, ಅಂತ ಸಲಹೆ ಕೊಟ್ರು. ನನಗೆ ದಿಕ್ಕು ತೋಚದಾಗಿದೆ. ಈ ಮದುವೆ ಹೇಗೆ ಸಾಧ್ಯ?"

"ಸಾಧ್ಯ ಮಾಡಬಹುದು" ಶ್ರೀನಾಥ ಇದುವರೆಗೂ ಮೌನವಾಗಿದ್ದ ಅನಂತ ಮಾತಾಡಿದ. ಅವಿವೇಕ ನಡೆದು ಹೋಗಿದೆ ನಿಜ. ಅದನ್ನು ಸರಿ ಮಾಡುವುದು ನಮ್ಮ ಕೈಲಿದೆ. ಬೇಗ ಇಬ್ಬರಿಗೂ ಮದುವೆ ಮಾಡಿಬಿಡೋಣ. ಕನ್ಯಾದಾನದ ಪುಣ್ಯ ನಿನಗೆ ಸಿಗುತ್ತದೆ. ಅಮ್ಮನಿಗೆ ಸದ್ಗತಿ ಸಿಗುತ್ತೆ" ಅನಂತನ ಮಾತಿಗೆ ಶ್ರೀನಾಥ ಪೆಚ್ಚಾಗಿ ನಕ್ಕ.

"ತಮಾಷೆಯಾಗಿದೆ ನಿನ್ನ ಮಾತು. ಈ ಕನ್ಯಾದಾನಕ್ಕೆ ಏನು ಅರ್ಥ ಇದೆ! ಗರ್ಭಿಣಿಯಾಗಿರುವ ಹುಡುಗಿಯನ್ನು ಕನ್ಯೆ ಅಂತ ಯಾರು ಒಪ್ತಾರೆ? ಅವಳು ತಪ್ಪು ಮಾಡಿದಾಳೆ. ಆ ತಪ್ಪನ್ನು ಮುಚ್ಚಲು ಮಾಡುವ ಮದುವೆಯಿಂದ ಪುಣ್ಯವೂ ಸಿಗಲ್ಲ, ಸದ್ಗತಿಯೂ ದೊರಕಲ್ಲ"

"ಹೋಗ್ಲಿ ಆ ಹುಡುಗ ಯಾರು! ಯಾರ ಮನೆಯವನು? ಏನು ಮಾಡ್ತಾನೆ? ಅಂತ ವಿಚಾರಿಸಬೇಕಾಗಿತ್ತು ನೀನು" ಅನಂತನೆಂದ

"ಇಲ್ಲ ನಾನು ವಿಚಾರಿಸಲಿಲ್ಲ. ಅವನೂ ಆಸ್ಪತ್ರೆಗೆ ಬಂದಿದ್ನಂತೆ. ತಮ್ಮಿಬ್ಬರಿಗೂ ಸ್ನೇಹ ಇದೆ. ನಾವಿಬ್ರೂ ಮದುವೆ ಆಗ್ತಿವಿ. ಅಂತ ಡಾಕ್ಟ್ರ ಕೈಲಿ ಹೇಳಿದಾನಂತೆ..."

"ಎಷ್ಟು ಧೈರ್ಯ ಅವನಿಗೆ? ಹೀಗೆ ಮಾಡಿದರೆ ಮದುವೆಗೆ ಒಪ್ಕೊಂಡು ಬಿಡ್ತಾರೆ ಅಂತ ಅವನು ಅಂದ್ಕೊಂಡಿದ್ರೆ, ಅವನೊಬ್ಬ ಶತಮೂರ್ಖ ಮೊದಲು ಹೇಗಾದರೂ ಸರಿ. ಮಾಧವಿಗೆ ಅಬಾರ್ಷನ್ ಮಾಡಿಸ್ಲೇ ಬೇಕು. ಅವನಿಗೆ ಶಿಕ್ಷೆಯಾಗಲೇಬೇಕು, ಅವಳು ಮನೆಗೆ ಬರಲಿ. ಎಲ್ಲರೂ ನಯವಾಗಿ ಮಾತನಾಡಿ ಅವಳನ್ನು ಒಪ್ಪಿಸೋಣ"

"ಇಲ್ಲ ಅವಳು ಇಲ್ಲಿಗೆ ಬರುವುದು ನಂಗೆ ಇಷ್ಟವಿಲ್ಲ. ಬೇಕಾದ್ರೆ ರವಿಯ ಮನೇಲಿರ್ಲಿ" ಶ್ರೀನಾಥ ಒರಟಾಗಿ ನುಡಿದ.

"ಹಾಗಂದ್ರೆ ಹೇಗೆ? ಮನೆ ಹುಡುಗಿ ಅವಳು. ಬೇರೆಯವರ ಮನೇಲಿದ್ರೆ ಏನು ಚೆನ್ನ? ನಾನೂ ಭವಾನಿ, ಇಬ್ಬರೂ ಹೋಗಿ, ಅವಳಿಗೆ ತಿಳುವಳಿಕೆ ಹೇಳಿ ಒಪ್ಪಿಸ್ತೀವಿ"

"ಈಗ್ಲೇ ಅತ್ತಿಗೆಗೆ ತಿಳಿಯೋದು ಬೇಡ, ಅವರ ಕೈಯಲ್ಲಿ ಮಾಧವೀನ ಒಪ್ಪಿಸುಕ್ಕೆ ಆಗದಿದ್ರೆ, ಅವರಿಗೆ ಬೇಸರ ಆಗುತ್ತೆ"

"ತಿಳಿಸದೇ ಇದ್ದರೆ ಬೇಸರ ಆಗುಲ್ವಾ? ನಿನ್ನ ಅತ್ತಿಗೆಯರೂ ಈ ಮನೆಯವರೇ. ಆಮೇಲೆ ಈ ಮಾತು ಮನಸ್ನಲ್ಲಿ ಉಳಿದುಬಿಡುತ್ತೆ, ಇಂಥಾ ವಿಷಯದಲ್ಲಿ ಹೆಂಗಸರ ಮನಸ್ಸು ಚುರುಕಾಗಿ ಓಡುತ್ತೆ. ಅವರ ಸಹಕಾರ ಬೇಕಾಗುತ್ತೆ. ಸುಗುಣ ಈ ನೋವನ್ನೆಲ್ಲಾ ಒಂಟಿಯಾಗಿ ಹೇಗೆ ತಾನೇ ಸಹಿಸ್ತಾಳೆ?" ಶ್ರೀನಾಥ ಉತ್ತರಿಸಲಿಲ್ಲ, ಅವರಿಬ್ಬರೂ ಸುಮ್ಮನಾಗಿದ್ದರು.

* * *

ಅನಂತ ಅತ್ತಿಂದಿತ್ತ ಹತ್ತು ಬಾರಿ ಶತಪಥ ತಿರುಗಾಡಿದ. ರಮಾಕಾಂತ ಮನದೊಳಗೇ ಲೆಖ್ಖಾಚಾರ ಹಾಕುತ್ತಿದ್ದ. ಶ್ರೀನಾಥ ಎದ್ದು ಬಚ್ಚಲ ಮನೆಗೆ ಹೋಗಿ ಬಂದ.

"ಇಬ್ರೂ ಹೋಗಿ ಮಲಕ್ಕೊಳ್ಳಿ. ನಾಳೆ ಮಾತನಾಡೋಣ" ಶ್ರೀನಾಥ ಇಬ್ಬರನ್ನು ಕುರಿತು ಹೇಳಿದ. ಅನಂತ ತಮ್ಮನ್ನು ಕೂರಿಸಿ ಅವನ ಮಗ್ಗಲಲ್ಲಿ ಕುಳಿತು ಭುಜದ ಮೇಲೆ ಕೈಯನ್ನಿಟ್ಟ.

"ನಾನೂ ಒಬ್ಬ ಮಗಳ ತಂದೆ. ಈಗ ಅವಳ ಮದುವೆಯ ವಯಸ್ಸು ಮೀರುತ್ತಿದೆ. ಅವಳು ಮದುವೆಯ ಆಸೆಯನ್ನು ಕಳೆದುಕೊಂಡಿದ್ದಾಳೆ. ಅವಳು ಸರಿಯಾದ ವಯಸ್ಸಿನಲ್ಲಿ ತಾನು ಯಾರನ್ನಾದರೂ ಪ್ರೀತಿಸ್ತಿದೀನಿ, ಅವನನ್ನೇ ಮದುವೆಯಾಗ್ತೀನಿ, ಅಂತ ಹೇಳಿದ್ದರೆ, ನಾನು ಅವರಿಬ್ಬರ ಮದುವೆಗೆ ಒಪ್ಪಿಗೆ ಕೊಟ್ಟಿರುತ್ತಿದ್ದೆ. ಆದರೆ ಪಲ್ಲವಿ ಹಾಗೆ ಮಾಡಲಿಲ್ಲ. ಈಗ ಈ ಹೆಜ್ಜೆಯನ್ನು ಮಾಧವಿ ತುಳಿದಿದ್ದಾಳೆ. ಅದನ್ನು ನಾವು ತಪ್ಪಿಸಬಾರದು. ನಿನ್ನ ಮಗಳು ಮುಂದುವರೆದ ಹೆಣ್ಣು. ತನ್ನ ಪತಿಯನ್ನು ತಾನೇ ಆರಿಸಿಕೊಂಡಿದಾಳೆ. ಅವಳ ಇಷ್ಟಕ್ಕೆ ಮಾನ್ಯತೆಯನ್ನು ಕೊಡೋಣ. ಹೆಣ್ಣುಮಕ್ಕಳು ಬಹಳ ಸೂಕ್ಷ್ಮ. ಅವಳ ಮನಸ್ಸನ್ನು ನೋಯಿಸುವುದು ಬೇಡ.

"ಅಣ್ಣಾ, ಮನೆಗೆ ಹಿರಿಯವನಾಗಿ ನೀನು ಈ ಮಾತನ್ನು ಹೇಳ್ತಿದೀಯ....?"

"ಹೂಂ, ನನಗೆ ಅನ್ನಿಸಿದ್ದನ್ನು ನಾನು ಹೇಳಿದೆ. ನಾನು ಪಾಠವನ್ನು ಕಲಿಸಿಕೊಡುವ ಮೇಷ್ಟ್ರು, ಅನೇಕ ಹುಡುಗಿಯರನ್ನು ನೋಡಿದೀನಿ. ಒಬ್ಬರಿದ್ದಂತೆ

ಇನ್ನೊಬ್ಬರು ಇರುವುದಿಲ್ಲ. ಭಾವನೆಗಳಿಗೆ ಬೆಲೆಕೊಟ್ಟು ಏನಾದರೂ ತೀರ್ಮಾನವನ್ನು ತೆಗೆದುಕೊಂಡರೆ ಏನ್ಮಾಡೋದು!"

"ಅವಳು ಆತ್ಮಹತ್ಯೆ ಮಾಡ್ಕೊಳ್ತೀನಿ ಅಂತಂದ್ರೆ, ನಾನು ಹೆದರೋನಲ್ಲ"

"ಮಗಳನ್ನು ಅಷ್ಟು ದ್ವೇಷಿಸ್ಬೇಡ. ನಿಮ್ಮಿಬ್ಬರ ಹಠದ ಮಧ್ಯೆ ಸುಗುಣಳ ಸ್ಥಿತಿ ಏನಾಗಬಹುದು ಅಂತ ಯೋಚಿಸಿದೀಯಾ? ಈಗಾಗಲೇ ಅವಳು ಮಾನಸಿಕವಾಗಿ ಕುಗ್ಗಿ ಹೋಗಿದಾಳೆ."

"ಹೌದು ಶ್ರೀನಾಥ, ನೀನು ಮಾಧವಿಯನ್ನು ದ್ವೇಷಿಸಿದ್ರೆ ಅವಳು ತಡ್ಕೋತಾಳ? ಆದರೆ ಅಣ್ಣ ಹೇಳ್ತಾ ಇರೋದು ಸರಿಯಾಗಿದೆ ಅಂತ ಅನ್ಸಲ್ಲ. ಕೆಲವು ದಿನ ಅವಳ ಪಾಡಿಗೆ ಅವಳನ್ನು ಬಿಡೋಣ. ಅವಳಿಗೇ ತಾನು ಮಾಡಿದ್ದು ತಪ್ಪು ಅಂತ ಅನ್ನಿಸಿ, ಅಬಾರ್ಷನ್‌ಗೆ ಒಪ್ತಾಳೆ ಆ ನಂಬಿಕೆ ನನಗಿದೆ" ರಮಾಕಾಂತನೆಂದ.

ಅನಂತ ತಾನು ಹೇಳಿದ್ದು ಮುಗಿಯಿತು. ಇನ್ನೇನು ಬಾಕಿ ಉಳಿದಿಲ್ಲ ಎಂಬಂತೆ "ನಾನು ಬರ್ತೀನಿ" ಎಂದು ಹೇಳಿ ಅಲ್ಲಿಂದ ಹೊರಬಿದ್ದ. ಹೆಚ್ಚು ಯೋಚಿಸ್ಬೇಡ ಶ್ರೀನಾಥ. ದೇವರು ಒಂದು ಸರಿಯಾದ ಮಾರ್ಗವನ್ನು ತೋರಿಸ್ತಾನೆ, ಎಂದು ತಮ್ಮನಿಗೆ ಸಾಂತ್ವನನ್ನು ಹೇಳಿ ರಮಾಕಾಂತನೂ ಅಲ್ಲಿಂದ ತನ್ನ ಮನೆಗೆ ಬಂದ.

ಮಲಗಲು ಬಂದ ಗಂಡ ಏನನ್ನು ಮಾತನಾಡದೇ ಮೌನವಾಗಿರುವುದನ್ನು ಕಂಡು ವನಜ ತಾನೇ ಮಾತಿಗೆಳೆದಳು, "ಮಾಧವಿ ಹೀಗೆ ಮಾಡ್ಬಾರ್ದಾಗಿತ್ತು"

"ಮಾಧವಿ ಏನ್ಮಾಡಿದ್ಲು?" ಪೆದ್ದನಂತೆ ಪ್ರಶ್ನಿಸಿದ.

"ಆಹಾಹಾ... ಏನೂ ತಿಳಿಯದವರಂತೆ ಮುಚ್ಚಿಟ್ಕೋಬೇಡಿ ಶ್ರೀನಾಥ ನಿಮಗೆ ಹೇಳಲಿಲ್ವಾ? ಮಾಧವಿ ತಾಯಿಯಾಗಲಿರುವ ವಿಷಯವನ್ನು...?"

"ಇದು ಆಡಿಕೊಳ್ಳೊ ವಿಷಯವಲ್ಲ. ಸರಿಪಡಿಸಬೇಕಾಗಿರುವ ಸಮಸ್ಯೆ. ಮಾಧವಿಗೆ ತಿಳುವಳಿಕೆ ಇದ್ದಿದ್ರೆ, ಈ ಅವಿವೇಕ ನಡೀತಿತ್ತಾ?"

"ಆಡಿಕೆಯ ವಿಷಯ ಅಲ್ಲ ಅಂತ ನಂಗೂ ಗೊತ್ತು. ಆದರೆ ಮನೆತನದ ಮರ್ಯಾದೆ ಹೋಗುವ ಸ್ಥಿತಿ ಬಂದಿದೆಯಲ್ಲ. ನಿಮ್ಮಮ್ಮನ ಆತ್ಮಕ್ಕೆ ಸದ್ಗತಿ ಹೇಗೆ ಸಿಗುತ್ತೆ? ಹೊರಗಿನವರು ಆಡಿಕೊಳ್ಳದೇ ಇರ್ತಾರಾ? ನೀವೇನು ಹೇಳಿದ್ರಿ"

"ಆದಷ್ಟು ಬೇಗ ಮದುವೆ ಮಾಡೋದೊಂದೇ ತಕ್ಷಣಕ್ಕೆ ಇರುವ ಉಪಾಯ"

"ಅಂದರೆ? ಕನ್ಯಾದಾನ ಮಾಡು, ಪುಣ್ಯ ಬರುತ್ತೆ ಅಂತ ನೀವೂ ಹೇಳಿದ್ರಾ?"

"ವ್ಯಂಗ್ಯವಾಗಿ ಮಾತಾಡುವ ಅಗತ್ಯವಿಲ್ಲ. ಇದರಲ್ಲಿ ತಪ್ಪೇನಿದೆ ಹೇಳು?

ಮಾಧವಿ ಏನಾದ್ರೂ ಪ್ರಾಣಕ್ಕೆ ಅಪಾಯ ಮಾಡ್ಕೊಂಡ್ರೆ. ಅದರ ಪಾಪ ನಮ್ಮನ್ನೆಲ್ಲಾ ಸುತ್ತಿಕೊಳ್ಳಲ್ವಾ? ಪಲ್ಲವಿಗೆ ನಾವು ಮದುವೆ ಮಾಡಕ್ಕೆ ಆಗ್ಲಿಲ್ಲ. ಈಗ ಈ ಮದುವೆಯನ್ನು ತಪ್ಪಿಸುವುದು ಸರಿಯಲ್ಲ"

"ಮಗಳ ಬಗ್ಗೆ ಏನೂ ಅನ್ನಿಸ್ಲಿಲ್ಲ ನಿಮಗೆ... ಈಗ ತಮ್ಮನ ಮಗಳ ಮೇಲೆ ಅತಿಯಾದ ಅಕ್ಕರೆ. ಸಧ್ಯದಲ್ಲೇ ಅವಳಿಗೆ ಮಗು ಆಗುತ್ತೆ. ನೀವು ದೊಡ್ಡ ತಾತಾ ಆಗ್ತೀರಿ. ಮಗುವನ್ನು ಎತ್ತಿಕೊಂಡು ಮುದ್ದಾಡುವ ಆಸೆ ನಿಮಗೆ. ಅವಳಿಗಿಂತ ದೊಡ್ಡವರ್‍ಯಾರಿಗೂ ಮದುವೆ ಕೂಡಾ ಆಗಿಲ್ಲ. ಅವಳಿಗೆ ಮಗುವನ್ನು ಹೆರಲು ಅರ್ಜೆಂಟು ಚೆನ್ನಾಗಿದೆ"

"ಸುಗುಣನ ಹತ್ರ ಹೀಗೇನಾದ್ರೂ ಮಾತಾಡ್ತೀಯಾ? ಅವಳು ಅಕ್ಕ ಅಂತ ನಿಂಗೆ ಮರ್ಯಾದೆ, ಗೌರವ, ಕೊಡ್ತಾಳೆ. ನಿನ್ನ ಸಣ್ಣ ಬುದ್ಧಿ ತೋರಿಸ್ಬೇಡ"

"ಯಾರ್‍ಯಾರ ಹತ್ರ, ಯಾವಗ್ಯಾವಾಗ ಹೇಗೆ ಮಾತಾಡ್ಬೇಕು ಅಂತ ನಂಗೂ ಗೊತ್ತು. ನಾನು ಪಾಠ ಹೇಳಿಕೊಡುವ ಟೀಚರ್ ಅಲ್ಲದೇ ಇರಬಹುದು. ಆದರೆ ಸಾಮಾನ್ಯಜ್ಞಾನ ನನಗೂ ಇದೆ. ಒಂದ್ವೇಳೆ ಪಲ್ಲವೀನೇ ಹೀಗೇನಾದ್ರೂ ಮಾಡಿದಿದ್ರೆ ನೀವು ಸುಮ್ಮನಿರ್ತಾದ್ರಾ? ನಿಮ್ಮ ತಾಯಿ ಸುಮ್ಮನಿರ್ತಿದ್ರಾ? ಎಲ್ರೂ ತಲೆಗೆ ಒಂದರಂತೆ ಮಾತಾಡದೇ ಸುಮ್ಮನಿರ್ತಿದ್ರಾ?"

"ಇಂಥಾ ಸಮಯದಲ್ಲಿ ಮನೆಯವರೇ, ಮನೆಯವರನ್ನು ಬಿಟ್ಟುಕೊಡಬಾರದು. ಆಡಿಕೊಂಡು ನಗೋದ್ರಲ್ಲಿ ಏನು ಹಿರಿತನ ಇದೆ! ಇದೆಲ್ಲಾ ನಿಂಗೆಲ್ಲಿ ಅರ್ಥವಾಗುತ್ತೆ"

"ಅರ್ಥವಾಗದಷ್ಟು ದಡ್ಡಿ ಏನಲ್ಲ ನಾನು. ಸ್ವಂತ ಮಗಳ ಮದುವೆಗೆ ಆಸಕ್ತಿ ತೋರಿಸಲಿಲ್ಲ. ಈಗ ಮಧ್ಯಸ್ಥಿಕೆ ವಹಿಸ್ತಿದೀರಲ್ಲ ಅಂತ ಅನ್ನಿಸ್ತಿದೆ"

"ಶ್ರೀನಾಥ ಕರೆದು ಹೇಳಿದ. ನಾನು ನನಗೆ ಅನ್ನಿಸಿದ್ದನ್ನು ಹೇಳಿದೆ. ಇಲ್ಲದಿದ್ರೆ ನಂಗೆ ಈ ವಿಷಯ ತಿಳಿಯುತ್ತಲೇ ಇರಲಿಲ್ಲ. ನೀನೇ ನನ್ನಿಂದ ವಿಷಯಗಳನ್ನು ಮುಚ್ಚಿಡ್ತೀಯ. ಈತ ಸಾಕು ಮಾಡು. ನಂಗೆ ನಿದ್ದೆ ಬರ್ತಿದೆ ಮಲಕ್ಕೋತೀನಿ" ಎಂದು ಹಾಸಿಗೆಯ ಮೇಲೆ ಉರುಳಿಕೊಂಡ.

"ಬೆಳೆದ ಮಗಳು ಕಣ್ಣೆದುರಿಗೆ ಓಡಾಡುತ್ತಿರುವಾಗ ನಿಮಗೆ ಅದ್ಹೇಗೆ ನಿದ್ದೆ ಬರುತ್ತೋ? ನನ್ನ ನಿದ್ದೆ ಎಂದೋ ಹೊರಟು ಹೋಯ್ತು..." ಗೊಣಗಿದಳು.

"ನಿದ್ದೆ ಮಾಡ್ಬಾರ್ದು. ಊಟ ಮಾಡ್ಬಾರ್ದು. ನೋಡಿದ ಗಂಡುಗಳನ್ನು ತಪ್ಪಿಸಿದವನು ನಾನಲ್ಲ. ಅವಳು ತಾನೇ ಯಾರನ್ನಾದ್ರೂ ನೋಡ್ಕೊಂಡು ಮದುವೆ ಆಗ್ತೀನಿ ಅಂತ ಅಂದಿದ್ರೆ, ಖಂಡಿತಾ ಒಪ್ತಿದ್ದೆ. ಈಗಲೂ ಕಾಲ ಮೀರಿಲ್ಲ. ಯಾರನ್ನಾದರೂ ಅವಳೇ ಆಯ್ಕೆ ಮಾಡಿಕೊಳ್ಳಲಿ. ನಾನು ಧಾರೆ ಎರೆದು ಕೊಡ್ತೀನಿ. ನಾವೂ ಕನ್ಯಾದಾನ ಮಾಡಿದಂತಾಗುತ್ತದೆ"

"ಎಲ್ಲರಿಗೂ ಕನ್ಯಾದಾನದ ಹುಚ್ಚು. ಮಾಧವಿ ಕನ್ಯೆಯಾಗಿ ಎಲ್ಲಿ ಉಳಿದಿದ್ದಾಳೆ? ತಾಯಿಯಾಗ್ತಿದಾಳೆ ಪಲ್ಲವಿ ಹಾಗೆ ಮಾಡ್ಲಿಲ್ಲ. ಮರ್ಯಾದೆ ಹೋಗುವ ಕೆಲಸವನ್ನು ಮಾಡಲಿಲ್ಲ"

"ಆದದ್ದಾಗಿ ಹೋಯ್ತು. ಸುಮ್ನೆ ಒಬ್ಬರನ್ನೊಬ್ಬರು ಆಡಿಕೊಂಡರೆ ಏನುಪಯೋಗ? ಪಲ್ಲವಿಗೂ ಮದುವೆ ಯೋಗ ಕೂಡಿ ಬರಬಹುದು..." ಹೆಂಡತಿಯನ್ನು ಮೆಚ್ಚಿಸುವವನಂತೆ ಮಾತಾಡಿದ.

"ಮದುವೆಯಾದ ಮೇಲೆ ಮೊದಲಬಾರಿಗೆ, ನನ್ನನ್ನು ಮೆಚ್ಚಿಸುವ ಮಾತನ್ನಾಡ್ತಿದೀರಿ!" ಉತ್ತರ ಕೊಡಲಿಲ್ಲ, ಅವನಾಗಲೇ ನಿದ್ದೆ ಹೋಗಿದ್ದ...

* * *

"ಭವಾನಿ ನಿದ್ದೆ ಬಂತಾ?" ರಮಾಕಾಂತ ಪಿಸುದನಿಯಲ್ಲಿ ಕೇಳಿದ.

"ಇಲ್ಲ ನಿಮಗೋಸ್ಕರವೇ ಕಾಯ್ತಿದ್ದೆ, ಶ್ರೀನಾಥ ಯಾತಕ್ಕೆ ಕರೆಸಿದ್ದ? ಗೋದಾನದ ಖರ್ಚಿನ ವಿವರವನ್ನು ಹೇಳಕ್ಕಾ? ಅರ್ಜೆಂಟು ಏನಂತೆ?"

"ಅರ್ಜೆಂಟಿನ ವಿಷಯ ಅದಲ್ಲ. ಈ ಮನೇಲಿ ಒಂದು ಅವಿವೇಕ ನಡೆದುಹೋಗಿದೆ" ಅದನ್ನ ನಿಂಗೆ ಈಗಲೇ ಹೇಳೋದೋ ಬೇಡ್ವೋ ಅಂತ ಯೋಚಿಸ್ತಿದ್ದೆ. ಏನಂತ ಹೇಳು?"

"ಯೋಚಿಸುಕ್ಕೆ ಏನಿದೆ? ಅದೇನು ಅಂತ ನಾನೇ ಹೇಳ್ತೀನಿ" ನಕ್ಕಳು

"ಅಂದ್ರೇ.... ನಿಂಗೆ ಎಲ್ಲಾ ನಂಗಿಂತ ಮೊದಲೇ ತಿಳಿದಿದೆ ಅನ್ನು. ಸುಗುಣ ಹೇಳಿದ್ಲಾ?"

"ಅವಳು ನಂಗೆ ಇದನ್ನೆಲ್ಲ ಎಲ್ಲಿ ಹೇಳ್ತಾಳೆ? ಅಡುಗೆ ಮನೆಯ ಕಿಟಕಿಯ ಹತ್ತಿರ ನಿಂತ್ಕೊಂಡು, ಅಕ್ಕನಿಗೆ ಹೇಳ್ತಾ ಇದ್ದುದನ್ನು ಕೇಳಿಸ್ಕೊಂಡೆ"

"ಕದ್ದು ಮುಚ್ಚಿ ಮಾತುಗಳನ್ನು ಕೇಳಿಸಿಕೊಳ್ಳುವುದು ತಪ್ಪು ಅಲ್ವಾ ಭವಾನಿ?

"ತಪ್ಪೋ ಸರಿಯೋ? ಇದನ್ನು ನಿಮಗೆ ಹೇಗೆ ಹೇಳೋದು ಅಂತ ಯೋಚಿಸ್ತಿದ್ದೆ. ಶ್ರೀನಾಥನಿಂದ ನಿಮಗೆ ತಿಳಿದದ್ದು ಒಳ್ಳೇದೇ ಆಯ್ತು"

"ಅವರುಗಳಿಗೆ ಗೊತ್ತಾದ್ರೆ ನಿನ್ನ ಬಗ್ಗೆ ಏನಂದ್ಕೊಳ್ತಾರೆ?"

"ಯಾರು ಏನು ಬೇಕಾದ್ರೂ ಅಂದ್ಕೊಳ್ಳಲಿ. ಈಗ ಮಾಧವಿಯ ವಿಷಯ ನೆಂಟರಿಷ್ಟರಲ್ಲಿ ಸುದ್ದಿಯಾಗಲ್ವಾ? ಅದನ್ನು ಹೇಗೆ ತಪ್ಪಿಸ್ತಾರೆ?"

"ನೆಂಟರಿಷ್ಟರಿಗೆ ಯಾರಾದ್ರೂ ಹೇಳದೇ ಹೇಗೆ ತಿಳಿಯುತ್ತೆ? ನೀನು ಅಂಥಾ ಕೆಲಸ ಮಾಡೀಯ ಜೋಕೆ? ಚಿಕ್ಕ ಹುಡುಗಿಯ ಜೀವನ ಹಾಳಾಗುತ್ತೆ" ಎಚ್ಚರಿಸಿದ.

"ಏನು ಚಿಕ್ಕವಳು? ಬಾಯಲ್ಲಿ ಬೆರಳಿಟ್ರೆ ಚೀಪುಕ್ಕೆ ಬರಲ್ಲ. ವರ್ಷದೊಳಗೆ ಕನ್ಯಾದಾನ ಮಾಡಿದರೆ ಹೇಗೆ ಅಂತ ನಾನು ಹೇಳಿದಾಗ. ಮದುವೆಯ

ವಯಸ್ಸಲ್ಲ, ಅಂತಂದು ನನ್ನ ಬಾಯಿ ಮುಚ್ಚಿಸಿದ್ರಿ . ಈಗ ಮದುವೆಗೆ ಮೊದಲೇ ತಾಯಿಯಾಗ್ತಿದಾಳೆ. ಇದಕ್ಕಿಂತಾ ಬೇಕಾ?"

"ಈ ಕೊಂಕು ಮಾತನ್ನೆಲ್ಲ ಬಿಡು. ಅದಕ್ಕೇ ನಿನ್ನನ್ನ ಎಲ್ರೂ ದೂರ ಇಟ್ಟಿರೋದು. ಇದು ನಮ್ಮ ಕುಟುಂಬದ ವಿಷಯ. ಹೊರಗಿನವರಿಗೆ ಗೊತ್ತಾಗಬಾರದು"

"ಇನ್ನು ಮೂರು ತಿಂಗಳು ಕಳಿದ್ರೆ. ಗುಂಡು ಗುಂಡಗೆ ಆಗ್ತಾಳೆ. ಆಗ ಯಾರಿಗೂ ಯಾರೂ ಹೇಳಬೇಕಾಗಿಲ್ಲ. ತಾನಾಗಿಯೇ ಗೊತ್ತಾಗುತ್ತೆ"

"ಅಲ್ಲಿಯವರೆಗೆ ಬಿಡೋರು ಯಾರು? ಅಬಾರ್ಷನ್ ಮಾಡಿಸಿದ್ರೆ ಸರಿ ಹೋಗುತ್ತೆ"

"ಆ ನರ್ಸಿಂಗ್ ಹೋಂನ ಡಾಕ್ಟರ್ರು ಅಬಾರ್ಷನ್ ಮಾಡಿಸಲ್ಲ. ಅಂದು ಬಿಟ್ರಂತೆ"

"ಆ ಡಾಕ್ಟರಲ್ಲದಿದ್ರೆ ಮತ್ತೊಬ್ಬರು. ಈ ಊರ್ನಲ್ಲಿ ಬೇಕಾದಷ್ಟು ನರ್ಸಿಂಗ್ ಹೋಂಗಳಿವೆ. ಸ್ವಲ್ಪ ಹೆಚ್ಚು ಹಣವನ್ನು ತಗೋಬಹುದು"

"ಅವರಿಬ್ಬರೂ ಮದುವೆಯಾಗೋಕೆ ಸಿದ್ಧರಾಗಿದಾರಂತೆ. ಅವರುಗಳ ಒಪ್ಪಿಗೆ ಇಲ್ಲದೇ ಅಬಾರ್ಷನ್ ಮಾಡಿಸುಕ್ಕೆ ಆಗಲ್ಲ. ಕಾನೂನು ಅಡ್ಡ ಬರುತ್ತೆ ಅಂತ ಅಂದ್ರಂತೆ"

"ಅದ್ಹೇಗೆ ಮದುವೆ ಸಾಧ್ಯ? ಅವನ್ಯಾರೋ? ಅವನ ಜಾತಿ ಮತ ಗೊತ್ತಿಲ್ಲ. ಕುಲ ಗೋತ್ರ ಯಾವುದು ಅಂತ ತಿಳಿದಿಲ್ಲ. ಪ್ರೀತಿಸಿದ್ರು ದುಡುಕಿದ್ರು ಅಂದ ಮಾತ್ರಕ್ಕೆ ಮದುವೆ ಮಾಡಿ ಬಿಡಕ್ಕೆ ಆಗುತ್ತಾ ಭವಾನಿ? ತಾವು ಇಬ್ಬರೂ ಮಾಡಿದ್ದು ತಪ್ಪು ಅಂತ ಅವರಿಗೆ ತಿಳಿಯಲೇಬೇಕು. ಅಬಾರ್ಷನ್ ಮಾಡಿಸಲೇಬೇಕು. ಕಾಲೇಜು ಬಿಡಿಸಿ ಮನೆಯಲ್ಲೇ ಇಟ್ಟುಕೊಂಡರೆ. ಕ್ರಮೇಣ ಎಲ್ಲವನ್ನು ಮರೆಯುತ್ತಾಳೆ. ಬೇರೆ ಹುಡುಗನನ್ನು ನೋಡಿ, ಅಚ್ಚುಕಟ್ಟಾಗಿ ಮದುವೆ ಮಾಡಿದ್ರೆ ಸರಿ. ಕಾಲ ಎಲ್ಲವನ್ನು ಮರೆಸುತ್ತದೆ"

"ಹಾಗೆ ಸಾಧ್ಯವಾಗುವ ಹಾಗಿದಿದ್ದರೆ, ಪ್ರೀತಿ, ಪ್ರೇಮ ಎಂಬ ಶಬ್ದಕ್ಕೆ ಅರ್ಥವೇ ಇರ್ತಿರ್ಲಿಲ್ಲ. ಮಾಧವಿಗೆ ಆ ಹುಡುಗನನ್ನು ಮರೆಯಲು ಸಾಧ್ಯವಾಗದೇ ಹೋದರೆ, ಮುಂದೆ ಅವಳೂ ಸುಖವಾಗಿರಲ್ಲ. ಅವಳ ಗಂಡನಿಗೂ ಸುಖವಿರಲ್ಲ"

"ಅಪಶಕುನ ನುಡೀಬೇಡ. ಮೊದಲು ಈ ಪ್ರಯತ್ನವನ್ನು ಮಾಡ್ಬೇಕು. ನಾಳೆಯ ದಿನ ಡಿಸ್ಚಾರ್ಜ ಮಾಡಿಸ್ಕೊಂಡು ಸೀದಾ ರವಿಯ ಮನೆಗೆ ಕರ್ಕೊಂಡು ಹೋಗ್ತಾರೆ. ನೀನು ಅವರ ಮನೆಗೆ ಹೋಗಿ ಮಾಧವಿಯನ್ನು ಮಾತನಾಡಿಸು. ಹಣ್ಣು, ಪ್ರಸಾದ ಎಲ್ಲವನ್ನು ತಗೊಂಡು ಹೋಗು. ಇದು ಪ್ರೀತಿ ಮಾಡುವ ವಯಸ್ಸಲ್ಲ ಅಂತ ತಿಳುವಳಿಕೆಯನ್ನು ಹೇಳು. ನೀನು ಮೋಸ ಹೋಗಿದೀಯ

ಅಂತ ಮನವರಿಕೆಯನ್ನು ಮಾಡು. ಅಬಾರ್ಷನ್‌ಗೆ ಒಪ್ಪಿಸು. ಅಷ್ಟೇ ಮಾಡು. ಆಗ ನಾನು ನಿನ್ನನ್ನು ಮೆಚ್ತೀನಿ"

ಭವಾನಿ ಗಂಡನ ಭುಜದ ಮೇಲೆ ಕೈಯನ್ನಿಟ್ಟಳು, "ನೀವು ನನ್ನನ್ನು ಮೆಚ್ಚಿ ಮದುವೆಯಾಗಿದೀರಿ. ನೀವು ಮೆಚ್ಚುವಂಥ ಕೆಲಸವನ್ನೇ ನಾನು ಮಾಡಿರೋದು. ಗೋದಾನದ ಪ್ರಸ್ತಾಪವನ್ನು ಎತ್ತಿದವಳು ನಾನು. ಹೂವಿನ ಹಾರವನ್ನು ಎತ್ತಿದಷ್ಟು ಹಗುರವಾಗಿ ಎಲ್ಲಾ ನೆರವೇರಿತು. ನೋಡೋರ್‍ಗೆ ಅನುಭವಿಸೋರ್‍ಗೆ ಪುಣ್ಯ ಇರ್ಬೇಕು. ಮಾಧವಿ ಬರಲೇ ಇಲ್ಲ. ಆಗಲೇ ಸುಗುಣಳಿಗೆ ಅನುಮಾನ ಬಂದಿರಬಹುದು. ಊಟ ಆಗ್ತಿದ್ದ ಹಾಗೆ ಗಂಡ ಹೆಂಡತಿ, ಅಲ್ಲಿಂದ ಹೊರಟುಬಿಟ್ಟರು. ನನಗೆ ತಿಳಿದದ್ದು ತಡವಾಗಿ. ಆದರೆ ನನಗೆ ಮಾಧವಿಯ ಮೇಲೆ ಯಾವ ದ್ವೇಷವಿಲ್ಲ. ನಾನು ಎತ್ತಾಡಿಸಿದೀನಿ, ಊಟ ಮಾಡಿಸಿದೀನಿ. ನನಗೂ ಅಂಥ ಒಂದು ಹೆಣ್ಣು ಇರಬಾರದಾಗಿತ್ತೆ ಅಂತೆನ್ನಿಸುತ್ತಿತ್ತು. ಸುಗುಣ ಮಗಳನ್ನು ಸರಿಯಾಗಿ ಬೆಳೆಸಿಲ್ಲ, ಅಂತ ಈಗ ಅನ್ನಿಸ್ತಿದೆ. ಅತ್ತೆಯ ಶುಶ್ರೂಷೆಯಲ್ಲಿ ಮಗಳನ್ನು ಗಮನಿಸಿಲ್ಲ. ಈ ಎಡವಟ್ಟು ನಡೆಯೋಕೆ, ನಿಮ್ಮ ಅಮ್ಮ, ಸುಗುಣ ಇಬ್ಬರೂ ಕಾರಣರು. ಬರೀ ಮುದ್ದು ಮಾಡಿದರೆ ಸಾಲದು. ಎಚ್ಚರವನ್ನು ವಹಿಸಬೇಕು"

"ಇದನ್ನೆಲ್ಲ ನನಗ್ಯಾಕೆ ಹೇಳ್ತದೀಯಾ?"

"ನಾನೇನಾದ್ರೂ ಮಾಧವಿಯ ತಾಯಿಯಾಗಿದ್ದಿದ್ರೆ. ಇಂಥಾ ಎಡವಟ್ಟು ಜರುಗುವುದಕ್ಕೆ ಆಸ್ಪದವೇ ಆಗುತ್ತಿರಲಿಲ್ಲ. ಮಾಧವಿ ಎಡವಿದಳು, ಸುಗುಣ ತಪ್ಪಿದಳು"

"ಅದೆಲ್ಲಾ ಸರಿ ಮುಂದೆ?"

"ನಾನು ಎಲ್ಲವನ್ನು ಸರಿ ಮಾಡ್ತೀನಿ. ಆ ವಿಶ್ವಾಸ ನನಗಿದೆ" ರಮಾಕಾಂತ ತಲೆದೂಗಿದ.

"ಥ್ಯಾಂಕ್ಸ್ ಭವಾನಿ. ನೀನು ಒಂದು ಕೆಲಸವನ್ನು ವಹಿಸಿಕೊಂಡ ಮೇಲೆ ಅದನ್ನು ಪೂರ್ಣವಾಗಿ ನಿಭಾಯಿಸ್ತೀಯ ಅಂತ ನನಗೆ ಗೊತ್ತು. ಆದರೆ ಉಪಕಾರ ಮಾಡುಕ್ಕೆ ಹೋಗಿ, ನೀನು ಕೆಟ್ಟವಳಾಗಬಾರ್ದು"

"ನನಗೆ ಶ್ರೀನಾಥನದೇ ಭಯ. ಮಾತಿನಲ್ಲಿ ಒರಟ. ಎದೆರೆದುರಿಗೇ ಅಂದುಬಿಡ್ತಾನೆ"

"ಹಾಗೆನ್ಬೇಡ. ಅವನಿಗೆ ನಿನ್ನ ಮೇಲೆ ಗೌರವ ಇದೆ"

"ಗೌರವ ಇದೆ. ಆದರೆ ಇದು ಅವನ ಮಗಳ ಸಮಸ್ಯೆ. ಉಪಾಯವಾಗಿ ಬಗೆಹರಿಸಬೇಕು. ಅವಳು ಮನೆಗೆ ಬರೋದೇ ಬೇಡ ಅಂದನಂತೆ. ನಿಮ್ಮ ತಮ್ಮ ಬಹಳ ಕೋಪಿಷ್ಠ"

"ಮಕ್ಕಳು ಅವಿವೇಕಿಗಳಾದರೆ ಕೋಪ ಬರದೇ ಇರುತ್ತಾ?"

"ಹೌದು ಅವಿವೇಕ ನಡೆದು ಹೋಗಿದೆ. ಆದರೆ ಅದನ್ನು ಸರಿಪಡಿಸುವ ವಿವೇಕ ಇವನಿಗೆ ಇರಬೇಕು ಅಲ್ವಾ? ಕೋಪ ಮಾಡ್ಕೊಂಡು ಏನು ಸಾಧಿಸ್ತಾನೆ?"

"ಅವನ ಮೇಲಿನ ಯಾವುದೋ ಹಳೆಯ ಕೋಪವನ್ನೆಲ್ಲಾ ತೀರಿಸ್ಕೊಳ್ಳುತ್ತಿರುವಂತಿದೆ. ಈಗ ಮಲಕ್ಕೋ ಬೆಳಿಗ್ಗೆ ಮಾತಾಡೋಣ. ಗುಡ್ ನೈಟ್" ಎಂದ ದೀಪವನ್ನಾರಿಸುತ್ತಾ. ಕೆಲವೇ ನಿಮಿಷಗಳಲ್ಲಿ ಅವನಿಗೆ ನಿದ್ದೆ ಬಂದಿತ್ತು. ಭವಾನಿ ಏನನ್ನೋ ಆಲೋಚಿಸುತ್ತಿದ್ದಳು. ಮಾಧವಿ ಯಾಕೆ ಹೀಗೆ ಮಾಡಿದ್ಲು? ಅವನು ಹೆದರಿಸಿ ಬೆದರಿಸಿ ವಶಪಡಿಸಿಕೊಂಡು ಮೋಸ ಮಾಡಿರ ಬಹುದೆ? ಅಥವಾ ನಿಜವಾಗಿಯೂ ಒಬ್ಬರನ್ನೊಬ್ಬರು ಪ್ರೀತಿಸುತ್ತಿದ್ದು, ಆಕರ್ಷಣೆ ಗೊಳಗಾಗಿ ಹೀಗೆ ನಡೆದಿರುಬಹುದೆ? ಅದನ್ನು ಅವಳೇ ಹೇಳಬೇಕು. ಅವಳೀಗ ಮೊದಲಿನ ಮಾಧವಿಯಲ್ಲ. ಮುಗ್ಧತೆಯನ್ನು ಕಳೆದುಕೊಂಡು ಪ್ರೌಢಾವಸ್ಥೆಗೆ ಬಂದಿರುವವಳು. ತನ್ನೊಡನೆ ಸರಿಯಾಗಿ ಮಾತನ್ನಾಡದಿದ್ದರೇ. ಹಾಗಾಗಬಾರದು. ಅವಳನ್ನು ಒಲಿಸಿಕೊಳ್ಳುವ ರೀತಿಯಲ್ಲಿ ಮಾತನಾಡಬೇಕು ಎಂದುಕೊಂಡಳು.

ಎರಡು ದಿನ ಕಳೆಯಿತು. ಸುಗುಣ ಯಾರೊಡನೆಯೂ ಹೆಚ್ಚು ಮಾತನಾಡದೇ ಮೌನವಾಗಿದ್ದುಬಿಟ್ಟಳು. ಶ್ರೀನಾಥ ಮುಖ ದಪ್ಪಗೆ ಮಾಡಿಕೊಂಡು ಓಡಾಡುತ್ತಿದ್ದ. ವನಜ ತನ್ನ ಪಾಡಿಗೆ ತಾನು ಮನೆಯ ಕೆಲಸಗಳ ಕಡೆ ಗಮನ ಕೊಟ್ಟಳು. ಭವಾನಿ, ತನಗೆ ಏನೂ ತಿಳಿದಲ್ಲ ಎಂಬಂತೆ ಓಡಾಡಿಕೊಂಡಿರಲು ಪ್ರಯತ್ನಿಸಿದಳು. ಆದರೆ ಅವಳಿಂದ ಆಗಲಿಲ್ಲ. ವನಜ ಇದ್ದಲ್ಲಿಗೆ ಬಂದಳು.

"ಅಕ್ಕಾ ನಾನೇನಾದ್ರೂ ಹೆಲ್ಪ ಮಾಡ್ಲಾ?" ಮಾತಿಗೆ ಎಳೆದಳು.

"ಬೇಡ ಭವಾನಿ. ನಿನ್ನ ಮನೆ ಕೆಲಸವೇ ನಿನಗೆ ಸಾಕಷ್ಟು ಇರುತ್ತೆ. ಅಲ್ಲಿ ನೀನೊಬ್ಬಳೇ ಮಾಡ್ಬೇಕು. ಇಲ್ಲಿ ಸುಗುಣ ಇದಾಳೆ. ಪಲ್ಲವಿ ಇದಾಳೆ"

"ಪಲ್ಲವಿಗೆ ಮನೆ ಕೆಲಸ ಮಾಡಕ್ಕೆ ಪುರುಸೊತ್ತು ಎಲ್ಲಿರುತ್ತೆ? ಸುಗುಣ, ಮಾಧವಿಗೆ ಹುಷಾರಾಗಿಲ್ಲದಾಗ್ನಿಂದ ಮಂಕಾಗಿ ಬಿಟ್ಟಿದಾಳೆ. ಯಾರ ಹತ್ರವೂ ಮಾತಾಡ್ತಿಲ್ಲ"

"ಮಕ್ಕಳಿಗೆ ಹುಶಾರಿಲ್ಲದಿದ್ರೆ ತಾಯಿ ಮಂಕಾಗುವುದು ಸಹಜ"

"ಹೌದು, ಮಾಧವಿ ಹೀಗೆ ಎಡವಟ್ಟು ಮಾಡ್ಕೋಬಾರದಾಗಿತ್ತು. ಸುಗುಣಳಿಗೆ ಆಘಾತವಾಗಿದೆ ಈಗ ಮುಂದೇನು!" ವನಜ ಅಚ್ಚರಿಯನ್ನು ಪ್ರಕಟಗೊಳಿಸಲಿಲ್ಲ.

"ನಿಂಗೆ ರಮಾಕಾಂತ ಎಲ್ಲವನ್ನು ಹೇಳಿದಾನೆ, ಮುಂದೇನು ಅಂತ ನನ್ನನ್ನು ಕೇಳಿದ್ರೆ"

"ನಂಗೆ ನೀವಿಬ್ರೂ ಏನನ್ನೂ ಹೇಳಲ್ಲ. ನನ್ನ ಗಂಡನೇ ತಾನೇ ನಂಗೆ

ಏನಾದ್ರೂ ಹೇಳೋದಿದ್ರೆ ಹೇಳೋದು. ಇಂಥಾ ದೊಡ್ಡ ಅವಿವೇಕ ನಡೆದಿದೆ. ಯಾಕೆ? ನಾನು ಈ ಮನೆಗೆ ಸೇರಿದವಳಲ್ವಾ, ಅಕ್ಕಾ?" ನಯವಾಗಿ ಮಾತಿನಲ್ಲೇ ಚುಚ್ಚಿದಳು.

"ಹಾಗಲ್ಲ ಭವಾನಿ... ನಿನಗೆ ಹೇಳಬಾರದು ಅಂತ ಏನಿಲ್ಲ..."

"ಯಾವಾಗ ಹೇಳ್ತಿದ್ರೀ?" ಇನ್ನೆರಡು ತಿಂಗಳು ಕಳೆದ್ರೆ ತಾನಾಗಿಯೇ ಗೊತ್ತಾಗ್ತಿತ್ತು ಹೌದು ತಾನೆ?

"ನಾನು ವಾದ ಮಾಡುವ ಮೂಡ್‌ನಲ್ಲಿಲ್ಲ. ಈಗ ತಿಳೀತಲ್ಲ, ಯಾರು ಹೇಳಿದ್ರೇನು? ಶ್ರೀನಾಥನೇ ಅವರ ಅಣ್ಣಂದಿರಿಗೆ ಹೇಳಿದ್ದು. ನಿಮ್ಮ ಭಾವನೇ ನನಗೆ ಹೇಳಿದ್ದು. "ತಾನು ಕದ್ದು ಮಾತುಗಳನ್ನು ಕೇಳಿಸಿಕೊಂಡೆ ಎಂದು ಹೇಳಲು ಹಿಂಜರಿದು ಸುಮ್ಮನಾದಳು. "ಭವಾನಿ ಸಧ್ಯಕ್ಕೆ ಈ ವಿಷಯ ನಿನ್ನಲ್ಲೇ ಇರಲಿ. ಹೊರಗಿನವರಿಗೆ ತಿಳಿಯುವುದು ಬೇಡ..."

"ರಾಧಾ ಹೊರಗಿನವಳವ್ವಾ, ಅವಳಿಗೆ ಎಲ್ಲಾ ತಿಳಿದಿದೆ."

"ಅದು ಅನಿವಾರ್ಯವಾಗಿತ್ತು. ಈಗ ಮಾಧವಿ ರಾಧಾಳ ಮನೇಲೇ ಇದಾಳೆ. ಸಧ್ಯಕ್ಕೆ ಕೆಲವು ದಿನ ಅಲ್ಲೇ ಇರ್ತಾಳೆ"

"ಹೂಂ ಶ್ರೀನಾಥ ಅವಳು ಮನೆಗೆ ಬರೋದು ಬೇಡ ಅಂದ್ನಂತೆ ಇದು ಸರೀನಾ?"

"ಸರಿಯೋ ತಪ್ಪೋ? ನಾನು ಹೇಗೆ ಹೇಳಲಿ? ಶ್ರೀನಾಥ ಮಾಧವಿಯ ತಂದೆ. ಇದು ಅವನ ನಿರ್ಧಾರ ಅವನ ಕೋಪ ಸಜ.."

"ಅಂದ್ರೇ... ಈ ಮನೆ ಮಗಳು. ಬೇರೆಲ್ಲೋ ಇರೋದು ಸರಿ ಅಂತೀರಾ? ಒಂದು ವೇಳೆ ಪಲ್ಲವೀನೇ ಹೀಗೇನಾದ್ರೂ ಮಾಡಿದ್ದಿದ್ರೆ ಏನ್ಮಾಡ್ತಿದ್ರೀ?"

"ಭವಾನಿ! ಈಗ ಪಲ್ಲವಿಯ ವಿಷಯ ಯಾಕೆ? ಅವಳು ಹಾಗೇನಾದ್ರೂ ಮಾಡಿದ್ದಿದ್ರೆ ಮದುವೆಯಾಗದೇ ಹಾಗೇ ಉಳಿತಿರ್ಲಿಲ್ಲ... ಗಂಡನ ಮನೇಲಿರ್ತಿದ್ಲು"

"ಪಲ್ಲವಿಯ ಹಾಗೆ ತಾನೂ ಎಲ್ಲಿ ಮದುವೆಯಾಗದೇ ಉಳಿದು ಬಿಡ್ತೀನೋ ಅಂತ ಮಾಧವಿ ಹೀಗೆ ಮಾಡಿಕೊಂಡಿರಬಹುದಾ?"

"ವಕೀಲರ ತರಹ ಪ್ರಶ್ನೆ ಮೇಲೆ ಪ್ರಶ್ನೆ ಕೇಳ್ಬೇಡ. ಎಲ್ಲಾ ನಿಂಗೇ ಗೊತ್ತಾಗುತ್ತೆ"

"ಯಾವಾಗ ಅಕ್ಕ? ಮಾಧವಿ ಮದುವೆಯಾಗಿ ಗಂಡನ ಮನೆಗೆ ಹೋದ್ಮೇಲಾ?

"ಹೇಳಿದ್ನಲ್ಲ ನಂಗೂ ಏನೂ ಗೊತ್ತಿಲ್ಲ. ಸುಗುಣಂಗೆ ಕೇಳಿಸಿದ್ರೆ ನೊಂದ್ಕೋತಾಳೆ. ಅವಳ ಹೊಟ್ಟೆ ಸಂಕಟ ಏನೂಂತ ನಿಂಗೆ ಹೇಗೆ ಅರ್ಥವಾಗುತ್ತೆ! ನೀನೋ ಬರೀ ಗಂಡು ಮಕ್ಕಳ ತಾಯಿ"

"ಗಂಡು ಮಕ್ಕಳಿಗೆ ತಾಯಿ ಆದ್ರೇನಂತೆ. ನಾನು ಒಂದು ಹೆಣ್ಣು. ಹೆಣ್ಣಿನ

ಕಷ್ಟ ಸುಖದ ಅರಿವು ನನಗೂ ಇದೆ. ನಾನು ಪಟ್ಟಣದಲ್ಲಿ ಬೆಳೆದರೆ ಏನಂತೆ! ನನ್ನನ್ನು ನನ್ನ ತಂದೆ ತಾಯಿ ಶಿಸ್ತಿನಲ್ಲಿ ಬೆಳೆಸಿದಾರೆ. ರಮೇಶನಿಗೆ ಮದುವೆ ಮಾಡಿದರೆ ನನಗೂ ಸೊಸೆ ಬರ್ತಾಳೆ ನನಗೆ ತಿಳುವಳಿಕೆ ಏನೂ ಇಲ್ವಾ!? ಒಂದು ವೇಳೆ ಇಲ್ಲದಿದ್ರೆ ಮನೆಯವರಾಗಿ ನೀವುಗಳು ಸುಮ್ಮನಿದ್ದು ಬಿಡ್ತೀರಾ! ನನ್ನ ನೆರವಿಗೆ ಬರ್ತಿರೋ ಇಲ್ವೋ?"

"ಕುಟುಂಬ ಅಂದರೆ ಅದೇ ಅಲ್ವಾ! ಒಬ್ಬರಿಗೊಬ್ಬರು ನೆರವಾಗೋದು. ಅತ್ತೆಯವರು ಬದುಕಿದ್ದಾಗ ಒಂಥರಾ ಇತ್ತು, ಈಗ ನಮ್ಮಗಳ ಜವಾಬ್ದಾರಿ ಹೆಚ್ಚಿಗೆ"

"ಮತ್ತೆ! ನಿಮ್ಮ ಕುಟುಂಬಕ್ಕೆ ನನ್ನನ್ನು ಸೇರಿಸಿಕೊಳ್ಳಿ. ಯಾಕೆ ದೂರ ಇಡ್ತೀರಾ?"

"ನಾನೆಲ್ಲಿ ದೂರ ಇಟ್ಟಿದೀನಿ ಭವಾನಿ? ನಿನಗೇ ನಮ್ಮ ರೀತಿ ನೀತಿ ಮಾತುಕತೆ ಯಾವುದೂ ಸರಿ ಹೋಗಲ್ಲ. ಎಷ್ಟಾದರೂ ನಾವು ಹಳ್ಳಿಯಲ್ಲಿ ಬೆಳೆದವರು. ನಿನ್ನಷ್ಟು ಓದಿಲ್ಲ"

"ಯಾವಾಗಲೂ ಹೀಗೇ ವ್ಯಂಗ್ಯವಾಗಿ ಮಾತನಾಡಿ. ನನ್ನನ್ನ ದೂರ ದೂರವೇ ಇಟ್ಟಿದೀರಿ, ನಂಗೇನೂ ಗೊತ್ತಾಗುಲ್ಲ ಅಂತ ಅಂದ್ಕೋಬೇಡಿ" ಎಂದು ಸೊರ ಬರ ಅಂತ ಅಳತೊಡಗಿದಳು. ವನಜ ಉದಾಸೀನತೆಯನ್ನು ತೋರಿದಳು. ಭವಾನಿ ತನ್ನ ಮನೆಗೆ ಹೊರಟು ಹೋದಳು.

ಬಟ್ಟೆಗಳನ್ನು ಒಗೆದು ಹಾಕಿ, ಬಿಸಿಲಿಗೆ ಹರವಿ, ತನ್ನ ಕೆಲಸವನ್ನು ಮುಗಿಸಿ, ಸುಗುಣ ಒಳಗೆ ಬಂದಳು. ಭವಾನಿ ಹೋದ ವಿಷಯವನ್ನು ವನಜ ಅವಳಿಗೆ ತಿಳಿಸಲಿಲ್ಲ. ಅವರೇನು ಮಾತನಾಡಿದ್ದು ಅಂತ ಅವಳು ಕೇಳಲಿಲ್ಲ.

"ರಾಧ ಫೋನು ಮಾಡಿದ್ಲಾ? ಮಾಧವೀನ ಮನೆಗೆ ಕರ್ಕೊಂಡು ಬಂದ್ರಂತಾ?

"ಏನೋ ಗೊತ್ತಿಲ್ಲ ಅಕ್ಕಾ, ನಾನು ಕೇಳಲಿಲ್ಲ"

"ಮಾಧವಿ ಬಗ್ಗೆ ಇಷ್ಟು ಉದಾಸೀನ ಒಳ್ಳೇದಲ್ಲ ಸುಗುಣಾ. ಎಷ್ಟಾಗಲೀ ಅವಳು ನಿನ್ನ ಮಗಳೇ ನಿನ್ನ ಬಗ್ಗೆ ಕಹಿ ಭಾವನೆ ಉಳಿದುಕೊಳ್ಳಲ್ವಾ?"

"ನಂಗಾಗ್ತಿರೋ ಸಂಕಟನ ನಾನು ಯಾರ ಹತ್ರ ಹೇಳಿಕೊಳ್ಳಲಿ!?"

"ಒಂದ್ಸಾರಿ ಹೋಗಿ ಮಾತನಾಡಿ, ಚೆನ್ನಾಗಿ ಬೈದು ತಿಳುವಳಿಕೆ ಹೇಳು. ಆ ಅಧಿಕಾರ ನಿನಗಿದೆ. ಕೆಟ್ಟ ಕೆಲಸ ಮಾಡಿದ್ದು ಅಂತ ದೂರ ಮಾಡೋಕೆ ಆಗುತ್ತಾ! ಸರಿಪಡಿಸಬೇಡ್ವಾ?"

"ಯಾಕೋ ಮನಸ್ಸು ಶಾಂತವಾಗ್ತಾನೇ ಇಲ್ಲ. ಇವರು ಏನಂತಾರೋ..?"

"ಫೋನಿನಲ್ಲಿ ಮಾತನಾಡಿದ್ರೆ ಶ್ರೀನಾಥಂಗೆ ಏನು ಗೊತ್ತಾಗುತ್ತೆ? ಮಾಧವಿ

ಹತ್ತಿರ ಮಾತನಾಡುಕ್ಕೆ ಇಷ್ಟವಿಲ್ಲದಿದ್ರೆ. ರಾಧಾಳ ಹತ್ರ ಮಾತಾಡು. ಎಷ್ಟಾಗಲೀ ಅವಳು ನಿನ್ನ ತಮ್ಮನ ಹೆಂಡತಿ. ಅವಳ ಮನಸ್ನಲ್ಲಿ ಏನೇನಿದೆಯೋ? ಅಲ್ಲದೇ ಹೇಳಿಕೊಡೋಕೆ ನೂರೆಂಟು ಜನ ಇರ್ತಾರೆ"

"ಯಾರಾದ್ರೂ ಏನಾದ್ರೂ ಅಂದ್ರಾ ಅಕ್ಕಾ, ಮೇಲಿನಿಂದ ನಿಮ್ಮ ತಂಗಿ ಬಂದಿದ್ರಾ"

"ಅವಳೇನೋ ಬಂದಿದ್ಲು, ನಾನು ಹೆಚ್ಚಿಗೆ ಮಾತನ್ನು ಬೆಳೆಸಲಿಲ್ಲ. ಹಾಗೇ ಲೋಕಾರೂಢಿಯಾಗಿ ಹೇಳ್ದೆ. ಭವಾನಿ ಏನು ಹೊರಗಿನವಳಾ? ಅವಳಿಗೂ ವಿಷಯ ಗೊತ್ತಾಗಿದೆ ರಮಾಕಾಂತ ಎಲ್ಲವನ್ನು ಹೇಳಿದಾನೆ," ಸುಗುಣ ನಿಟ್ಟುಸಿರು ಬಿಟ್ಟು ನೆಲದ ಮೇಲೆ ಕುಳಿತಳು

ಮುಂಬಾಗಿಲನ್ನು ತೆರೆದು ಅಚ್ಚರಿಯಿಂದ ನೋಡಿದ ರಾಧಾಳ ಕಡೆ ಭವಾನಿ ಮಂದಹಾಸವನ್ನು ಬೀರಿದಳು. "ಹೇಗಿದೀರಿ ರಾಧಾ?" ಆತ್ಮೀಯತೆಯಿಂದ ಕೇಳಿದಳು.

"ಚೆನ್ನಾಗಿದೀನಿ ಬನ್ನಿ" ಎಂದು ಕರೆದಳು.

"ಈ ಕಡೆ ಷಾಪಿಂಗ್‌ಗೆ ಅಂತ ಬಂದಿದ್ದೆ. ಹಾಗೇ ನಮ್ಮ ಮಾಧವಿನ ನೋಡಿ, ಮಾತನ್ನಾಡಿಸ್ಕೊಂಡು ಹೋಗೋಣ ಅಂತ ಬಂದೆ" ಮುಗುಳ್ನಗುತ್ತಾ ಒಳಗೆ ಬಂದಳು ಅತ್ತಿತ್ತ ಕಣ್ಣು ಹಾಯಿಸಿದಳು. ಎಲ್ಲಿ ನಮ್ಮ ಚಿನ್ನಾರಿ? ಮಲಗಿದಳಾ? ವಿಚಾರಿಸಿದಳು. ಅಷ್ಟರಲ್ಲಿ ರೂಮಿನಲ್ಲಿದ್ದ ಮಾಧವಿ ಭವಾನಿಯ ಧ್ವನಿಯನ್ನು ಕೇಳಿ ಹೊರಕ್ಕೆ ಬಂದಳು.

"ದೊಡ್ಡಮ್ಮಾ...." ಎಂದು ಸಂಭ್ರಮದಿಂದ ಕೇಳಿದ ಮಾಧವಿಯನ್ನು ಮೇಲಿನಿಂದ ಕೆಳಕ್ಕೆ ಎರಡೆರಡು ಬಾರಿ ನೋಡಿ, ಬಾಚಿ ತಬ್ಬಿಕೊಂಡಳು. ಮಾಧವಿ ದೊಡ್ಡಮ್ಮನ ಭುಜದ ಮೇಲೆ ತಲೆಯನ್ನಾನಿಸಿ, ಅತ್ತು ಸೆರಗನ್ನು ತೋಯಿಸಿದಳು. ಭವಾನಿ ಅವಳನ್ನು ಎದುರಿಗೆ ನಿಲ್ಲಿಸಿಕೊಂಡಳು.

"ಮಾಧವಿ ಸೊರಗಿ ಹೋಗಿದೀಯಲ್ಲೇ.... ಆತಂಕವನ್ನು ತುಳುಕಿಸುತ್ತಾ ಕೇಳಿದಳು. ಮಾಧವಿಯ ಮುಖ ಕೆಂಪಾಗಿತ್ತು, ನಾಚಿಕೆಯಿಂದ ತಲೆಯನ್ನು ತಗ್ಗಿಸಿದಳು. ತಲೆನೋವು, ವಾಂತಿ, ವಾಕರಿಕೆ, ಸುಸ್ತು ಅಂತ ನೀನು ನರ್ಸಿಂಗ್ ಹೋಂಗೆ ಸೇರಿದ್ದೆ ಅಂತ ನಂಗೆ ತಿಳಿದದ್ದೇ ತಡವಾಗಿ. ನನ್ನ ಮನಸ್ಸು ತಡೀಲಿಲ್ಲ. ನಿನ್ನನ್ನ ನೋಡ್ಬೇಕು ಅಂತ ಬಂದೇ ಬಿಟ್ಟೆ. ಈಗ ಹೇಗಿದೀಯಾ?"

"ಈಗ ಹುಶಾರಾಗಿದೀನಿ ದೊಡ್ಡಮ್ಮಾ... ನೀವು ಒಬ್ಬರೇ ಬಂದ್ರಾ?" ಅವಳ ಹಿಂದೆ ನೋಟವನ್ನು ಹಾಯಿಸಿದಳು.

"ಹುಂ, ಇಲ್ಲೇ ಹತ್ತಿರದ ಒಂದು ಆಫೀಸ್ನಲ್ಲಿ ಕೆಲಸ ಇತ್ತು, ಅದ್ಸರಿ, ನೀನು ಮನೆಗೇ ಬರಬಹುದಾಗಿತ್ತಲ್ಲ, ನೀನು ಇಲ್ಲದೇ ಮನೆ ಭಣ ಭಣ

ಅಂತಿದೆ, ಅಜ್ಜಿಯೂ ಇಲ್ಲ ನೀನ್ಯಾಕೆ ಇಲ್ಲಿದೀಯ?"

"ಸಧ್ಯಕ್ಕೆ ನೀನು ಇಲ್ಲಿರು ಅಂತ ಅಮ್ಮನೇ ಹೇಳಿದ್ಲು. ಅತ್ತೆ ನನ್ನನ್ನು ಇಲ್ಲಿಗೆ ಕರ್ಕೊಂಡು ಬಂದ್ರು..."

"ನಿಮ್ಮಮ್ಮ ಯಾಕೆ ಹಾಗೆ ಹೇಳಿದ್ಲೋ ಗೊತ್ತಿಲ್ಲ? ಮನೇಲಿ ಯಾವ ನೆಂಟರಿಷ್ಟರು ಇಲ್ಲ. ಇರೋರೆಲ್ಲಾ ಮನೆಯವರೇ... ನಿನಗೇನು ಆಯಾಸ ಆಗುತ್ತಿರ್ಲಿಲ್ಲ. ಹೋಗ್ಲಿ ಬಿಡು. ಇವರೂ ನಮ್ಮವರೇ. ಆದರೆ ನಾವುಗಳು ಪದೇ ಪದೇ ಇಲ್ಲಿಗೆ ಬರುಕ್ಕೆ ಆಗುಲ್ಲವಲ್ಲ. ಏನ್ರೀ ರಾಧಾ, ಇವಳನ್ನು ನೋಡೋಕೆ ಅಂತ ನಾವುಗಳೂ ಬರ್ತಾ ಇದ್ದರೆ ನಿಮಗೆ ತೊಂದರೆ ಆಗುತ್ತೇನೋ?" ರಾಧಾಳ ಕಡೆ ಕುಹಕದ ನೋಟವನ್ನು ಹರಿಸಿದಳು.

"ತೊಂದರೆ ಏನ್ಬಂತು ಅತ್ತಿಗೇ. ಆದರೆ, ವಿಷಯಾನೇ ಬೇರೆ...." ಮಾಧವಿಯ ಕಡೆ ನೋಡಿ ಉತ್ತರಿಸಿದಳು.

"ತೊಂದರೆ ಅಲ್ಲ; ಮುಜುಗರ. ಅದೇನೇ ಇರಲಿ. ಈಗ ನಾನು ಇವಳನ್ನು ಮನೆಗೆ ಕರ್ಕೊಂಡು ಹೋಗ್ತೀನಿ. ಕಳಿಸಿಕೊಡಿ..." ರಾಧಾ ಬೇಡ ಎನ್ನುವಂತೆ ಸಂಜ್ಞೆ ಮಾಡಿದಳು.

"ಇಲ್ಲ ದೊಡ್ಡಮ್ಮಾ, ನಾನು ಆ ಮನೆಗೆ ಬರಲ್ಲ. ಅಮ್ಮಂಗೆ ಅಪ್ಪಂಗೆ ನನ್ನಮೇಲೆ ಸಿಟ್ಟು. ನಾನು ಎಲ್ಲಿಗೂ ಬರಲ್ಲ. ಇಲ್ಲೇ ಇರ್ತೀನಿ"

"ಇಲ್ಲಿರ್ತೀಯಾ! ನೋಡಿದವರು ಏನಂತಾರೆ! ಕೇಳಿದವರಿಗೆ ಏನು ಹೇಳೋದು?"

"ಆ ಚಿಂತೆ ಅವರಿಗೆ ಇರ್ಬೇಕಾಗಿತ್ತು. ನಾನು ಎಲ್ಲಿದ್ರೇನು!" ಸಿಟ್ಟನ್ನು ತೋರಿದಳು.

"ಹಾಗೆಲ್ಲ ಮಾತಾಡ್ಬಾರ್ದು ಮಾಧವಿ. ಎಷ್ಟಾಗಲೀ ಅವರು ನಿನ್ನ ತಂದೆ ತಾಯಿ. ಅವರ ಕೋಪ ಎಷ್ಟು ದಿನ ಇರುತ್ತೆ! ನೀನು ಬಂದು ಬಿಡು. ಎಲ್ಲಾ ಸರಿ ಹೋಗುತ್ತೆ"

"ಸರಿ. ಆದರೆ ಒಂದು ಕಂಡೀಷನ್ ಮೇಲೆ ನಾನು ಆ ಮನೆಗೆ ಬರ್ತೀನಿ. ನೀವು ಅಮ್ಮನ್ನ, ಅಪ್ಪನನ್ನ ಈ ಕಂಡೀಷನ್‌ಗೆ ಒಪ್ಪಿಸ್ಬೇಕು" ತೋರು ಬೆರಳನ್ನು ತೋರಿದಳು.

"ಕಂಡೀಷನ್ನಾ? ಯಾಕೆ?"

"ಹೂಂ. ಒಂದು ನಾನು ಅಬಾರ್ಷನ್ ಮಾಡಿಸ್ಕೊಳ್ಳಲ್ಲ. ನಾನು ಮನೋಜನನ್ನು ಮದುವೆಯಾಗಕ್ಕೆ ಅವರು ಒಪ್ಪಿಗೆ ಕೊಡ್ಬೇಕು. ಹಾಗಿದ್ರೆ ಮಾತ್ರ ಬರ್ತೀನಿ" ಹುಡುಗಿ ಘಾಟಿ ಎಂದುಕೊಂಡಳು.

"ಅಯ್ಯೋ ಇಷ್ಟೇ ತಾನೇ, ಒಪ್ಪಿಸಿದ್ರಾಯ್ತು. ನಾವೆಲ್ಲರೂ ಸೇರಿ

ಒಪ್ಪಿಸಿನರಾಯ್ತು"

"ಇಲ್ಲ ಅತ್ತಿಗೆ ಭಾವ ಒಪ್ಪುವಂತೆ ಕಾಣಿಸುಲ್ಲ. ಸಿಕ್ಕಾಬಟ್ಟೆ ಕೋಪ ಬಂದಿದೆ ಅವರಿಗೆ. ಅತ್ತಿಗೆ ಸುಗುಣ ಸುಮ್ಮನೇ ಅಳ್ತಾರೆ. ನನಗಂತೂ ಇವಳಿಗೆ ತಿಳುವಳಿಕೆ ಹೇಳೀ ಹೇಳಿ ಸಾಕಾಗಿದೆ"

"ಯಾಕೇ ಮಾಧವಿ. ಅತ್ತೆ ಹೇಳಿದ ಹಾಗೆ ಕೇಳ್ಬಾರ್ದಾ?"

"ಅತ್ತೆ ಅವರ ಕಡೆಗೇ. ಅಬಾರ್ಷನ್ ಮಾಡಿಸ್ಕೋ. ಅವನನ್ನು ಮರೆತು ಬಿಡು ಅಂತ ಹೇಳ್ತಾರೆ. ನಾನು ಅವನನ್ನು ಮರೆಯೋಕೆ ಆಗೋದಿಲ್ಲ. ಹೀಗೇ ಬಲವಂತ ಮಾಡ್ತೀದ್ದರೆ ನಾನು ಈ ಮನೆಯನ್ನು ಬಿಟ್ಟು ಹೋಗ್ತೀನಿ"

"ಹೂಂ ಕೇಳಿದ್ರಾ ಅತ್ತಿಗೇ... ಮದುವೆಗೆ ಅವರುಗಳು ಒಪ್ಪದಿದ್ದರೆ, ಮನೋಜನೊಂದಿಗೆ ಓಡಿ ಹೋಗ್ತೀನಿ ಅಂತ ಹೇಳ್ತಾಳೆ. ನಾನು ಯಾರಿಗೆ ತಿಳುವಳಿಕೆ ಹೇಳಲಿ! ಈಗ ನೀವು ಬಂದಿದೀರಲ್ಲ ನೀವಾದ್ರೂ ತಿಳುವಳಿಕೆ ಹೇಳಿ" ಕಣ್ಣೀನಲ್ಲೇ ಬೇಡಿಕೊಂಡಳು.

"ಮಾಧವೀ ದೊಡ್ಡೋರು ಹೇಳಿದ ಹಾಗೆ ಕೇಳ್ಬೇಕಮ್ಮಾ, ಇವರೆಲ್ಲರೂ ಹೇಳೋದು ನಿನ್ನ ಒಳ್ಳೇದಕ್ಕೇ ತಾನೇ ನೀನಿನ್ನು ಚಿಕ್ಕವಳು"

"ನಾನು ಮೆಜಾರಿಟಿಗೆ ಬಂದಿದೀನಿ ದೊಡ್ಡಮ್ಮಾ. ನಾನು ಪ್ರೀತಿಸಿದವನನ್ನು ಮದುವೆಯಾಗುವ ಅಧಿಕಾರ ನನಗಿದೆ. ಯಾರೂ ತಪ್ಪಿಸಲು ಸಾಧ್ಯವಿಲ್ಲ. ಆದರೆ ಅಮ್ಮ ಅಪ್ಪನ ಒಪ್ಪಿಗೆಯೂ ಬೇಕು. ಹಾಗಂತ ಮನೋಜನೂ ಹೇಳಿದಾನೆ"

"ಅದೆಲ್ಲ ಸರಿ ಮಾಧವಿ. ಆದರೆ ಈ ಅವಾಂತರ ಯಾಕೆ ಮಾಡ್ಕೊಂಡೆ? ಅಂಥಾದ್ದೇನು ನಡೀತು? ನೀನು ಅದ್ಹೇಗೆ ಮೋಸ ಹೋದೆ! ಅವನೇದ್ರೂ ಹೆದರಿಸಿದ್ನಾ?"

"ಇಲ್ಲ ದೊಡ್ಡಮ್ಮಾ ಅವನು ಅಂಥವನಲ್ಲ. ಕೆಟ್ಟೋನಲ್ಲ..."

"ಮತ್ಯಾಕೆ ಹೀಗಾಯ್ತು! ಸಂಯಮದಿಂದ ಇರಬಹುದಾಗಿತ್ತಲ್ಲ"

"ಏನೋ ಗೊತ್ತಾಗ್ಲಿಲ್ಲ ದೊಡ್ಡಮ್ಮಾ. ಅಜ್ಜಿ ಸತ್ತು ಹೋದಾಗ, ನಂಗೆ ದುಃಖಾನೇ ತಡೆಯೋಕೆ ಆಗ್ತಿರ್ಲಿಲ್ಲ. ಅತ್ತು ಅತ್ತು ಅಳ್ತಿದ್ದೆ. ಆಗ ಅವನೇ ಸಮಾಧಾನ ಮಾಡ್ತಿದ್ದಿದು. ಆಗಲೇ ನಾವು ಹತ್ತಿರವಾದದ್ದು" ನಾಚಿಕೆಯಿಂದ ತಲೆ ತಗ್ಗಿಸಿದಳು.

"ಎಷ್ಟು ವರ್ಷದಿಂದ ನಿಮ್ಮಿಬ್ಬರ ಸ್ನೇಹ?"

"ಎರಡು ವರ್ಷಗಳಿಂದ ನಾವಿಬ್ಬರೂ ಸ್ನೇಹಿತರಾಗಿದೀವಿ, ಆದರೆ ನಾವು ಎಂದೂ ಹೀಗೆ ಆಗಬಹುದು ಅಂತ ಅಂದ್ಕೊಂಡಿರ್ಲಿಲ್ಲ, ನಾವಿಬ್ಬರೂ ತಪ್ಪು ಮಾಡಿದೀವಿ ಅಂತ ನಮಗೆ ಗೊತ್ತು. ಅದಕ್ಕೇ ಬೇಗ ಮದುವೆ ಮಾಡ್ಕೋಬೇಕು

ಅಂತ ನಿರ್ಧರಿಸಿದೀವಿ"

"ಮದುವೆ ಅಂದ್ರೆ ಹಾಗೆ ದಿಡೀರನೇ ಮಡ್ಕೊಳ್ಳೋಕೆ ಆಗುತ್ತಾ ಮಾಧವಿ? ಮುಹೋರ್ತಕ್ಕೆ ದಿನಾಂಕವನ್ನು ನೋಡ್ಬೇಕು. ಛತ್ರ ಸಿಗ್ಬೇಕು. ಎಲ್ಲಾ ಸಿದ್ಧತೆಗಳೂ ಆಗ್ಬೇಕು. ಎಲ್ಲಕ್ಕಿಂತ ಮೊದಲು ನಿನ್ನ ಸ್ನೇಹಿತನ ಮನೆಯವರನ್ನು ನೋಡ್ಬೇಡ್ವೇ? ಮಾತಾಡ್ಬೇಡ್ವೇ? ಅವನ್ಯಾರು ಅಂತ ನಿನ್ನೊಬ್ಬಳ ಹೊರತು ಇನ್ಯಾರ್ಗೂ ಗೊತ್ತೇ ಇಲ್ವಲ್ಲ."

"ಅಪ್ಪ ಒಪ್ಪಿದರೆ ಅವನನ್ನು ಮನೆಗೆ ಕರ್ಕೊಂಡು ಬರ್ತೀವಿ"

"ಹೀಗೆಲ್ಲಾ ಮಾತಾಡಿದ್ರೆ. ನಿನ್ನ ಅಪ್ಪನ ಕೋಪ ಕಡಿಮೆ ಆಗುತ್ತಾ? ಅವನಿಗೆ ಹಿತವಾಗುವಂತೆ ಮಾತಾಡ್ಬೇಕು"

"ನಯವಾಗಿ ಮತಾಡಿದ್ರೆ ಒಪ್ತಾರೆ ಅನ್ನೋ ನಂಬಿಕೆ ನನಗಿಲ್ಲ. ಹೋಗ್ಲಿ ಅಂದ್ರೆ, ನನ್ನ ಪರವಾಗಿ ಮಾತಾಡುಕ್ಕೆ ಯಾರಿದಾರೆ ಹೇಳಿ? ಎಲ್ರೂ ನಂಗೆ ತಿಳುವಳಿಕೆ ಹೇಳೋದೆ, ಈಗ ನನಗೆ ನಿಮ್ಮ ಮೇಲೂ ಅನುಮಾನ ಬರ್ತಿದೆ. ಅಪ್ಪನೋ, ಅಮ್ಮನೋ ನಿಮ್ಮನ್ನು ಇಲ್ಲಿಗೆ ಕಳಿಸಿರಬಹುದು ಅಲ್ವಾ? ಅಬಾರ್ಷನ್‌ಗೆ ನನ್ನನ್ನ ಒಪ್ಪಿಸಿ ಅಂತ..."

ಭವಾನಿ ಅಚ್ಚರಿಗೊಂಡಳು. ಈ ಹುಡುಗಿ ನಾವುಗಳು ಅಂದುಕೊಂಡರೆ ಮುಗ್ಧೆಯಲ್ಲ, ತಿಳುವಳಿಕೆ ಇಲ್ಲದವಳಲ್ಲ. ಅಚಲವಾದ ನಿರ್ಧಾರವನ್ನು ತೆಗೆದುಕೊಂಡಿದಾಳೆ. ಏನೇ ಮಾತಾಡಿದ್ರೂ ಎಚ್ಚರಿಕೆಯಿಂದ ಮಾತಾಡ್ತಾಳೆ... ಒಳಗೊಳಗೇ ಮಾಧವಿಯನ್ನು ಮೆಚ್ಚಿಕೊಂಡಳು. ಗಂಡ ನನ್ನ ಚತುರತೆಯನ್ನು ಮೆಚ್ಚಿದ್ದ. ಇವಳು ನನ್ನನ್ನು ಮೀರಿಸಿದ್ದಾಳೆ ಅಂತಂದುಕೊಂಡಳು. ಒಳಗೊಳಗೇ ಒಂದು ರೀತಿಯಲ್ಲಿ ಖುಷಿಯಾಗಿತ್ತು.

"ಇಲ್ಲ ಮಾಧವಿ, ನಾನು ಇಲ್ಲಿಗೆ ಬರುವ ವಿಷಯ ನಿನ್ನಪ್ಪನಿಗಾಗಲಿ, ನಿನ್ನಮ್ಮನಿಗಾಗಲೀ ಗೊತ್ತಿಲ್ಲ. ಇಲ್ಲಿಗೆ ನನ್ನನ್ನು ಕಳಿಸಿದವರು ನಿನ್ನ ದೊಡ್ಡಪ್ಪ. ಅವರಿಗೆ ನಿನ್ನ ಮೇಲೆ ಅಕ್ಕರೆ. ನಮಗೆ ಹೆಣ್ಣು ಮಕ್ಕಳಿಲ್ಲವಲ್ಲ. ನಿನ್ನನ್ನ ಸ್ವಂತ ಮಗಳೆಂದೇ ಭಾವಿಸಿದೀನಿ. ಆಶ್ರಮಕ್ಕೆ ಹೋದದಿನ ನೀನು ನಮ್ಮ ಜತೆ ಬರಲಿಲ್ಲವಲ್ಲ ಅಂತ ನಮಗೆಲ್ಲಾ ತುಂಬಾ ಬೇಸರವಾಗಿತ್ತು. ಆಸ್ಪತ್ರೆಗೇ ಬರಬೇಕು ಅಂತಂದುಕೊಂಡಿದ್ದೆ. ಹೋಗಲಿ ನಿನ್ನ ಆರೋಗ್ಯ ಹೇಗಿದೆ? ಊಟ ತಿಂಡಿ ಸರಿಯಾಗಿ ಸೇರುತ್ತಾ! ಔಷಧಿ ಏನಾದ್ರೂ ತಗೋಳ್ತಿದೀಯಾ!?"

"ನಾನೀಗ ಹುಶಾರಾಗಿದೀನಿ ದೊಡ್ಡಮ್ಮ. ಆದರೆ ನನಗೆ ಇಲ್ಲಿರುಕ್ಕೆ ಬೇಜಾರು... ಆದರೆ ಏನು ಮಾಡ್ಲೀ? ಮನೋಜನ ಮನೆಯವರು ಬಂದು ಕರ್ಕೊಂಡು ಹೋಗುವವರೆಗೂ, ನಾನು ಇಲ್ಲಿ ಇರಬೇಕಾಗಿದೆ!"

"ಅವರು ಬಂದು ಸುಮ್ಸುಮ್ನೆ ನಿನ್ನನ್ನು ಕರ್ಕೊಂಡು ಹೋಗುಕ್ಕೆ ಆಗುತ್ತಾ?

ಒಂದು ರೀತಿ ನೀತಿ ನಿಯಮ ಬೇಡ್ವಾ? ನಾನು ನಿನ್ನ ದೊಡ್ಡಪ್ಪನ ಹತ್ರ ಮಾತಾಡ್ತೀನಿ. ನಿನ್ನ ಗಂಡನಾಗುವವನು ಮೊದಲು ನಾವುಗಳು ನೋಡಬೇಡ್ವಾ! ಅವರ ಮನೆಯವರನ್ನು ಭೇಟಿಯಾಗಬೇಡ್ವಾ? ಈಗ ಅವನಿಗೆ ಫೋನು ಮಾಡು, ಇಲ್ಲಿಗೆ ಬರಲಿ... ನಾನು ನೋಡ್ಬೇಕು"

"ಇಲ್ಲ ದೊಡ್ಡಮ್ಮ, ಅವನಿಗೆ ಇಲ್ಲಿಗೆ ಬರುಕ್ಕೆ ಸಂಕೋಚ. ಅಲ್ಲದೇ ಅವನಿಗೆ ಅಪ್ಪನ ಹೆದರಿಕೆ, ಎಲ್ಲಾ ಸಿದ್ಧತೆ ಮಾಡ್ಕೊಂಡು ಕರ್ಕೊಂಡು ಹೋಗ್ತಾನೆ... ಪೋನು ಮಾಡಿ ನಾನು ಅವನಿಗೆ ಜ್ಞಾಪಿಸ್ತಾನೆ ಇರ್ತೀನಿ."

"ಸಂಕೋಚ, ಹೆದರಿಕೆ ಇದ್ದರೆ, ಮದುವೆ ಹೇಗೆ ಆಗ್ತಾನೆ? ಅವನು ನಿಂಗೆ ಮೋಸ ಮಾಡಲ್ಲ ಅಂತ ಏನು ಗ್ಯಾರಂಟಿ!"

"ನನಗೆ ಅವನ ಮೇಲೆ ನಂಬಿಕೆ ಇದೆ. ಅವನು ನಂಗೆ ಮೋಸ ಮಾಡಲ್ಲ..."

"ಎಷ್ಟು ದಿನಾಂತ ಹಾಗೆ ಕಾಯಕ್ಕೆ ಆಗುತ್ತೆ ಮಾಧವಿ! ನೀನ್ಯಾಕೆ ಇಲ್ಲಿದೀಯ ಅಂತ ಎಲ್ರೂ ಅನುಮಾನದಿಂದ ಕೇಳುಕ್ಕೆ ಪ್ರಾರಂಭ ಮಾಡ್ತಾರೆ. ನಿನ್ನ ಮೇಲೆ ಅಪವಾದ ಬರುತ್ತೆ, ಕ್ರಮೇಣ ಅವನೂ ಸುಮ್ಮನಾಗಿ ಬಿಟ್ಟರೇ?"

"ಅವನು ಅಂಥೋನಲ್ಲ, ಒಳ್ಳೆಯವನು"

"ಆದರೆ ಧೈರ್ಯವೇ ಇಲ್ಲವಲ್ಲ. ಅವನ್ಯಾಕೆ ಶ್ರೀನಾಥನ ಹತ್ರ ಮಾತಾಡ್ಬಾರ್ದು?"

"ನಾನೇ ಬೇಡ ಅಂತಂದೆ. ನನ್ನ ಮೇಲಿನ ಸಿಟ್ಟಿಗೆ ಅಪ್ಪ ಅವನನ್ನು ಹೊಡೆಸಿ ಹಾಕಿಬಿಟ್ಟರೇ! ಆಮೇಲೆ ನಾನು ಹೇಗಿರಲಿ?"

"ಆದರೂ ಈ ನಿಧಾನ ಸರಿಯಲ್ಲ. ನಾನು ಅವನ ಹತ್ರ ಮಾತನಾಡಿ ಬುದ್ಧಿ ಹೇಳ್ತೀನಿ. ನಂಗೆ ಅವನ ಫೋನು ನಂಬರನ್ನು ಕೊಡು"

"ನೀವು ಅವನನ್ನು ಬೈಯಬಾರದು..." ಭವಾನಿ ಸಣ್ಣಗೆ ನಕ್ಕಳು.

"ನಿನ್ನನ್ನೇ ಬೈಯಲಿಲ್ಲವಂತೆ; ಅವನನ್ಯಾಕೆ ಬೈಯಲಿ! ಈಗ ಇಬ್ಬರೂ ತಪ್ಪು ಮಾಡ್ತಿದೀರಿ. ಆದರೆ ಅವನನ್ನು ಯಾರೂ ಏನೂ ಅನ್ನುಲ್ಲ. ನಿನ್ನನ್ನೇ ಎಲ್ರೂ ಅನ್ನೋದು. ಮೊದಲೇ ಎಂದಾದ್ರೂ, ನೀನು ಅವನನ್ನು ಪ್ರೀತಿಸ್ತಿದೀನಿ ಅಂತ ಮನೆಯಲ್ಲಿ ಯಾರಿಗಾದ್ರೂ ಹೇಳ್ಬೇಕಾಗಿತ್ತು..."

"ಹಾಗಾದ್ರೇ ಪ್ರೀತಿಸುವುದು ತಪ್ಪಾ ದೊಡ್ಡಮ್ಮಾ?"

"ನಮ್ಮ ಕಾಲದಲ್ಲಿ ಬಹಳ ದೊಡ್ಡ ತಪ್ಪು ಅಂತ ಅನಿಸ್ತಿತ್ತು. ಈಗ ಕಾಲ ಬದಲಾಗಿದೆ, ಆದರೂ, ನೀನು ದುಡುಕಿ ಬಿಟ್ಟೆ ಮಾಧವಿ ತಪ್ಪು ಮಾಡಿಬಿಟ್ಟೆ"

"ಹಾಗಾದ್ರೆ ನೀವೂ ನನ್ನ ವಿರುದ್ಧವಾಗಿದೀರಿ. ನನಗೆ ಸಹಾಯ ಮಾಡಲ್ಲ ನೀವು" ಅವಳ ಧ್ವನಿಯಲ್ಲಿ ಅಸಹಾಯಕತೆ ಇತ್ತು.

"ಇಲ್ಲ ನಾನು ನಿನ್ನ ಕಡೆಗೆ ಇದೀನಿ. ನನ್ನಿಂದ ಏನು ಸಹಾಯಬೇಕು

ಹೇಳು"

"ಹಾಗಾದ್ರೆ ನನ್ನನ್ನೂ ಇಲ್ಲಿಂದ ಕರ್ಕೊಂಡು ಹೋಗಿ. ಮನೋಜನ ಮನೆಯಲ್ಲಿ ಬಿಟ್ಟು ಬನ್ನಿ. ಇನ್ಮುಂದೆ ನಾನು ಅಲ್ಲಿರ್ತೀನಿ"

"ಹಾಗೆಲ್ಲಾ ತಕ್ಷಣಕ್ಕೆ ಮಾಡುಕ್ಕಾಗಲ್ಲ. ಅವರುಗಳು ಏನಂದ್ಕೊಳ್ತಾರೆ! ನೀನು ದಿಕ್ಕಿಲ್ಲದವಳು ಅಂತ ಅಂದ್ಕೊಳಲ್ವಾ? ನಾನು ನಿನ್ನ ದೊಡ್ಡಪ್ಪನ ಹತ್ರ ಮಾತಾಡ್ತೀನಿ. ಹಾಗೇ ಮನೋಜನ ಹತ್ರ ಮಾತನಾಡಿ, ಅವನನ್ನು ಭೇಟಿಯಾಗ್ತೀವಿ. ಅವನ ಮನಸ್ನಲ್ಲಿ ಏನಿದೆ ಅಂತ ಮೊದಲು ನಮಗೆ ತಿಳಿಯಬೇಕು. ನಮಗೆ ಎರಡು ದಿನ ಸಮಯಬೇಕು. ನನಗೆ ಅವನ ನಂಬರನ್ನು ಕೊಡು" ಮಾಧವಿ ಅನುಮಾನದಿಂದ ಅವನ ನಂಬರನ್ನು ಕೊಟ್ಟಳು.

"ನಾನು ನಿಮ್ಮನ್ನೇ ನಂಬಿದೀನಿ ದೊಡ್ಡಮ್ಮ. ಅವನಿಲ್ಲದೇ ನಾನು ಬದುಕಿರಲಾರೆ. ನಿಮಗೆ ಹೆದರಿ, ಅವನೇನಾದ್ರೂ ಹಿಂದೆ ಸರಿದರೆ, ನಾನು ಆತ್ಮಹತ್ಯೆ ಮಾಡ್ಕೊಳ್ತೀನಿ. ನನ್ನ ಸಾವಿಗೆ ಮನೆಯವರೆಲ್ಲಾ ಕಾರಣರಾಗುತ್ತಾರೆ..." ಎಚ್ಚರಿಕೆಯನ್ನು ಹೇಳಿದಳು.

"ಹೀಗೆ ಮಾತನಾಡೋದ್ರಿಂದ ಏನೂ ಪ್ರಯೋಜನವಿಲ್ಲ. ಹಾಗಾದ್ರೆ ನಿನ್ನ ಪ್ರೀತಿಗೆ ಏನು ಬೆಲೆ ಇದೆ? ನಾನು ನಿನಗೆ ಒಳ್ಳೆಯದಾಗಲಿ ಅಂತಲೇ ಇಲ್ಲಿಗೆ ಬಂದಿದ್ದು. ನೀನು ಹೆಚ್ಚು ಯೋಚಿಸ್ಬೇಡ. ನಿನ್ನ ಆರೋಗ್ಯಕ್ಕೆ ಒಳ್ಳೆಯದಲ್ಲ. ನಿನಗೆ ಏನು ತಿನ್ನಬೇಕು ಅಂತ ಆಸೆಯಾಗುತ್ತೆ ಹೇಳು. ಮಾಡ್ಕೊಂಡು ತಂದುಕೊಡ್ತೀನಿ. ಬೇಸರಮಾಡ್ಕೊಂಡು ಉಪವಾಸ ಇರ್ಬೇಡ..." ಮಾಧವಿಯ ಕೆನ್ನೆಯನ್ನು ಸವರಿದಳು.

"ಥ್ಯಾಂಕ್ಸ್ ದೊಡ್ಡಮ್ಮ. ಇಷ್ಟು ಹಿತವಾಗಿ ಯಾರೂ ಮಾತಾಡಿರ್ಲಿಲ್ಲ. ಎಲ್ಲರೂ ಅಪ್ಪ ಅಮ್ಮನಿಗೆ ಹೆದರಿ ತಿಳುವಳಿಕೆ ಹೇಳೋರೇ... ನನಗೀಗ ಎಷ್ಟೋ ಸಮಾಧಾನವಾಯ್ತು" ಅವಳ ಮುಖದಲ್ಲಿ ಮಂದಹಾಸ ಮಿನುಗಿತ್ತು.

"ನಿನಗೆ ಏನು ಬೇಕಾದ್ರೂ ನಂಗೆ ಫೋನು ಮಾಡು... ನಾನು ಯಾರಿಗೂ ಹೇಳಲ್ಲ" ಎಂದು ಹೇಳಿ ಮಾಧವಿಯನ್ನು ತಬ್ಬಿಕೊಂಡು ಅವಳ ಕೆನ್ನೆಗೆ ಮುತ್ತನಿತ್ತಳು. ನಾನು ಬರ್ತೀನಿ ಮಾಧವಿ. ನಾನು ನಿನ್ನ ದೊಡ್ಡಪ್ಪ, ನಿನ್ನ ಕಡೆಗೆ ಇದೀವಿ, ಧೈರ್ಯವಾಗಿರು. ಎಂದು ಮತ್ತೊಮ್ಮೆ ಹೇಳಿ, ಅಲ್ಲಿಂದ ಹೊರಡಲು ಎದ್ದಳು. ರಾಧಾ ಕಾಫಿಯನ್ನು ತಿಂಡಿಯನ್ನು ತಂದಿತ್ತಳು.

ಗೇಟಿನ ತನಕ ಬೀಳ್ಕೊಡಲು ಬಂದಿದ್ದ ರಾಧಳಿಗೆ ಹೇಳಿದಳು. "ನಾನು ಇಲ್ಲಿಗೆ ಬಂದಿದ್ದ ವಿಚಾರವನ್ನು ನಮ್ಮ ಮನೆಯವರ್‍ಯಾರಿಗೂ ಈಗ್ಲೇ ಹೇಳ್ಬೇಡಿ" ರಾಧಾ ತಲೆಯಾಡಿಸಿದಳು ಮರೆಯಲ್ಲಿ ನಿಂತು ಭವಾನಿ ಆಡಿದ್ದ ಮಾತುಗಳನ್ನು ಕೇಳಿಸಿಕೊಂಡಿದ್ದಳು. ತನ್ನ ಗಂಡನ ಅಕ್ಕನ ಮಗಳೆಂದು, ಮಾಧವಿಯನ್ನು

ಸಹಿಸಿಕೊಂಡಿದ್ದಳು. ಇವರ ಮನೆಯ ಹುಡುಗಿ, ಇವರುಗಳೇ ಏನನ್ನು ಬೇಕಾದರೂ ನಿರ್ಧರಿಸಿಕೊಳ್ಳಲಿ. ಎಷ್ಟು ದಿನಗಳು ಅಂತ ಅವಳು ಇಲ್ಲಿ ಇರುಕ್ಕೆ ಆಗುತ್ತೆ. ಅಂದುಕೊಂಡು ನಿರಾಳವಾಗಿ ಉಸಿರನ್ನು ಬಿಟ್ಟಿದ್ದಳು.

"ನಮ್ಮ ಹುಡುಗೀನ ಚೆನ್ನಾಗಿ ನೋಡ್ಕೋಳಪ್ಪಾ ತಾಯಿಯಾಗಲಿದ್ದಾಳೆ. ಸಧ್ಯದಲ್ಲೇ ಮದುಮಗಳು ಕೂಡಾ ಆಗಲಿದ್ದಾಳೆ" ಹಾಸ್ಯ ಬೆರೆತ ಧ್ವನಿಯಲ್ಲಿ ನುಡಿದಳು. "ಇಂಥಾ ಸಮಯದಲ್ಲಿ ತಾಯಿ ಆರೈಕೆ ಮಾಡಬೇಕು. ಅವಳು ಮುನಿಸಿಕೊಂಡು ಕೂತಿದಾಳೆ. ಈ ಹುಡುಗಿ ಹಠ ಹಿಡಿದು ಕೂತಿದೆ. ಯಾರು ಗೆಲ್ತಾರೋ?" ರಾಧಾಳ ಕಡೆ ಓರೆನೋಟವನ್ನು ಬೀರಿದಳು.

"ಈ ಮದುವೆ ಸೂಸೂತ್ರವಾಗಿ ನೆರವೇರುತ್ತೆ ಅಂತೀರಾ?" ಸಂದೇಹವನ್ನು ತೋರಿದಳು.

"ನೆರವೇರಲೇಬೇಕು ಇಲ್ಲದಿದ್ರೆ ಸಮಸ್ಯೆಗಳು ಮುಗಿಯೋದೇ ಇಲ್ಲ. ಮನೆತನದ ಮರ್ಯಾದೆಯ ಚಿಂತೆ ಅವರಿಗೆ. ಪ್ರೀತಿಯ ಆವೇಗ ಇವಳಿಗೆ. ಯಾರೂ ಸೋಲುಕ್ಕೆ ಸಿದ್ಧರಾಗಿಲ್ಲ. ಅದಕ್ಕೇ ನಾನು ಮಾಧವಿಯ ಪರವಾಗಿದೀನಿ"

"ನಿಮ್ಮ ಮಐದುನನ ಕೋಪ ಕಡಿಮೆ ಆಗುತ್ತೆ ಅಂತ ಅನ್ಸುತ್ತಾ?"

"ಕಡಿಮೆ ಆಗಲೇಬೇಕು. ತಂದೆ ತಾಯಿ ಮಕ್ಕಳ ಮೇಲೆ ಎಷ್ಟು ದಿನಗಳತನಕ ಕೋಪ ಮಾಡಿಕೊಂಡಿರುಕ್ಕೆ ಸಾಧ್ಯ? ಇದು ಮಾಧವಿಯ ಭವಿಷ್ಯದ ಪ್ರಶ್ನೆ. ನಾನು ಸರಿ ಮಾಡಲು ಪ್ರಯತ್ನಿಸ್ತೀನಿ ನೋಡೋಣ"

"ಹಾಗಾದ್ರೆ, ಮಾಧವೀನ ಯಾವಾಗ ಕರ್ಕೊಂಡು ಹೋಗ್ತೀರಿ?" ಅನುಮಾನಿಸುತ್ತಾ ಪಿಸುದನಿಯಲ್ಲಿ ಕೇಳಿದಳು ಭವಾನಿ ಅಚ್ಚರಿಯಿಂದ ಕಣ್ಣರಳಿಸಿದಳು.

"ಹೀಗೆ ಕೇಳ್ತಿದೀರಲ್ಲಾ ರಾಧಾ...? ಸುಗುಣ ಏನಂದ್ಕೊಳ್ತಾಳೆ? ಇವಳಿರೋದ್ರಿಂದ ನಿಮಗೆ ತೊಂದ್ರೆ ಆಗ್ತಿದೆಯಾ?"

"ನಿಮಗೇ ಗೊತ್ತು. ಮನೆಯವರೆಲ್ಲಾ ಮುದ್ದು ಮಾಡಿ ಬೆಳೆಸಿ ಬಿಟ್ಟಿದ್ದಾರೆ... ಹೇಳಿದ ಮಾತನ್ನೇ ಕೇಳಲ್ಲ. ಮನೋಜನೊಡನೆ ಫೋನಿನಲ್ಲಿ ಮಾತಾಡ್ಕೊಂಡು ಕಾಲ ಕಳೀತಾಳೆ. ಅಲ್ಲದೇ ಅವನು ನಾಲ್ಕೈದು ಬಾರಿ ಬಂದಿದ್ದ. ಅಕ್ಕಪಕ್ಕದವರು ಕುತೂಹಲದಿಂದ ನೋಡ್ತಾರೆ. ಗುಸು ಗುಸು ಅಂತ ಅವರವರಲ್ಲೇ ಮಾತಾಡಿಕೊಳ್ತಿದಾರೆ. ಹೇಳಿದ್ರೆ ಈ ಹುಡುಗಿಗೆ ಅರ್ಥವಾಗಲ್ಲ ಸಿಟ್ಟು ಮಾಡ್ಕೊಳ್ಳುಕ್ಕೆ"

"ಸುಗುಣಂಗೆ ಹೇಳಿದ್ಯಾ? ಅವಳೇನಂದ್ಲು?"

"ಅವರು ತುಂಬಾನೇ ಬೇಸರದಲ್ಲಿದಾರೆ. ಇವಳ ಮೇಲೆ ಚಾಡಿ ಹೇಳಿದಂತಾಗುತ್ತೆ. ಹೇಗೂ ಈಗ ನೀವು ಮಾಧವಿಯ ಹತ್ತಿರ ಇಷ್ಟೊಂದು

ಮಾತಾಡಿದೀರಿ. ಮನೇಲಿ ಅವರುಗಳ ಹತ್ತಿರ ಮಾತಾಡಿ ಅವರುಗಳನ್ನು ಒಪ್ಪಿಸಿ. ಎಲ್ಲರಿಗೂ ನಿರಾತಂಕ" ಭವಾನಿ ರಾಧಾಳ ಮನದ ಇಂಗಿತವನ್ನು ಅರಿತಳು. ಇಷ್ಟೇ ಇವರುಗಳ ಬಾಂಧವ್ಯ. ನಾನು ಹೊರಗಿನವಳು! ಇವಳು ಮನೆಯವಳು. ಆದರೆ ಈಗ ಗೊತ್ತಾಗ್ತಿದೆ" ಎಂದುಕೊಂಡಳು.

"ಆಗ್ಲಿ, ಸುಗುಣಳ ಮೂಡ್ ನೋಡ್ಕೊಂಡು ಮಾತ್ನಾಡಿ. ಒಪ್ಪಿಸುಕ್ಕೆ ಪ್ರಯತ್ನ ಪಡ್ತೀನಿ, ಒಂದು ವೇಳೆ ಒಪ್ಪದಿದ್ರೆ. ನಾನೇ ಬಂದು ನಮ್ಮ ಮನೆಗೆ ಕರ್ಕೊಂಡು ಹೋಗ್ತೀನಿ. ನೀವು ಯೋಚಿಸಬೇಡಿ" ಎಂದು ಧೈರ್ಯವನ್ನು ಹೇಳಿದಳು. ತಾನು ಈಗ ಒಂದು ಹೆಜ್ಜೆಯನ್ನು ಮುಂದಿಟ್ಟಿದ್ದಾಗಿದೆ. ಹಿಂದೆ ಸರಿಯಬಾರದು ಎಂದುಕೊಂಡು ಗೇಟನ್ನು ದಾಟಿದಳು.

* * * *

"ಮಾಧವಿ ಶ್ರೀನಾಥನ ಮಗಳೇ ಸರಿ ಕಣ್ರೀ. ಅವನಿಗಿಂತ ಹಠವಾದಿ" ಭವಾನಿ ರಮಾಕಾಂತನೊಡನೆ ಮಾತಿಗೆ ಆರಂಭಿಸಿದಳು. ಅವಳು ಅಬಾರ್ಷನ್‌ಗೆ ಒಪ್ಪಲಿಲ್ಲ, ಆ ಹುಡುಗನ ಜತೇಲಿ ಓಡಿ ಹೋಗೋಕೆ ರೆಡಿಯಾಗಿದಾಳೆ."

"ಸರಿಯಾಗಿ ತಿಳುವಳಿಕೆ ಹೇಳ್ಬೇಕಾಗಿತ್ತು ನೀನು"

"ನಾನು ಸರಿಯಗೇ ಅರ್ಥವಾಗುವಂತೆ ಹೇಳ್ದೆ. ಆದರೆ ಅವಳ ಪಟ್ಟು ಅವಳು ಬಿಡೋಕೆ ರೆಡಿಯಿಲ್ಲ. ಮದುವೆಗೆ ಒಪ್ಪೋದು ಒಂದೇ ಉಳಿದಿರೋ ದಾರಿ. ನಾನು ಆ ಹುಡುಗನ ಪೋನು ನಂಬರ್ರು ತಂದಿದೀನಿ. ನೀವು ಮಾತಾಡ್ತೀರೋ? ನಾನೇ ಮಾತಾಡ಼್್ಲೋ?"

"ನೀನೇ ಮಾತಾಡು. ನಂಗೂ ಸ್ವಲ್ಪ ಸಹನೆ ಕಡಿಮೆ. ಸರಿಯಾದವಳು ನೀನೇ" ಎಂದು ಉಬ್ಬಿಸಿದ. ಅವಳು ಕತ್ತನ್ನಾಡಿಸಿದಳು. ತಕ್ಷಣವೇ ಮನೋಜನ ಮೊಬೈಲ್ ನಂಬರನ್ನು ಒತ್ತಿದಳು. ಅತ್ತಲಿಂದ ಅವನೇ ಎತ್ತಿದ 'ಹಲೋ' ಎಂದ.

"ಮನೋಜ್, ನಾನು ಮಾಧವಿಯ ದೊಡ್ಡಮ್ಮ. ನಾನು ನಿನ್ನ ಹತ್ರ ಅರ್ಜೆಂಟಾಗಿ ಮಾತನ್ನಾಡ್ಬೇಕು ಎಲ್ಲಿ ಸಿಗ್ತೀಯಾ!" ಕೇಳಿದಳು.

"ಏನು ವಿಷಯ ಆಂಟಿ! ಮಾಧವಿ ಹುಶಾರಾಗಿದಾಳೆ ತಾನೇ" ಆತಂಕದಿಂದ ಕೇಳಿದ್ದ

"ನೀನು ನಮ್ಮ ಮನೆಯ ಹತ್ತಿರ ಇರುವ ದೇವಸ್ಥಾನದ ಬಳಿಗೆ ಈಗಲೇ ಬಾ. ನಾನು ಕಾಯ್ತಿರ್ತೀನಿ" ಎಂದು ಅವನ ಪ್ರಶ್ನೆಗೆ ಉತ್ತರಿಸಿದ್ದಳು. ಅವನಿಗೆ ಈಗ್ಲೇ ಬಾ ಅಂತ ಹೇಳಿದೀನಿ ಏಳಿ. ದೇವಸ್ಥಾನದ ಬಳಿಗೆ ಹೋಗೋಣ" ಗಂಡನನ್ನು ಹೊರಡಲು ಹೇಳಿದಳು.

"ಅವನು ಬರದೇ ಇದ್ದರೆ..." ಅನುಮಾನವನ್ನು ವ್ಯಕ್ತಪಡಿಸಿದ.

"ಅವನು ಎಂಥವನು ಅಂತ ಮಾಧವಿಗೂ ಗೊತ್ತಾಗುತ್ತೆ. ಅವನ ಪ್ರೀತಿ ಸುಳ್ಳೋ ನಿಜವೋ ಅಂತ ತಿಳಿಯುತ್ತೆ..." ಅವನು ಮಾಧವಿಗೆ ಫೋನು ಮಾಡಿ, ವಿವರಗಳನ್ನು ತಿಳಿದುಕೊಳ್ತಾನೆ"

"ನಿಂಗೇನನ್ಸುತ್ತೆ!"

"ಬಂದೇ ಬರ್ತಾನೆ. ಮಾಧವಿಯ ಮಾತಿನಲ್ಲಿ ಭರವಸೆ ಇತ್ತು" ಎಂದು ಹೇಳಿದಳು. ಇಬ್ಬರೂ ದೇವಸ್ಥಾನದ ಬಳಿಗೆ ಬಂದು, ಅಲ್ಲಿದ್ದ ಕಲ್ಲು ಬೆಂಚಿನ ಮೇಲೆ ಕುಳಿತು, ಅವನಿಗಾಗಿ ಕಾಯತೊಡಗಿದರು. ಹತ್ತು ಹದಿನೈದು ನಿಮಿಷಗಳಲ್ಲಿ ಒಂದು ಬೈಕಿನಲ್ಲಿ ಇಬ್ಬರು ಹುಡುಗರು ಬಂದು ಇಳಿದರು. ಇವರಿಬ್ಬರೂ ಕುಳಿತ್ತಿದೆಡೆಗೆ ಬಂದರು. ಅವರಲ್ಲಿ ಒಬ್ಬ ಯುವಕ ಮಾತನಾಡಿದ.

"ಎಕ್ಸ್‌ಕ್ಯೂಸ್‌ಮೀ ನೀವೇ ತಾನೇ ಪೋನು ಮಾಡಿದ್ದವರು!" ಕೇಳಿದ.

"ಎಸ್ ನಾನೇ, ನೀನು" ಮರು ಪ್ರಶ್ನಿಸಿದಳು.

"ನಾನು ಮನೋಜ್. ಮಾಧವಿಯ ಫ್ರೆಂಡ್. ಇವನು ನನ್ನ ಕಸಿನ್ ವಿನೋದ್. ನೀವು ಮಾಧವಿಯ ದೊಡ್ಡಮ್ಮ... ದೊಡ್ಡಪ್ಪಾ?" ಉತ್ಸಾಹದಿಂದ ಕೇಳಿದ

"ಹೌದು ನಾವೇ ದೊಡ್ಡಮ್ಮ ದೊಡ್ಡಪ್ಪಾ. ಒಬ್ಬನಿಗೇ ಬರೋಕೆ ಹೆದರಿಕೆ ಆಯ್ತು! ಇನ್ನೊಬ್ಬನನ್ನು ಕರ್‍ಕೊಂಡು ಬಂದಿದೀಯ" ನಗುವನ್ನು ತುಳುಕಿಸಿದಳು.

"ಹಾಗೇನಿಲ್ಲ ಹೆದರಿಕೆ ಏಕೆ? ಬೈಕ್ ಇವನದ್ದು ಮಾಧವೀನ ಕೇಳಿಬಿಟ್ಟೇ ಬಂದಿದೀನಿ. ಮಾಧವೀನೇ ಈ ದೇವಸ್ಥಾನ ಅವಳ ಮನೆಯ ಹತ್ತಿರ ಇದೆ ಅಂತ ಹೇಳಿದ್ದು" ಭವಾನಿ ಗಂಡನ ಕಡೆ ನೋಡಿದಳು. ಅವಳು ಯಾವ ದೇವಸ್ಥಾನ ಅಂತ ಹೇಳದೇ ಇದ್ದುದು ನೆನಪಿಗೆ ಬಂತು.

"ನಂಗೊತ್ತಿತ್ತು ನೀನು ಅವಳಿಗೆ ಫೋನು ಮಾಡ್ತೀಯಾ ಅಂತ. ನಿಂಗೂ ಅವಳಿಗೂ ಎಷ್ಟು ವರ್ಷದಿಂದ ಸ್ನೇಹ? ಎಲ್ಲಿ, ಹೇಗೆ ಶುರುವಾಯ್ತು?"

"ಮಾಧವಿ ಹೇಳಲಿಲ್ವಾ ಆಂಟಿ?"

"ಅವಳು ಹೇಳಿದಾಳೆ, ನೀನು ಹೇಳು..." ರಮಾಕಾಂತ ಅಬ್ಬರಿಸಿದ.

"ಸಾರೀ, ನೀವು ನಮ್ಮಿಬ್ಬರ ಮದುವೆಗೆ ಒಪ್ಪಿಗೆ ಕೊಟ್ಟಿದೀರಿ ಅಂತ ಹೇಳಿದ್ಲು"

"ಮುಖ್ಯವಾಗಿ ಒಪ್ಪಿಗೆ ಕೊಡಬೇಕಾದವರು. ಅವಳ ಅಪ್ಪ ಅಮ್ಮ. ಮಾಧವಿ ಹೇಳಿದ್ದನ್ನೆಲ್ಲಾ ಹೇಗೆ ನಂಬೋದು. ನೀನು ಯಾರ ಮನೆಯವನು? ಏನು ಓದಿದೀಯ, ಏನು ಕೆಲಸದಲ್ಲಿದೀಯಾ...? ಅದನ್ನೆಲ್ಲಾ ನಿನ್ನ ಬಾಯಿಂದ ಕೇಳ್ಬೇಕು"

"ನಾನು ಮಾಧವಿ, ಒಬ್ಬರನ್ನೊಬ್ಬರು ತುಂಬಾ ಪ್ರೀತಿಸ್ತೀವಿ. ಇವನ ತಂಗಿ ಮಾಧವಿಯ ಸ್ನೇಹಿತೆ. ಅವಳಿಂದ ನಮ್ಮಿಬ್ಬರ ಪರಿಚಯ ಆಯಿತು. ನಾನು ಗ್ರಾಜುಯೇಟ್ ನಮ್ಮದು ಬಿಸಿನೆಸ್. ಈ ಊರಿನಲ್ಲಿ ನಾಲ್ಕು ಬಟ್ಟೆ ಅಂಗಡಿಗಳಿವೆ... ಮಧು ಟೆಕ್ಸ್‌ಟೈಲ್ಸ್ ಶೋರೂಂ ನಮ್ಮದೇ..."

ರಮಾಕಾಂತನ ಉತ್ಸಾಹ ಝುರ್ರನೆ ಇಳಿಯಿತು. ಬಟ್ಟೆ ಅಂಗಡಿಯ ಬಿಸಿನೆಸ್ ಮಾಡುವವರು ಅಂತಂದ್ರೆ ಬಹುಶಃ ನಮ್ಮ ಪಂಗಡದವರಲ್ಲ. ಆದರೆ ಅದನ್ನು ಕೇಳುವುದು ಹೇಗೆ? ಅನುಮಾನಿಸುತ್ತಾ ಗಡ್ಡವನ್ನು ಕೆರೆದುಕೊಂಡ. ಭವಾನಿಗೂ ಅವನು ತಮ್ಮ ಸ್ವಜಾತಿಯವನಲ್ಲ, ಅಂತ ತಿಳಿದು ತಳಮಳಗೊಂಡಿದ್ದಳು. ಆದರೆ, ಯಾವ ಜಾತಿ ಅಂತ ಕೇಳುವುದು ಚೆನ್ನಲ್ಲ, ಅವನಾಗಿಯೇ ಹೇಳಲಿ ಅಂತ ಕಾದ.

"ನಿಮ್ಮ ಮನೆಯವರಿಗೆ ಮಾಧವಿ ಒಪ್ಪಿಗೇನಾ? ಅವರು ನೋಡಿದಾರಾ! ಏನಂತಾರೆ?"

"ಅವರಿಗೆಲ್ಲ ಮಾಧವಿ ಒಪ್ಪಿಗೆಯಾಗಿದಾಳೆ. ಮದುವೆಗೆ ಯಾವ ಅಡ್ಡಿಯೂ ಇಲ್ಲ"

"ಆದರೆ...."

"ಹೌದು ನಿಮ್ಮ ಮನೆಯವರಿಗೆ ನಾನು ಒಪ್ಪಿಗೆಯಾಗುವುದಿಲ್ಲ. ಯಾಕೆಂದರೆ ನಾನು ನಿಮ್ಮ ಜಾತಿಗೆ ಸೇರಿದವನಲ್ಲ. ನಮ್ಮಿಬ್ಬರ ಜಾತಿ ಬೇರೆ ಬೇರೆ..." ಅವನು ಅವರ ಸಂದೇಹವನ್ನು ಗುರುತಿಸಿದ್ದ

"ಅದು ತಿಳಿದೂ ಇಷ್ಟು ಮುಂದುವರೆದು ಬಿಟ್ಟಿದೀರಲ್ಲಪ್ಪಾ?"

"ನಮ್ಮಿಬ್ಬರ ಪ್ರೀತಿಯ ನಡುವೆ, ಜಾತಿ ಮತ ಅಡ್ಡ ಬರಲಿಲ್ಲ. ಈಗಲೂ ಬರಲ್ಲ. ನಾನು ಅವಳು ಮದುವೆಯಾಗುವುದೆಂದು ನಿರ್ಧರಿಸಿದೀವಿ. ಅದನ್ನು ತಪ್ಪಿಸಲು ಯಾರಿಂದಲೂ ಸಾಧ್ಯವಿಲ್ಲ" ಆವೇಶದಿಂದ ಮಾತಾಡಿದ.

"ನಮ್ಮದು ಸಂಪ್ರದಾಯಸ್ಥ ಕುಟುಂಬ. ಇದುವರೆಗೂ ಅನ್ಯಜಾತಿಯಲ್ಲಿ ಕೊಟ್ಟೂ ತಂದೂ ಮಾಡಿಲ್ಲ. ಬಳಗದವರಲ್ಲಿ ಇದೇ ಒಂದು ದೊಡ್ಡ ಚರ್ಚೆ ಆಗುತ್ತೆ. ಮಾಧವಿ ಚಿಕ್ಕವಳು ತಿಳುವಳಿಕೆ ಕಡಿಮೆ. ನೀನು ಇಷ್ಟು ತಿಳಿವಳಿಕಸ್ಥನಂತೆ ಮಾತಾಡ್ತೀಯ. ನೀವು ಮಾಧವಿಯಿಂದ ದೂರ ಇದ್ದಿದ್ದರೆ ಚೆನ್ನಾಗಿರ್ತಿತ್ತು. ನಿಮ್ಮ ತಾಯಿಗೂ ನಿಮ್ಮ ಪಂಗಡದವರೇ ಸೊಸೆಯಾಗಿ ಬರಲಿ ಅನ್ನೋ ಅಪೇಕ್ಷೆ ಇರುತ್ತೆ.... ಈಗ ಅವರಿಗೆ ತಾವು ಅಜ್ಜಿಯಾಗಿದೀನಿ, ಅಂತ ತಿಳಿದರೆ ಮಾಧವಿಯನ್ನು ಒಪ್ಕೋತಾರಾ?"

"ನನಗೆ ತಾಯಿಯಿಲ್ಲ. ನನ್ನ ಅಕ್ಕನೇ ತಾಯಿ ಸಮಾನ. ನನ್ನ ಅಣ್ಣನಿಗೆ ಮದುವೆ ಆಗಿದೆ. ನನ್ನ ಅತ್ತಿಗೆಯೂ ನಮ್ಮ ಪಂಗಡದವರಲ್ಲ. ಅವರಿಬ್ಬರೂ

ಪ್ರೀತಿಸಿ ಮದುವೆಯಾದವರು. ನಮ್ಮ ಅತ್ತಿಗೆಯವರ ಮನೆಯಲ್ಲಿ ಯಾವ ವಿರೋಧವೂ ಇರಲಿಲ್ಲ"

"ಅದು ಅವರವರ ಇಷ್ಟಕ್ಕೆ ಸೇರಿದ್ದು. ನನ್ನ ತಮ್ಮನ್ನನ್ನು ಒಪ್ಪಿಸುವುದು ಸುಲಭವಲ್ಲ. ಈಗ ಹೆಚ್ಚು ಸಮಯವೂ ಇಲ್ಲ. ಮಾಧವೀನ, ಮದುವೆಗೆ ಮುಂಚೆ ತಾಯಿಯಾಗುವುದನ್ನು ಯಾರೂ ಇಷ್ಟಪಡುವುದಿಲ್ಲ... ಹೀಗಾಗದೇ ಇದ್ದಿದ್ದರೆ, ನಿಧಾನವಾಗಿ ಒಪ್ಪಿಸಲು ಪ್ರಯತ್ನಿಸಬಹುದಾಗಿತ್ತು"

"ಹೌದು ಮನೋಜ್, ತಕ್ಷಣಕ್ಕೆ ಇದೊಂದೇ ದೊಡ್ಡ ಅಡ್ಡಿ. ಮಾಧವಿಯನ್ನು ಅಬಾರ್ಷನ್ ಮಾಡಿಸಿಕೊಳ್ಳಲು ಒಪ್ಪಿಸು... ಒಂದೆರಡು ತಿಂಗಳುಗಳು ಕಳೀಲಿ ಆಮೇಲೆ ಮದುವೆ ಮಾತು"

"ಇಲ್ಲ ಆಂಟೀ ಇದು ನನಗೆ ಸಾಧ್ಯವಿಲ್ಲ. ಈ ನೆವದಲ್ಲಿ ನಮ್ಮಿಬ್ಬರನ್ನು ದೂರ ಮಾಡುವ ಪ್ಲಾನ್ ಅಂತ ನಂಗೊತ್ತು. ಅಲ್ಲದೇ ನನ್ನ ಅತ್ತಿಗೆಗೆ ಮಕ್ಕಳಾಗಿಲ್ಲ. ನಮ್ಮ ಮನೇಲಿ ಈ ಮಗುವೇ ಮೊದಲ ಮೊಮ್ಮಗು... ಈ ಮಗು ಹುಟ್ಟಲೇಬೇಕು ಈ ಸಲಹೆಯನ್ನು ನಾನು ನಿಮ್ಮಿಂದ ನಿರೀಕ್ಷಿಸಿರಲಿಲ್ಲ" ಅವನ ಮಾತು ಭವಾನಿಯನ್ನು ಬೆಚ್ಚಿಸಿತು.

"ನೀವಿಬ್ರೂ ಇನ್ನು ಚಿಕ್ಕವರು. ಮೊದಲು ಮದುವೆ. ನಂತರ ಮಕ್ಕಳು. ಅದು ಸಂಪ್ರದಾಯ. ಈಗ ಸಂಭ್ರಮದಿಂದ ಈ ಮಗುವನ್ನು ಸ್ವಾಗತಿಸಲು ಕಷ್ಟವಾಗುತ್ತೆ. ಅದಕ್ಕೇ ಹೇಳಿದೆ. ಆದರೆ ನಿಮ್ಮಿಬ್ಬರನ್ನು ದೂರ ಮಾಡುವ ದುರಾಲೋಚನೆ ನನ್ನಲ್ಲಿಲ್ಲ. ಆದರೆ, ಈಗ ಏನ್ಮಾಡ್ತೀರಿ! ಮಾಧವಿಯ ತಂದೆ ತಾಯಿ ಒಪ್ಪುತ್ತಾರೆ ಅಂತ ನಮಗೆ ಅನ್ನಿಸುವುದಿಲ್ಲ"

"ಸಂಪ್ರದಾಯದ ಪ್ರಕಾರ, ಮಾಧವಿಯ ತಂದೆ ತಾಯಿಗಳು ಮಗಳನ್ನು ಧಾರೆ ಎರೆದು ಕೊಡಬೇಕು. ಆದರೆ ಅವ್ರುಗಳನ್ನು ಒಪ್ಪಿಸಲು ನೀವೂ ಸಿದ್ಧರಾಗಿಲ್ಲ. ನೀವೇ ತಂದೆ ತಾಯಿಗಳ ಸ್ಥಾನದಲ್ಲಿ ನಿಂತು ಮಾಧವಿಯನ್ನು ಧಾರೆ ಎರೆದುಕೊಟ್ಟು ಆಶೀರ್ವದಿಸಿ. ನಮ್ಮ ಮನೆಗೆ ಕಳಿಸಿಕೊಡಿ. ನಮ್ಮ ಮನೆಯಲ್ಲಿ ಯಾರಿಗೂ ಅಭ್ಯಂತರವಿಲ್ಲ.

"ತಂದೆ ತಾಯಿ ಬದುಕಿರುವಾಗ ನಾವು ಹಾಗೆ ಮಾಡುವುದು ಅಪರಾಧವಾಗುತ್ತೆ. ಮನೆಯಲ್ಲಿ ನಮ್ಮ ಮರ್ಯಾದೆ ಏನು ಉಳಿಯುತ್ತೆ!? ಅಲ್ಲದೇ ನಮ್ಮ ಸಂಪ್ರದಾಯವೇ ಬೇರೆ. ನಿಮ್ಮ ಸಂಪ್ರದಾಯವೇ ಬೇರೆ. ಹೇಗೂ ನಿಮ್ಮ ಮನೆಯಲ್ಲಿ ಎಲ್ಲರ ಒಪ್ಪಿಗೆ ಇದೆ ಅಂದೆಯಲ್ಲ, ಅವಳನ್ನು ನಿಮ್ಮ ಮನೆಗೆ ಕರೆದುಕೊಂಡು ಹೋಗು. ನಿಮ್ಮ ಸಂಪ್ರದಾಯದ ಪ್ರಕಾರ ಮದುವೆಯಾಗು. ತಡ ಯಾಕೆ? ದಿನ ದಿನ ತಳ್ಳಿದರೆ, ನೀನು ತಂದೆ ಆಗ್ತೀಯ. ಮಾಧವಿ ತಾಯಿಯಾಗ್ತಾಳೆ ನಿಮ್ಮಿಬ್ಬರ ಮದುವೆಗೆ ಮೊದಲೇ..."

"ಆಗ ಮಾಧವಿಗೆ ಕೆಟ್ಟ ಹೆಸರು ಬರುತ್ತದೆ. ಮನೆ ಬಿಟ್ಟು ಓಡಿಹೋದವಳು, ಎನ್ನುವ ಅಪವಾದ ಅಂಟಿಕೊಳ್ಳುತ್ತೆ. ನಾವಿಬ್ಬರೂ ಹೊಸ ಜೀವನವನ್ನು ಶುರುಮಾಡಬೇಕಾದರೆ ಎಲ್ಲರ ಒಪ್ಪಿಗೆ ಬೇಕು. ಆಗಲೇ ಸಮಾಜದಲ್ಲಿ ಮನ್ನಣೆ ಅಂತ ನಮ್ಮ ಸಂಪ್ರದಾಯವೂ ಹೇಳುತ್ತೆ" ಅವನು ಅಭಿಮಾನದಿಂದ ಹೇಳಿಕೊಂಡಾಗ, ಇಬ್ಬರೂ ಅವನನ್ನು ಮೆಚ್ಚಿದರು.

"ಸಮಾಜದ ಭಯ ನಿನಗಿದೆ. ಸಮಾಜ ಮೆಚ್ಚುವಂತೆ ಇರಬೇಕು, ಎನ್ನುವ ಅರಿವಿದೆ. ಹೇಗೂ ನೀವಿಬ್ಬರೂ ಮೆಜಾರಿಟಿಗೆ ಬಂದಿದೀರಿ. ರಿಜಿಸ್ಟರ್ ಮದುವೆಯಾಗಿ. ಅದಕ್ಕೆ ಯಾರ ಒಪ್ಪಿಗೆಯೂ ಬೇಕಿಲ್ಲ. ಸಂತೋಷವಾಗಿ ನಿನ್ನ ಮನೆಗೆ ಕರ್ಕೊಂಡು ಹೋಗು"

"ಅದಕ್ಕೆ ಮಾಧವಿ ಒಪ್ತಿಲ್ಲ... ಅವಳನ್ನು ಒಪ್ಪಿಸುವುದು ಕಷ್ಟ, ನೀವು ಒಪ್ಪಿಸಿ ನನಗೆ ಯಾವ ಅಭ್ಯಂತರವಿಲ್ಲ" ಭವಾನಿ ನಕ್ಕಳು.

"ಹಾಗಾದ್ರೆ ಮಾಧವಿಯ ಮನಸ್ನಲ್ಲಿ ಹೇಗಾದರೂ ಸರಿ, ತಂದೆ ತಾಯಿಯನ್ನು ಒಪ್ಪಿಸಿ ಮದುವೆಯಾಗ್ಬೇಕು ಅನ್ನುವ ಹಠ ಇದ್ದಂತಿದೆ. ಅವಳ ಆಸೆಯೂ ಈಡೇರಬೇಕು. ಬಲವಂತವಾಗಿಯಾದರೂ ಸರಿ, ಅವಳ ತಂದೆ ತಾಯಿಯ ಒಪ್ಪಿಗೆಬೇಕು. ಇದಕ್ಕೆ ಅವರಿಬ್ಬರ ಆಶೀರ್ವಾದವಿಲ್ಲದಿದ್ದರೂ ದೇವರ ಆಶೀರ್ವಾದ ಬೇಕೇ ಬೇಕು. ಅದಕ್ಕೆ ಇರುವ ಉಪಾಯ ಒಂದೆ ಒಂದು, ಯಾವುದಾದರೂ ಒಂದು ದೇವಸ್ಥಾನದಲ್ಲಿ ದೇವರ ಸಮ್ಮುಖದಲ್ಲಿ ಮದುವೆಯಾಗು. ಕೊರಳಿಗೆ ಮಾಂಗಲ್ಯವನ್ನು ಕಟ್ಟು. ಕಾಲಿನ ಬೆರಳಿಗೆ ಕಾಲುಂಗರವನ್ನು ತೊಡಿಸು... ಅವಳ ಕೈ ಹಿಡಿದುಕೊಂಡು ನಮ್ಮ ಮನೆಗೆ ಕರ್ಕೊಂಡು ಬಾ... ಶ್ರೀನಾಥನಿಗೆ ನೀವಿಬ್ಬರೂ ಮದುವೆಯಾಗಿದೀರಿ ಅಂತ ಗೊತ್ತಾಗಲಿ. ಅವನು ಆಶೀರ್ವಾದ ಮಾಡಿದರೂ ಸರಿ. ಮಾಡದಿದ್ದರೂ ಸರಿ. ಅವನು ಏನೂ ಮಾಡಲಾಗುವುದಿಲ್ಲ. ಅಲ್ಲಿಂದ ಅವನಿಗೆ ತಿಳಿಸಿಯೇ ನಿನ್ನ ಮನೆಗೆ ಕರ್ಕೊಂಡು ಹೋಗು. ಹೇಗೂ ನಿಮ್ಮ ಮನೆಯವರ ವಿರೋಧವಿಲ್ಲ. ಮಾಧವಿಗೂ ತಕ್ಕಮಟ್ಟಿಗೆ ಸಮಾಧಾನ ಆಗುತ್ತದೆ. ಎಷ್ಟು ದಿನಾಂತ ಕಂಡೋರ ಮನೆಯಲ್ಲಿ ನಿನ್ನ ಹೆಂಡತಿ ಆಗುವವಳನ್ನು ಬಿಡ್ತೀಯಾ. ಅಕ್ಕಪಕ್ಕದವರು ಆಡಿಕೊಳ್ಳಲು ಆಸ್ಪದ ಕೊಡಬಾರದು" ಭವಾನಿ ಅವನಿಗೆ ಅರ್ಥವಾಗುವಂತೆ ಹೇಳಿ, ರಮಾಕಾಂತನ ಕಡೆ ನೋಡಿದಳು.

"ಹೌದು, ಮಾಧವಿಗೆ ಈಗ ನಿನ್ನ ಬೆಂಬಲ ಮುಖ್ಯ ಒಪ್ಪಿಗೆಗಾಗಿ ಕಾಯುತ್ತಾ ಕೂತುಕೊಳ್ಳುವುದರಲ್ಲಿ ಅರ್ಥವಿಲ್ಲ, ಪ್ರೀತಿಸುವಾಗ ಯಾವ ಅಡ್ಡಿಯೂ ಇರಲಿಲ್ಲ, ಈಗ ಮದುವೆಗ್ಯಾರ ಅಡ್ಡಿ! ಆದಷ್ಟು ಬೇಗ ಮದುವೆಯಾಗಿ. ನಾವಿಬ್ಬರೂ ನಿಮ್ಮಿಬ್ಬರ ಕಡೆಗೆ ಇದೀವಿ" ರಮಾಕಾಂತನೆಂದ.

"ಥ್ಯಾಂಕ್ ಯೂ ಅಂಕಲ್. ನಾನು ಈಗ್ಲೇ ಮಾಧವಿಗೆ ಫೋನು ಮಾಡ್ತೀನಿ" ಎಂದು ಉತ್ಸಾಹದಿಂದ ಡಯಲ್ ಮಾಡುತ್ತಿದ್ದದನ್ನು ಕಂಡು, ರಮಾಕಾಂತ ಅವನನ್ನೇ ಮೆಚ್ಚುಗೆಯಿಂದ ನೋಡಿದ.

"ನನ್ನ ಮಗ ಯಾರನ್ನಾದರೂ ಲವ ಮಾಡ್ತಿದೀನಿ ಅವಳನ್ನೇ ಮದುವೆಯಾಗ್ತೀನಿ ಅಂತ ಹೇಳಿದ್ರೆ, ಅನುಮಾನಿಸದೇ ಒಪ್ಪಿಗೆ ಕೊಟ್ಟು ಬಿಡ್ತೀನಿ" ಭವಾನಿಗೆ ಹೇಳಿದ.

"ನಾನೂ ಅದನ್ನೇ ಯೋಚಿಸ್ತಿದ್ದೆ. ಇಂಥ ಫಜೀತಿಗೆ ಅವಕಾಶವನ್ನೇ ಕೊಡಬಾರದು. ಪ್ರೀತಿಸಿದ ಮೇಲೆ ಮದುವೆ ಆಗೋದ್ರಲ್ಲಿ ತಪ್ಪೇನಿದೆ?"

"ತಪ್ಪೇನಿಲ್ಲ. ಆದರೆ, ಈಗ ಶ್ರೀನಾಥನನ್ನು ಒಪ್ಪಿಸೋದು ಹೇಗೆ ಅಂತ ಯೋಚಿಸ್ತಿದ್ದೆ. ಅಣ್ಣ ಅನ್ನೋದನ್ನು ಮರೆತು ಬೈದುಬಿಟ್ಟರೇ?"

"ಯಾರ್‍ಯಾರನ್ನ ಅಂತ ಬೈತಾನೆ? ಇನ್ನೆರಡು ಮೂರು ದಿನಗಳೊಳಗೆ ಈ ಹುಡುಗ ಮಾಧವಿಯನ್ನು ಮದುವೆಯಾಗಿ, ಶ್ರೀನಾಥನ ಎದುರಿಗೆ ಬಂದು ನಿಲ್ತಾನೆ. ಅವನು ಕೂಗಾಡಬಹುದು, ಕಿರುಚಾಡಬಹುದು. ಆದರೆ ತಪ್ಪಿಸುಕ್ಕೆ ಅಗುಲ್ಲವಲ್ಲ. ಆದರೆ ನಮಗೆ ಏನೂ ಗೊತ್ತಿಲ್ಲ ಅನ್ನೋತರಹ ಸುಮ್ಮನಿದ್ದು ಬಿಡ್ಬೇಕು. ಮಾಧವಿಯೇನೋ ಗಂಡನ ಮನೆಗೆ ಹೊರಟು ಹೋಗ್ತಾಳೆ. ಆದರೆ ನಾವುಗಳು ಅಲ್ಲೇ ಅವನ ಎದುರಿಗೆ ತಿರುಗಾಡ್ಬೇಕಲ್ಲ" ನಕ್ಕಳು

"ಪರವಾಗಿಲ್ಲ ನೀನೂನು ತೊಟ್ಟಿಲನ್ನು ತೂಗ್ತೀಯ, ಮಗೂನೂ ಚಿವುಟ್ತೀಯಾ" ಅವನೂ ನಕ್ಕು 'ಭೇಷ್' ಎಂದು ಹೊಗಳಿದ.

"ಆಂಟಿ ಮಾಧವಿ ನಿಮ್ಹತ್ರ ಮಾತಾಡ್ತಾಳಂತೆ" ಮನೋಜ ಪೋನನ್ನು ಕೊಟ್ಟ ಭವಾನಿ 'ಹಲೋ' ಎಂದಳು

"ಥ್ಯಾಂಕ್ಸ್ ದೊಡ್ಡಮ್ಮ ನಾನು ಪೂರಾ ಹೆದರಿಬಿಟ್ಟಿದ್ದೆ.... ಈಗ ನಂಗೆ ಧೈರ್ಯ ಬಂತು"

"ನಿನ್ನ ದೃಢವಾದ ಪ್ರೀತಿಯಿಂದ ನಂಗೆ ಧೈರ್ಯ ಬಂತು ಮಾಧವಿ, ಆದರೆ ಈಗಲೇ ನಿನ್ನ ಅತ್ತೆಗೆ ಏನನ್ನು ಹೇಳ್ಬೇಡ. ಮೊದಲು ಕೆಲವು ತಯಾರಿ ನಡೆಸಬೇಕಾಗಿದೆ. ನಂತರ ನಾನೇ ರಾಧಗೆ ಎಲ್ಲಾ ಹೇಳ್ತೀನಿ. ನಿನ್ನ ದೊಡ್ಡಪ್ಪ ನನಗೆ ಸಹಾಯಕರಾಗಿದಾರೆ. ನಿನ್ನ ಆರೋಗ್ಯವನ್ನು ಚೆನ್ನಾಗಿ ನೋಡ್ಕೋ. ನಾನು ನಾಳೆ ನಾಡಿದ್ದರಲ್ಲಿ ಮತ್ತೆ ಬರ್ತೀನಿ. ನಿಂಗೆ ಏನು ತಿಂಡಿ ಬೇಕು ಹೇಳು. ಮಾಡ್ಕೊಂಡು ಬರ್ತೀನಿ"

"ನೀವು ಪ್ರೀತಿಯಿಂದ ಏನನ್ನೇ ತಂದ್ಕೊಟ್ಟರೂ ತಿಂತೀನಿ. ಮನೋಜ ನಿಮಗೆ ಹಿಡಿಸಿದ್ನಾ ದೊಡ್ಡಮ್ಮ?" ಮುದ್ದು ಮುದ್ದಾಗಿ ಕೇಳಿದಳು.

"ಅವನ ಮತುಕತೆ, ತಿಳುವಳಿಕೆ, ಎಲ್ಲಾ ಹಿಡಿಸ್ತು, ಆದರೂ..."

"ಅವನು ನಮ್ಮ ಜಾತಿಯವನಲ್ಲ ಅಂತ ಬೇಜಾರಾ? ಮದುವೆ ಆದ್ಮೇಲೆ ನಾನೂ ಅವನ ಜಾತಿಯವಳಾಗಿ ಬಿಡ್ತೀನಿ. ಆಗ ನಿಮ್ಮ ಮನೆಗೆ ನನ್ನನ್ನು ಸೇರಿಸುಲ್ವಾ?"

"ವಿಷಯ ಅದಲ್ಲ. ನೀನು ಮೊದಲೇ ಎಂದಾದ್ರೂ ನಂಗೆ ತಿಳಿಸಿದ್ದಿದ್ರೆ, ಅಂತ ಯೋಚಿಸ್ತಿದ್ದೆ. ಮದುವೆ ಆಗ್ತಿದ್ದ ಹಾಗೇ ಹೆರಿಗೆ, ಬಾಣಂತನ ಮಗುವಿನ ಆರೈಕೆ ಹೀಗೆ ಕಾಲ ಕಳೆದುಹೋಗುತ್ತೆ. ನೀವುಗಳು ಹನಿಮೂನ್‌ಗೆ ಹೋಗುಕ್ಕಾಗಲ್ಲ. ಫ್ರೀಯಾಗಿ ತಿರುಗಾಡುಕ್ಕೆ ಆಗಲ್ಲ,"

"ಮಗೂನ ನಿಮ್ಹತ್ರ ಬಿಟ್ಬಿಟ್ಟು ಹನಿಮೂನ್‌ಗೆ ಹೋಗ್ತೀನಿ. ನೋಡ್ಕೋತೀರ ಅಲ್ವಾ?"

"ಮಗೂನ ಅಷ್ಟು ಸುಲಭವಾಗಿ ಇನ್ನೊಬ್ಬರ ಹತ್ತಿರ ಬಿಟ್ಟು ಹೋಗೋಕೆ ಮನಸ್ಸು ಬರಲ್ಲ ಮಾಧವಿ. ತಾಯಿಯ ಕರ್ತವ್ಯ. ಕಾಳಜಿ ಏನೂಂತ ನಿಂಗೆ ಆಮೇಲೆ ಅರ್ಥವಾಗುತ್ತೆ"

"ನೀವು ಹೀಗೆಲ್ಲಾ ಮಾತಾಡಿದ್ರೆ ನಂಗೆ ಅಮ್ಮ ನೆನಪಾಗ್ತಾಳೆ. ಅಳು ಬರುತ್ತೆ" ಮಾಧವಿ ಅತ್ತಿದ್ದು ಕೇಳಿಸಿತ್ತು.

ಎರಡು ದಿನಗಳ ನಂತರ, ಭವಾನಿ ಒಂದಿಷ್ಟು ಸಿಹಿ ತಿಂಡಿಗಳನ್ನು ಕರಿದ ತಿಂಡಿಗಳನ್ನು ಮಾಡಿಕೊಂಡು, ಹಣ್ಣು ಬಿಸ್ಕತ್ತುಗಳನ್ನು ಕೊಂಡುಕೊಂಡು, ರಾಧಾಳ ಮನೆಗೆ ಬಂದಳು. ಬಾಗಿಲು ತೆಗೆದ ರಾಧಾ ಸುಸ್ವಾಗತವನ್ನೇನೂ ಕೋರಲಿಲ್ಲ. ಇವಳೇ "ರಾಧಾ ಹೇಗಿದೀರಿ?" ಎಂದು ವಿಚಾರಿಸುತ್ತಾ ಒಳಗೆ ಬಂದಳು.

"ಅತ್ತೀಗೇ ನಾನು ಹೀಗೆ ಹೇಳ್ಬಾರ್ದು ಆದರೆ. ಹೀಗೇ ಎಷ್ಟು ದಿನಾ ಅಂತಾ? ಮನೇಲಿ ಇವಳೊಬ್ಬಳನ್ನೇ ಬಿಟ್ಟು ನಾನು ಎಲ್ಲಿಗೂ ಹೋಗುಕ್ಕಾಗಲ್ಲ. ನನಗೂ ಮನೆ ಬಂಧನವಾಗಿದೆ. ಆ ಹುಡುಗನೂ ಮತ್ತೆ ಈ ಕಡೆ ಬಂದಿಲ್ಲ. ಮಾಧವೀನೋ, ಕೇಳಿದ್ದಕ್ಕೆ ಸರಿಯಾಗಿ ಉತ್ತರವನ್ನೇ ಕೊಡುವುದಿಲ್ಲ. ಅಲ್ಲಿ ನಿಮ್ಮ ಮನೇಲಿ ಏನು ನಡೀತಿದೆ?"

"ನೀವು ಸುಗುಣನ ಹತ್ರ ಮಾತಾಡಲಿಲ್ವಾ?"

"ಮಾತಾಡಿದ್ದೆ. ಅವಳು ಅಬಾರ್ಷನ್‌ಗೆ ಒಪ್ಪಿಕೊಂಡ್ಲಾ, ಅಂತ ಕೇಳಿದ್ರು, ಇವಳು ಒಪ್ಪುವಂತೆ ಕಾಣಲಿಲ್ಲ. ನಿಮ್ಮ ಮಾತಿಗೂ ಬೆಲೆ ಕೊಡಲಿಲ್ಲ ಎಂದರೆ, ಎಂಥಾ ಹಠಮಾರಿ ನೋಡಿ"

"ಅಬಾರ್ಷನ್‌ಗೆ ಒಪ್ಪಿಕೊಂಡ್ರೆ, ಮಗುವನ್ನು ಕಳೆದುಕೊಳ್ತಾಳೆ. ಮನೋಜನಿಂದ ದೂರ ಆಗ್ತಾಳೆ. ಅಪ್ಪ ಅಮ್ಮನ ಮೇಲಿನ ಸಿಟ್ಟು ಕಡಿಮೆ

ಆಗಲಿಲ್ಲ. ಇದೆಲ್ಲಾ ಸರಿ ಅಂತ ಅನ್ಸುತ್ತಾ ನಿಮಗೆ?

"ಅಂದ್ರೇ, ಮಾಧವಿ ಮಗುವಿಗೆ ಜನ್ಮ ಕೊಡ್ತಾಳಾ? ಅವಳ ಬಾಣಂತನ ಮಾಡೋರು ಯಾರು? ಶ್ರೀನಾಥ ಭಾವ ಸುಮ್ಮನಿರ್ತಾರಾ?"

"ಅವಳ ಗಂಡನಾಗೋನು ಇದನ್ನೆಲ್ಲಾ ನೋಡ್ಕೋತಾನೆ. ಅವನ ಮನೆಗೆ ಕಳಿಸಿಬಿಡಿ. ಈಗ ಅದೊಂದೇ ಉಪಾಯ. ಅವಳ ಮನೇಲಿ ಅವಳಿದ್ರೆ, ಯಾರಿಗೂ ತೊಂದರೆ ಇಲ್ಲ"

"ಇವಳಿಂದ ನಂಗೇನೂ ತೊಂದರೆ ಇಲ್ಲ. ಆದರೂ ಎಷ್ಟು ದಿನ ಅಂತ?"

"ಅದಕ್ಕೇ ಹೇಳಿದ್ದು ಮಾಧವಿಗೆ ಹೇಳಿಬಿಡಿ.... ಅವನು ಬಂದು ಕರ್ಕೊಂಡು ಹೋಗಲಿ"

"ಕರ್ಕೊಂಡು ಹೋಗದಿದ್ರೆ! ಅತ್ತಿಗೆಗೆ, ಭಾವಂಗೆ ತಿಳಿದರೆ? ಮನಸ್ತಾಪ ಬರಲ್ವಾ!"

"ಹಾಗಾದ್ರೆ ಈಗ ನೀವೇ ಹೇಳಿ. ಯಾರನ್ನು ಒಪ್ಪಿಸ್ತೀರಿ! ಹೋಗಲಿ, ನಿಮ್ಮ ಗಂಡ ಈ ಬಗ್ಗೆ ಏನಂತಾರೆ?"

"ಈಗ ಇವರು ಏನೂ ಮಾತಾಡಲ್ಲ. ಭಾವ ಇವರ ಮಾತಿಗೆ ಒಪ್ಪಿರಲಿಲ್ಲ. ಆದ್ದರಿಂದ ಇವರು ಸುಮ್ಮನಾಗಿಬಿಟ್ಟಿದಾರೆ, ಅಕ್ಕನಿಗಾಗಿ ಸಹಿಸಿಕೊಂಡಿದಾರೆ"

"ಇದೆಲ್ಲಾ ಹೀಗೇ ಮುಂದುವರೆಯಬೇಕಾ ರಾಧಾ? ಇದಕ್ಕೊಂದು ಅಂತ್ಯಬೇಡ್ವಾ?

"ಬೇಕೇಬೇಕು. ಇಲ್ಲದಿದ್ರೆ ಇದನ್ನು ಮುಚ್ಚಿಡೋಕೆ ಆಗುತ್ತಾ? ಕೇಳ್ದೋರಿಗೆ ನಾನು ಏನು ಹೇಳಲಿ? ನಮ್ಮನ್ನು ಆಡ್ಕೋತಾರೆ, ನೀವು ಈಗ ಹೇಗೂ ಇವಳ ಪರವಾಗಿ ಇದೀರಿ. ಹೇಗೂ ಬೇರೆ ಇದೀರಿ. ನಿಮ್ಮ ಮನೆಗೆ ಕರ್ಕೊಂಡು ಹೋಗಿ" ಅವಳು ಉಪಾಯವನ್ನು ಸೂಚಿಸಿದಳು.

"ನಮ್ಮ ಮನೆಗೆ ಕರ್ಕೊಂಡು ಹೋದರೆ, ರಂಪ ರಾದ್ಧಾಂತ ಜಾಸ್ತಿಯಾಗುತ್ತೆ. ಅತ್ತೆಯವರು ಇಲ್ಲದಿದ್ದರೂ, ನಾವುಗಳು ನೋಡುವವರ ಕಣ್ಣಿಗೆ ಒಗ್ಗಟ್ಟಾಗಿದೀವಿ. ಆಸ್ತಿಪಾಲು ಮಾಡಿಕೊಂಡಿಲ್ಲ. ವರ್ಷ ಕಳೆಯುವವರೆಗೂ ನಾವು ಅಲ್ಲೇ ಇರ್ಬೇಕು. ನಾವೇನಾದ್ರೂ ದೂರ ಬೇರೆ ಯಾವುದಾದ್ರೂ ಮನೇಲಿದ್ದಿದ್ರೆ, ಖಂಡಿತಾ ಕರ್ಕೊಂಡು ಹೋಗ್ತಿದ್ದೆ. ಮನಸ್ತಾಪಕ್ಕೆ ಹೆದರ್ತಿರ್ಲಿಲ್ಲ" ರಾಧಾ ಅವಳನ್ನೇ ಮಿಕಿ ಮಿಕಿ ನೋಡಿದಳು.

"ನುಂಗಲಾರದ ಬಿಸಿ ತುಪ್ಪ ಆಗಿದೆ ಅತ್ತಿಗೇ. ಬಿಡುಕ್ಕಿಲ್ಲ ಅನುಭವಿಸುಕ್ಕಿಲ್ಲ, ನನ್ನ ಸ್ಥಿತಿ, ಯಾರಿಗೂ ಅರ್ಥವಾಗಲ್ಲ"

"ನಂಗೆ ಅರ್ಥ ಆಗುತ್ತೆ ರಾಧಾ. ಅದಕ್ಕೇ ನಾನು ಒಂದು ಉಪಾಯವನ್ನು ಹುಡುಕಿದೀನಿ. ಆದರೆ, ನೀವು ಯಾರಿಗೂ ಹೇಳಲ್ಲ ಅಂತ ಪ್ರಾಮಿಸ್ ಮಾಡ್ಬೇಕು"

"ಎಂಥಾ ಉಪಾಯ ಅತ್ತಿಗೇ. ನಾನೇನು ತೊಂದರೆಗೆ ಸಿಕ್ಕಿ ಬೀಳಲ್ಲ ತಾನೇ?"

"ಇಲ್ಲ ನಾನೂ ಸಿಕ್ಕಿ ಬೀಳಲ್ಲ, ನಿಮ್ಮನ್ನು ಬೀಳಿಸುಲ್ಲ, ಆದರೆ ನೀನು ಪ್ರಾಮಿಸ್ ಮಾಡ್ಬೇಕು ಹಾಗಿದ್ದರೆ ಮಾತ್ರ ಹೇಳ್ತೀನಿ" ರಾಧಾ ಕೈ ಮೇಲೆ ಕೈಯನ್ನಿಟ್ಟು ಪ್ರಾಮಿಸ್ ಮಾಡಿದಳು.

"ಗುಡ್, ಇನ್ನೆರಡು ದಿನಕ್ಕೆ. ಸಂತೆ ಸರ್ಕಲ್‌ನಲ್ಲಿರುವ ದೇವಸ್ಥಾನದಲ್ಲಿ ಇವರಿಬ್ಬರ ಮದುವೆಗೆ ಏರ್ಪಾಡು ಮಾಡಿದೀನಿ."

"ಮದುವೇನಾ?" ಬಾಯಿ ಅಗಲವಾಗಿ ತೆರೆದಳು.

"ಹಾಗ್ಯಾಕೆ ಬಾಯಿ ಬಿಡ್ತೀರಿ ಮದುವೇನೆ? ಮನೋಜ ಒಪ್ಪಿಕೊಂಡಿದಾನೆ. ಮಾಧವಿಗೆ ಎಲ್ಲಾ ವಿಷಯವೂ ತಿಳಿದಿದೆ. ನಾನೇ ಈಗಲೇ ಯಾರಿಗೂ ತಿಳಿಸುವುದು ಬೇಡ ಅಂತ ಹೇಳಿದ್ದೆ. ಗೊತ್ತು ಮಾಡಿರುವ ಸಮಯಕ್ಕೆ ಮನೋಜ ಅಲ್ಲಿಗೆ ಬರ್ತಾನೆ. ಆಮೇಲೆ ನಿಮಗೆ ಫೋನು ಮಾಡ್ತಾನೆ. ನೀವು ಮಾಧವಿಯನ್ನು ಕರೆದುಕೊಂಡು ಅಲ್ಲಿಗೆ ಬನ್ನಿ. ನಾವಿಬ್ಬರು ಬಂದಿರ್ತೀವಿ... ಅಲ್ಲಿ ಎಲ್ಲಾ ರೆಡಿಯಾಗಿರುತ್ತೆ. ದೇವರ ಎದುರಿನಲ್ಲಿ ಶಾಸ್ತ್ರಿಗಳು ಮದುವೆ ಮಾಡಿಸುತ್ತಾರೆ. ಆಮೇಲೆ ಮನೋಜ ಮಾಧವಿಯನ್ನು ಅವನ ಮನೆಗೆ ಕರ್‍ಕೊಂಡು ಹೋಗ್ತಾನೆ. ಅವರ ಮನೆಯವರ ಕಡೆಯಿಂದ ಯಾವ ತೊಂದರೆಯೂ ಇಲ್ಲ"

"ಅಷ್ಟು ಸುಲಭವಾಗಿ ಎಲ್ಲಾ ಆಗುತ್ತಾ? ಯಾರಿಗಾದ್ರೂ ಗೊತ್ತಾದರೆ! ನಂಗೆ ಹೆದರಿಕೆ ಆಗುತ್ತೆ"

"ಯಾರಿಗೂ ಗೊತ್ತಾಗಲ್ಲ, ಹೆದರಬೇಕಾಗಿಲ್ಲ. ಇವರಿಬ್ಬರೂ ಮೆಜಾರಿಟಿಗೆ ಬಂದಿದಾರೆ. ಯಾರೂ ಏನೂ ಮಾಡುಕ್ಕಾಗಲ್ಲ. ನಿಮಗೆ ಒಪ್ಪಿಗೆ ಇದ್ದರೆ ಸಹಕರಿಸಿ. ಇಲ್ಲದಿದ್ದರೆ ಬೇಡ. ಆದರೆ ಸುಗುಣಂಗಾಗಲೀ, ಶ್ರೀನಾಥಂಗಾಗಲೀ ತಿಳಿದರೆ, ಮದುವೆ ನಿಲ್ಲಬಹುದು. ಮಾಧವಿ ಗತಿ ಏನಾಗುತ್ತೋ ಅವಳ ಬಗ್ಗೆ ಯೋಚಿಸಿ.... ಮುಂದೆ ನಾವು ಪಶ್ಚಾತ್ತಾಪ ಪಡುವಂತಾಗಬಾರದು."

"ಹೆದರಿಸ್ಬೇಡಿ, ನನ್ನ ಸಹಕಾರ ಇದೆ, ನೀವು ಹೀಗೆ ಹೇಳಿದರೆ ಹಾಗೆ. ನಾನು ಈಗಲೇ ನನ್ನ ಗಂಡನಿಗೂ ಹೇಳುವುದಿಲ್ಲ" ಹೆದರುತ್ತಾ ನುಡಿದಳು. ಭವಾನಿ ಧೈರ್ಯವನ್ನು ಹೇಳಿದಳು. ಮಾಧವಿಯನ್ನು ನೋಡಿ ಮಾತಾನಾಡಿಸಿ. ಅವಳಿಗೆ ತಿಂಡಿಯನ್ನು ಕೊಟ್ಟು, ತಾನು ಹೇಳಬೇಕಾದುದನ್ನು ಹೇಳಿ. ಅಲ್ಲಿಂದ ಮನೆಗೆ ಬಂದಳು.

ಮನೋಜ ಬಂದು ಮಾಧವಿಯನ್ನು ಮಾತನಾಡಿಸಿ, ಅವಳಿಗೆ ಒಂದು ಹೊಸ ಸೀರೆಯನ್ನು ಕೊಟ್ಟ. ತಾನು ಖರೀದಿಸಿ ತಂದಿದ್ದ ಕರೀಮಣಿ ಸರದ

ಮಾಂಗಲ್ಯವನ್ನು ತೋರಿಸಿದ. ಈ ಸೀರೆಯನ್ನು ಉಟ್ಟು ಮದುಮಗಳ ತರಹ ಅಲಂಕಾರ ಮಾಡ್ಕೊಂಡು ಬರ್ಬೇಕು. ನಾನು ಈ ಮಾಂಗಲ್ಯವನ್ನು ನಿನ್ನ ಕೊರಳಿಗೆ ಕಟ್ತೀನಿ" ಮಾಧವಿ ಸಂತಸವನ್ನು ವ್ಯಕ್ತಪಡಿಸಿದರೂ, ಆತಂಕವನ್ನು ಹೊರಗೆಡವಿದಳು.

"ಇದುವರೆಗೂ ಮನೇಲೇ ಕೂತಿದ್ದೆ. ಹೊರಗೆ ಬಂದರೆ ನನಗೆ ಏನೂ ಅಪಾಯವಿಲ್ಲ ತಾನೇ... ಹಾಗೇನಾದ್ರೂ ಆದ್ರೆ ಏನ್ಮಾಡೋದು?"

"ಏನೂ ಆಗಲ್ಲ, ನಾನಿದೀನಿ. ನಮ್ಮ ಮನೆಯವರು ನಿನ್ನ ದೊಡ್ಡಪ್ಪ, ದೊಡ್ಡಮ್ಮ ನಮ್ಮ ಕಡೆಗೆ ಇದಾರೆ. ಈ ಮದುವೆ ಒಂದು ನಡೆದು ಹೋದ್ರೇ, ಯಾವ ಅಪಾಯದ ಭಯವೂ ಇಲ್ಲ. ನೀನು ಧೈರ್ಯವಾಗಿರ್ಬೇಕು. ನಿನ್ನ ಆರೋಗ್ಯವನ್ನು ಚೆನ್ನಾಗಿ ನೋಡ್ಕೋಬೇಕು ತಿಳಿತಾ! ನಿನ್ನ ಅತ್ತೇನ ನಂಬಬಹುದು ತಾನೇ? ಕಡೇ ಗಳಿಗೆಯಲ್ಲಿ ಕೈಕೊಟ್ಟರೇ?"

"ಇಲ್ಲ ಅತ್ತೆ ದೊಡ್ಡಮ್ಮನ ಹತ್ರ ಮಾತನಾಡುತ್ತಿದ್ದದನ್ನು ಕೇಳಿಸ್ಕೊಂಡೆ. ಅವರಿಗೆ ನಾನು ಇಲ್ಲಿಂದ ಹೋದರೆ ಸಾಕು ಎನಿಸಿದೆ. ಈಗ ನಾನು ಯಾರಿಗೂ ಬೇಡದವಳಾಗಿ ಬಿಟ್ಟೀದೀನಿ

"ಹಾಗೆನ್ಬೇಡ. ನಂಗೆ ನೀನು ಬೇಕು. ಅದಕ್ಕೇ ತಾನೇ ಈ ಹೋರಾಟ" ಮುಗುಳ್ನಕ್ಕ

* * *

ಈ ದೇವಸ್ಥಾನದಲ್ಲಿ ಮಾಧವಿ ಮನೋಜರ ಮದುವೆಗಾಗಿ ಅರ್ಚಕರು ಎಲ್ಲಾ ಸಿದ್ಧತೆಗಳನ್ನು ಮಾಡಿಕೊಂಡು, ವಧುವರರ ಬರವಿಗಾಗಿ ಕಾಯುತ್ತಿದ್ದರು. ರಮಾಕಾಂತ, ಭವಾನಿ ಮುಂಚಿತವಾಗಿಯೇ ಬಂದು ದೇವರಿಗೆ ಪೂಜೆಯನ್ನು ಮಾಡಿಸಿದ್ದರು. ಭವಾನಿ ರಾಧಾಳಿಗೆ ಫೋನು ಮಾಡಿದಳು ಮಾಧವೀನ ಕರ್ಕೊಂಡು ಇಲ್ಲಿಗೆ ಬನ್ನಿ, ಎಲ್ಲಾ ರೆಡಿಯಾಗಿದೆ. ಮನೋಜ ಅವನ ಕಸಿನ್‌ನೊಂದಿಗೆ ಬರ್ತಿದಾನೆ"

ರಾಧ, ಮಾಧವಿಗೆ ಮನೋಜ ತಂದುಕೊಟ್ಟಿದ್ದ ಹೊಸ ಸೀರೆಯನ್ನು ಉಡಿಸಿದಳು. ತಲೆ ಬಾಚಿ ಹೂವನ್ನು ಮುಡಿಸಿದಳು. ಮೇಲೊಂದು ಶಾಲನ್ನು ಹೊದ್ದುಕೋ, ಅಕ್ಕಪಕ್ಕದವರ್ಯಾರಿಗೂ ಅನುಮಾನ ಬರಬಾರ್ದು" ಎಂದು ಹೇಳಿ ತನ್ನ ಬಳಿಯಿದ್ದ ಒಂದು ಶಾಲನ್ನು ಕೊಟ್ಟಳು. ರವಿ ಮನೆಯಲ್ಲಿರಲಿಲ್ಲ. ಮನೆಗೆ ಬೀಗ ಹಾಕಿ, ಇಬ್ಬರೂ ಮನೆಯಿಂದ ಹೊರಟು, ರಸ್ತೆಯ ತಿರುವಿನಲ್ಲಿದ್ದ ಒಂದು ರಿಕ್ಷಾವನ್ನು ಹಿಡಿದು ದೇವಸ್ಥಾನಕ್ಕೆ ಬಂದರು. ಅದೇ ಸಮಯಕ್ಕೆ ಮನೋಜನೂ ಅಲ್ಲಿಗೆ ಬಂದ. ರಮಾಕಾಂತ ತಾನು ತಂದಿದ್ದ ಪಂಚೆಯನ್ನು ಉಡಲು ಅವನಿಗೆ ಕೊಟ್ಟ, ಭುಜದ ಮೇಲೆ ಶಲ್ಯವನ್ನು ಹೊದಿಸಿದ. ಶಾಸ್ತ್ರಿಗಳು

ಅವನ ಹಣೆಗೆ ಕುಂಕುಮವನ್ನಿಟ್ಟರು. ಇಬ್ಬರಿಗೂ ಅಲ್ಲಿ ಹಾಕಿದ್ದ ಮಣೆಯ ಮೇಲೆ ಕೂರುವಂತೆ ಹೇಳಿ, ಗಣಪತಿಯ ಸ್ತೋತ್ರವನ್ನು ಹೇಳತೊಡಗಿದರು. ಅತಿ ಸರಳ ರೀತಿಯಲ್ಲಿ ಮದುವೆಯ ವಿಧಿ ವಿಧಾನವನ್ನು ಪೂರೈಸಿದರು. ಒಬ್ಬರಿಗೊಬ್ಬರು ವರಮಾಲೆಯನ್ನು ಹಾಕುವಂತೆ ಹೇಳಿದರು. ನಂತರ ಅವನು ತಾನು ತಂದಿದ್ದ ಮಂಗಳಸೂತ್ರವನ್ನು ಮಾಧವಿಯ ಕೊರಳಿಗೆ ತೊಡಿಸಿದ. ಅಗ್ನಿಗೆ ಪ್ರದಕ್ಷಿಣೆ ಮಾಡಿ, ಅಗ್ನಿಸಾಕ್ಷಿಯಾಗಿ ಅವಳ ಕೈ ಹಿಡಿದ. ಅವನ ಕಸಿನ್ ಕೆಲವು ಮುಖ್ಯವಾದ ಪೋಟೋಗಳನ್ನು ತೆಗೆದ. ಅಲ್ಲಿಗೆ ಮದುವೆಯ ಕಲಾಪ ಮುಗಿದಿತ್ತು. ನವದಂಪತಿಗಳು ದೇವರಿಗೆ ನಮಸ್ಕರಿಸಿದರು. ನಂತರ ಉಳಿದ ಹಿರಿಯರಿಗೆ ನಮಸ್ಕರಿಸಿ, ಆಶೀರ್ವಾದವನ್ನು ಪಡೆದರು. ರಮಾಕಾಂತ ಮಾಧವಿಯನ್ನು ತಬ್ಬಿಕೊಂಡು ಹೇಳಿದ.

"ನೀನೇನೂ ಹೆದರ್ಬೇಡ ಮಾಧವಿ. ದೇವರ ಸಮ್ಮುಖದಲ್ಲಿ ನಿಮ್ಮಿಬ್ಬರ ಮದುವೆ ನಡೆದಿದೆ. ಇನ್ನು ಯಾರೂ ಏನೂ ಮಾಡುಕ್ಕಾಗಲ್ಲ. ಆದರೆ ಈಗ ನಾವುಗಳು ಒಂದು ಸಣ್ಣ ನಾಟಕವನ್ನು ಆಡಲೇಬೇಕಾಗಿದೆ. ಈಗ ನಾವಿಬ್ಬರು ಮನೆಗೆ ಮೊದಲು ಹೋಗುತ್ತೇವೆ. ನೀನು ಇವಳನ್ನು ಇದೇ ಅಲಂಕಾರದಲ್ಲಿ ಮನೆಗೆ ಕರೆದುಕೊಂಡು ಬಾ. ಶ್ರೀನಾಥ ಏನೂ ಹೇಳುಕ್ಕಾಗಲ್ಲ ಒಪ್ಪಲೇಬೇಕಾಗುತ್ತದೆ" ಇಬ್ಬರೂ ಆತಂಕದಿಂದ ಮುಖ ಮುಖ ನೋಡಿಕೊಂಡರು.

'ರಾಧಾ, ನೀವು ನಿಶ್ಚಿಂತೆಯಿಂದ ಮನೆಗೆ ಹೋಗಿ. ಸ್ವಲ್ಪ ಹೊತ್ತು ಬಿಟ್ಟು ಸುಗುಣಂಗೆ ಪೋನು ಮಾಡಿ, "ಮಾಧವಿ ನಾಪತ್ತೆಯಾಗಿದಾಳೆ ಅಂತ ತಿಳಿಸಿ. ಮುಂದೆ ಎಲ್ಲಾ ತಾನಾಗಿಯೇ ಸರಿ ಹೋಗುತ್ತೆ" ಭವಾನಿ ನಗುತ್ತಾ ಹೇಳಿದಳು.

"ವಿನೋದ ನಿನ್ನ ಪಾಡಿಗೆ ನೀನು ಏನೂ ಗೊತ್ತಿಲ್ಲದವನಂತೆ ಸುಮ್ಮನಿದ್ದು ಬಿಡು. ಮನೋಜ ಎಲ್ಲಾ ನೋಡ್ಕೋತಾನೆ, ಈ ಆಂಟೀನ ಅವರ ಮನೆ ಹತ್ರ ಬಿಟ್ಬಿಡು. ಬಹಳ ಗೊಂದಲಕ್ಕೊಳಗಾಗಿದ್ದಾರೆ. ರಾಧಾ ನೀವು ಇವನ ಜತೆ ಮನೆಗೆ ಹೋಗಿ, ಆಮೇಲೆ ಫೋನು ಮಾಡಿ. ಥ್ಯಾಂಕ್ಸ್ ನೀವು ಸಹರಿಸಿದ್ದಕ್ಕೆ ಎಂದು ಹೇಳಿ ಅವಳ ಭುಜವನ್ನು ತಟ್ಟಿದಳು. ರಮಾಕಾಂತ ಅವಳಿಗೆ ಕೈ ಮುಗಿದ. ಶಾಸ್ತ್ರಿಗಳಿಗೆ ಕೊಡಬೇಕಾದ ದಕ್ಷಿಣೆ ಇತ್ಯಾದಿಗಳನ್ನು ಕೊಟ್ಟು ವಂದಿಸಿದ.

ಇಬ್ಬರೂ ಅಲ್ಲಿಂದ ಸೀದಾ ಮನೆಗೆ ಬಂದರು. ಏನೋ ಮಹತ್ಕಾರ್ಯ ಮಾಡಿಸಿದಂತೆ ಅನ್ನಿಸಿದ್ದರೂ ಒಳಗೊಳಗೇ ಆತಂಕ ಕೊರೆಯುತ್ತಿತ್ತು. ರಾಧಾ ತಲುಪಿದ್ದಕ್ಕೆ ಫೋನು ಮಾಡಿದ್ದಳು.

ಕೆಲವೇ ನಿಮಿಷಗಳ ನಂತರ ಸುಗುಣಳಿಗೆ ಫೋನು ಮಾಡಿದ್ದಳು. ನಾಟಕದ ಇನ್ನೊಂದು ಅಧ್ಯಾಯ ಪ್ರಾರಂಭವಾಗಿತ್ತು. ಶ್ರೀನಾಥನ ಎತ್ತರದ ಧ್ವನಿ

ಕೇಳಿದೊಡನೆ, ರಮಾಕಾಂತ ಹಾಗೂ ಭವಾನಿ ಕೆಳಗಿಳಿದು ಬಂದರು. ಶ್ರೀನಾಥ ಕಿರುಚಾಡುತ್ತಿದ್ದ ಸುಗುಣ ಅಳುತ್ತಿದ್ದಳು. ವನಜ ಅವಳ ಪಕ್ಕ ನಿಂತಿದ್ದಳು. ಅನಂತ ದಿಕ್ಕು ತೋಚದವನಂತೆ ಕುಳಿತಿದ್ದ. ಭವಾನಿ ಗಾಬರಿಯನ್ನು ನಟಿಸುತ್ತಾ ವನಜಳ ತೋಳನ್ನು ಮುಟ್ಟಿದಳು.

"ಅಕ್ಕಾ ಏನಾಯ್ತು? ಸುಗುಣ ಯಾಕೆ ಅಳ್ತಿದಾಳೆ," ಪಿಸುದನಿಯಲ್ಲಿ ಕೇಳಿದಳು.

"ಮಾಧವಿ ನಾಪತ್ತೆಯಾಗಿದಾಳಂತೆ. ರಾಧಾ ಪೋನು ಮಾಡಿದ್ದಳು" ಭವಾನಿ ರಮಾಕಾಂತನ ಕಡೆ ನೋಡಿದಳು.

"ಅನಂತಣ್ಣ ಏನಾಯ್ತು! ಅತ್ತಿಗೆ ಹೇಳಿದ್ದು ನಿಜನಾ?"

"ಹೌದು ರಮಾಕಾಂತ. ರಾಧಾ ಈಗ ಸ್ವಲ್ಪ ಹೊತ್ತಿನ ಕೆಳಗೆ ಪೋನು ಮಾಡಿದ್ದಳು. ಮಾಧವಿ ಮನೆಯಿಂದ ಓಡಿ ಹೋಗಿದಾಳಂತೆ"

"ಎಲ್ಲಿಗೆ ಹೋದ್ಲು? ಹೇಗೆ ಹೋದ್ಲು? ರಾಧಾ ಮನೇಲಿರ್ಲಿಲ್ಲವಂತಾ!"

"ರಾಧಾ, ಮಾಧವಿ ಇಬ್ಬರೂ ಡಾಕ್ಟರ್ ಹತ್ತಿರ ಹೋಗಿದ್ರಂತೆ. ಅಲ್ಲಿಂದ ಮಾಧವಿ ತಪ್ಪಿಸ್ಕೊಂಡು ಎಲ್ಲಿಗೋ ಹೊರಟು ಹೋದ್ಲಂತೆ"

"ಇನ್ನೆಲ್ಲಿಗೆ ಹೋಗಿರ್ತಾಳೆ? ಆ ಭಂಡನ ಹತ್ತಿರಕ್ಕೆ ಹೋಗಿರ್ತಾಳೆ. ನಾನು ಸುಮ್ಮನಿರಲ್ಲ ಪೋಲೀಸ್ ಕಂಪ್ಲೆಂಟ್ ಕೊಟ್ಟಿದೀನಿ ಅವರು ಇಬ್ಬರನ್ನು ಎಳೆದುಕೊಂಡು ಬರ್ತಾರೆ" ಶ್ರೀನಾಥ ಗುಡುಗಿದ.

"ಪೋಲಿಸ್ನೋರ್ಗೆ ತಿಳಿಸುವ ಅರ್ಜೆಂಟೇನಿತ್ತು! ಊರಿಗೆಲ್ಲಾ ತಿಳಿಯುತ್ತೆ" ಭವಾನಿ ಎಂದಳು.

"ನೀವು ಸುಮ್ನಿರಿ ಅತ್ತಿಗೇ. ಅವನು ಕಿಡ್ನಾಪ್ ಮಾಡಿದಾನೆ ಅಂತ ಕೇಸು ಹಾಕಿದರೆ. ಅವನಿಗೆ ಜೈಲು ಶಿಕ್ಷೆ ಆಗುತ್ತೆ. ಆಗಲೇ ಇಬ್ಬರಿಗೂ ಬುದ್ಧಿ ಬರೋದು"

"ಬುದ್ಧಿ ಕಲಿಸೋದು ಹೀಗಾ! ನಿಂಗೆ ತಾಳ್ಮೇನೇ ಇಲ್ಲ. ಮಾಧವೀನ ಮನೆಗೆ ಕರ್ಕೊಂಡು ಬಂದಿದ್ರೆ ಹೀಗೆಲ್ಲಾ ಆಗ್ತಿತ್ತಾ! ಬೇರೆಯವರಿಗೆ ಏನು ಜವಾಬ್ದಾರಿ ಇರುತ್ತೇ?" ಭವಾನಿ ಮತ್ತೆ ತನ್ನ ಮಾತನ್ನು ಸೇರಿಸಿದಳು.

"ರಾಧಾ ಹೊರಗಿನವಳಲ್ಲ. ನನ್ನ ತಮ್ಮನ ಹೆಂಡತಿ. ಅವಳ ಮೇಲೆ ಅಪವಾದ ಹೊರಿಸ್ಬೇಡಿ, ಅತ್ತಿಗೇ" ಸುಗುಣ ಅಳುತ್ತಾ ನುಡಿದಳು.

"ನನ್ನ ಮಗಳೇ ನನ್ನವಳಲ್ಲ. ಬೇರೆಯವರನ್ನು ಅಂದು ಏನು ಪ್ರಯೋಜನ? ಇವತ್ತು ನಿನ್ನೆ ಪರಿಚಯದವನಿಗಾಗಿ ಮನೆಯವರಿಗೇ ದ್ರೋಹ ಮಾಡುವಷ್ಟು ಬೆಳೆದುಬಿಟ್ಟಿದಾಳೆ. ಅವಳಿಗೆ ಮೊದಲು ಎಕ್ಕಡದಿಂದ ಹೊಡೀಬೇಕು"

"ಹೀಗೆಲ್ಲಾ ಆವೇಶದಿಂದ ಮಾತಾಡ್ಬೇಡ ಶ್ರೀನಾಥ. ಇಬ್ಬರೂ ಮೆಜಾರಿಟಿಗೆ

ಬಂದಿದಾರೆ. ನೀನು ಯಾರ ಮೇಲೂ ಕೈ ಮಾಡುವ ಆಗಿಲ್ಲ. ಹೇಸು ನಿನಗೆ ತಿರುಗಿಬೀಳುತ್ತೆ. ರಮಾಕಾಂತ ಸೂಕ್ಷ್ಮತೆಯನ್ನು ತಿಳಿಸಿದ.

"ನಾನು ಅವತ್ನಿಂದ ಹೇಳ್ತಾನೇ ಇದೀನಿ. ಈ ರಂಪರಾದ್ಧಾಂತ ಬೇಡ. ಇಬ್ಬರೂ ವಯಸ್ಕರಾಗಿದಾರೆ. ಒಪ್ಪಿಗೆ ಕೊಟ್ಟು ಮದುವೆ ಮಾಡಿ ಕಳಿಸೋಣ ಅಂತ. ನನ್ನ ಮಾತನ್ನು ಕೇಳಲಿಲ್ಲ. ಈಗ ಎಲ್ಲೆಲ್ಲಿಗೋ ಹೋಗ್ತಿದೆ" ಅನಂತನೆಂದ

"ಅಣ್ಣಾ, ನೀನು ಸುಮ್ನಿರು. ಪಲ್ಲವಿ ಏನಾದ್ರೂ ಹೀಗೇ ಮಾಡಿದ್ದಿದ್ರೆ, ನೀನೂ ನನ್ನ ಹಾಗೇ ಆಡ್ತಿದ್ದೆ. ನಿಮಗ್ಯಾರಿಗೂ ನನ್ನ ಎದೆಗುದಿ ಅರ್ಥವಾಗಲ್ಲ. ನೀನೇನೇ ಅಳ್ತಾ ನಿಂತ್ಬಿಟ್ಟೆ? ನಿನ್ನ ಮಗಳ ಪೋಟೋ ಕೊಡು. ಪೋಲಿಸ್‌ನವರ್ಗೆ ಕೊಡ್ಬೇಕು, ಅವಳು ಎಲ್ಲೇ ಇದ್ದರೂ ಪತ್ತೆ ಹಚ್ತಾರೆ. ಆ ಇನ್‌ಸ್ಪೆಕ್ಟರ್ ನನ್ನ ಪರಿಚಯದವನು. ಟಿ. ವಿ. ಲಿ ಅನೌನ್ಸ್ ಮಾಡಿಸ್ತೀನಿ"

"ದುಡುಕ್ಬೇಡ ಶ್ರೀನಾಥ. ಇದು ನಮ್ಮ ಮನೆತನದ ಪ್ರಶ್ನೆ. ಮರ್ಯಾದೆ ಹೋಗುತ್ತೆ"

"ಈ ಜ್ಞಾನ ಅವಳಿಗೂ ಇರ್ಬೇಕಾಗಿತ್ತು, ಚಕ್ಕಂದ ಆಡುವಾಗ ಎಲ್ಲಿಗೆ ಹೋಗಿತ್ತು ಜ್ಞಾನ. ಇಬ್ಬರಿಗೂ ಸರಿಯಾಗಿ ಬುದ್ಧಿ ಕಲಿಸ್ತೀನಿ. ಈ ವಿಷಯದಲ್ಲಿ ನೀವ್ಯಾರೂ ನನಗೆ ಸಲಹೆ ಕೊಡ್ಬೇಡಿ. ಎಂದು ಒರಟಾಗಿ ಹೇಳಿ. ಎಲ್ಲರಿಗೂ ಬೆನ್ನು ಮಾಡಿ ಕಿಟಕಿಯ ಬಳಿ ನಿಂತ.

ಮನೆ ಮುಂದೆ ಆಟೋರಿಕ್ಷಾ ನಿಂತ ಸದ್ದು ಕೇಳಿಸಿತು. ರಮಾಕಾಂತ, ಭವಾನಿ ಮುಖ ಮುಖ ನೋಡಕೊಂಡರು. ಮನೆಯ ಗೇಟು ಕಿರ್ರೆಂದಿತು. ಎಲ್ಲರ ಕಿವಿಗಳು ಚುರುಕಾದವು. ಕಣ್ಣುಗಳಲ್ಲಿ ಪ್ರಶ್ನೆ ಕಂಡಿತು. ಮುಂಬಾಗಿಲ ಬಳಿ ಹೆಜ್ಜೆ ಸದ್ದು ಕೇಳಿಸಿತು. ನೆರಳು ಬಿದ್ದಂತಾಯಿತು, ಅಲ್ಲಿದ್ದವರ ನೋಟ ಅತ್ತ ಹರಿಯಿತು "ಮಾಧವೀ..." ಭವಾನಿ ಉದ್ಗಾರವೆತ್ತಿದಳು. ಶ್ರೀನಾಥ ಸರ್‍ರನೆ ತಿರುಗಿದ. ಹೊಸ್ತಿಲ ಬಳಿ ನಿಂತಿದ್ದವಳನ್ನು ಕಂಡ.

"ಅಲ್ಲೇ ನಿಂತ್ಕೋ..." ಶ್ರೀನಾಥ ಅಬ್ಬರಿಸಿದ. ಎರಡು ಹೆಜ್ಜೆ ಮುಂದೆ ಬಂದ ಸುಗುಣ ಗಂಡನ ಕಡೆ ನೋಡಿ ಹಾಗೇ ನಿಂತಳು.

"ಮಾಧವಿ ಎಲ್ಲಿಗೆ ಹೊರಟು ಹೋಗಿದ್ದೆ? ರಾಧಾ ಪೋನು ಮಾಡಿದ್ಲು... ನಾವೆಲ್ಲಾ ಎಷ್ಟು ಗಾಬರಿಯಾಗಿದ್ವು, ರಮಾಕಾಂತ ಅವಳ ಬಳಿ ಸಾರಿ ಕೇಳಿದ. ಅವಳ ಹಿಂದೆ ನಿಂತಿದ್ದ ಮನೋಜ ಅವಳ ಮಗ್ಗುಲಿಗೆ ಬಂದ ಅವನ ಕೈಯಲ್ಲಿದ್ದ ಹಾರಗಳನ್ನು ಎಲ್ಲರೂ ಕಂಡರು. ಅನಂತ ಹುಬ್ಬೇರಿಸಿದ. ವನಜ, ಮಾಧವಿ ಉಟ್ಟಿದ್ದ ಗರಿಗರಿಯಾದ ಸೀರೆಯ ಮೇಲೆ ಕಣ್ಣಾಡಿಸಿದಳು. ಕೊರಳಲ್ಲಿದ್ದ ಕರಿಮಣಿಯ ಮೇಲೆ ದೃಷ್ಟಿ ನಿಂತಿತು. ಶ್ರೀನಾಥ ಮತ್ತೆ ಕಿರುಚುವ ಮೊದಲು, ಅನಂತ ಅವನನ್ನು ಪಕ್ಕಕ್ಕೆ ಎಳೆದ.

"ಶ್ರೀನಾಥ ಅವರಿಬ್ರೂ ಮದ್ವೆಯಾಗಿದಾರೆ. ಸರಿಯಾಗಿ ನೋಡು" ಶ್ರೀನಾಥ ಅವರಿಬ್ಬರನ್ನೇ ಮತ್ತೆ ಮತ್ತೆ ನೋಡಿದ. ರಮಾಕಾಂತ ಯಾರಿಗೂ ಕಾಣದಂತೆ ಮನೋಜನಿಗೆ ಸಂಜ್ಞೆ ಮಾಡಿದ.

"ಇದೆಲ್ಲಾ ಏನು? ನಿಂಗೆ ಮಾಧವಿ ಎಲ್ಲಿ ಸಿಕ್ಕಿದ್ಲು? ಈ ಹಾರ ಯಾವುದು?

"ನಾವಿಬ್ರೂ ಮದುವೆಯಾಗಿದೀವಿ. ತಿಳಿಸಿ ಹೋಗೋಣ ಅಂತ ಬಂದಿದೀವಿ. ಮನಸ್ಸಿದ್ದರೆ ಆಶೀರ್ವಾದ ಮಾಡಿ" ಎಲ್ಲರನ್ನು ಕುರಿತು ಹೇಳಿದ.

"ಯಾರು ನೀನು! ನಿನಗ್ಯಾರು ಈ ಅಧಿಕಾರವನ್ನು ಕೊಟ್ರು? ನನ್ನ ಮಗಳನ್ನು ಅಪಹರಿಸಿಕೊಂಡು ಹೋಗಿ, ಮದುವೆ ಆಗಿದಾನಂತೆ. ಪೋಲಿಸ್ನೋರು ಬಂದು ಹಿಡಿದುಕೊಂಡು ಹೋದ್ರೆ ನಿನ್ನ ಅಪರಾಧ ಏನೂಂತ ಗೊತ್ತಾಗುತ್ತೆ"

"ನಾವು ಏನೂ ಅಪರಾಧ ಮಾಡಿಲ್ಲ. ಪ್ರೀತಿಸಿ ಮದುವೆಯಾಗಿದೀವಿ. ಇನ್ಮುಂದೆ ಇವಳು ನಿಮ್ಮ ಮಗಳು ಎನ್ನುವುದನ್ನು ಮರೆತು ಬಿಡಿ. ಮಾಧವಿ ನನ್ನ ಪತ್ನಿ."

"ನಮ್ಮ ಒಪ್ಪಿಗೆ ಇಲ್ಲದೇ ನೀವೀಬ್ರೂ ಹೇಗೆ ಮದುವೆ ಆದ್ರೀ?"

"ಮಾಧವಿ ಒಪ್ಪಿಗೆಯನ್ನು ಕೇಳಿದಳು. ನೀವು ಕೊಡಲಿಲ್ಲ. ನಾವಿಬ್ಬರೂ ಮೆಜಾರಿಟಿಗೆ ಬಂದಿದೀವಿ. ಕಾನೂನು ನಮಗೆ ಸಹಾಯಕವಾಗಿದೆ. ಯಾರೂ ಅಡ್ಡಿ ಪಡಿಸುವಂತಿಲ್ಲ"

"ಏನಂದೆ? ಇವಳನ್ನು ಹೆದರಿಸಿ, ಬೆದರಿಸಿ, ಇವಳನ್ನು ಕೆಡಿಸಿ, ನನಗೇ ಕಾನೂನು ಹೇಳಿಕೊಡ್ತೀಯಾ? ನಿನಗೆ ಏನು ಅಧಿಲಾರ ಇದೆ ಅಂತ ನನ್ನ ಮನೆಯ ಬಾಗಿಲಲ್ಲಿ ನಿಂತು ಮಾತನಾಡ್ತಿದೀಯ.... ಬಾಯ್ಮುಚ್ಚು.

"ಮಾಧವಿಯ ತಂದೆ ನೀವು, ಎನ್ನುವ ಗೌರವದಿಂದ ನಾನೂ ಮರ್‍ಯಾದೆ ಕೊಡುತ್ತಿದ್ದೀನಿ. ನಿಮಗಿಂತ ಹೆಚ್ಚಿನ ಅಧಿಕಾರ ಈಗ ನನಗೆ ನನ್ನ ಪತ್ನಿಯ ಮೇಲಿದೆ..."

"ಏನೋ, ನಂಗೇ ಪಾಠ ಹೇಳಿಕೊಡ್ತೀಯಾ! ಅಧಿಕಾರವಂತೆ ಅಧಿಕಾರ..."

"ಮನೋಜ ಇನ್ನು ಮಾತು ಸಾಕು, ನಿನಗೆ ಇಲ್ಲಿ ಮರ್‍ಯಾದೆ ಇಲ್ಲದೆ ಮೇಲೆ ನಾವು ಇಲ್ಲಿ ನಿಂತಿರುವುದು ಸರಿಯಲ್ಲ. ನಡೀ ನಿನ್ನ ಮನೆಗೆ ನನ್ನನ್ನು ಕರ್ಕೊಂಡು ಹೋಗು" ಎಂದು ಹೇಳಿ ಶ್ರೀನಾಥನ ಕಡೆ ತಿರುಗಿದಳು. ಅಪ್ಪಾ ನಾವಿಬ್ಬರೂ ಅಂಥಾ ದೊಡ್ಡ ತಪ್ಪನ್ನೇನೂ ಮಾಡಿಲ್ಲ. ಪ್ರೀತಿಸಿ ಮದುವೆಯಾಗಿದೀವಿ. ನಾನು ಇವನ ಪತ್ನಿ. ಆ ಮನೆಯ ಸೊಸೆ. ಇನ್ನೆಂದೂ ನಾನು ಈ ಮನೆಗೆ ಬರುವುದಿಲ್ಲ. ನಮ್ಮನ್ನು ಬೈಯುವ ಹಕ್ಕು ನಿಮಗಿಲ್ಲ"

"ಹೌದು ಸಾರ್, ಮಾಧವಿ ನನ್ನ ಪತ್ನಿ. ದೇವರ ಸಮ್ಮುಖದಲ್ಲಿ

ಮದುವೆಯಾಗಿದೀನಿ. ನಿಮಗೆ ತಿಳಿಸುವುದು ನಮ್ಮ ಧರ್ಮ ಅಂತೆನ್ನಿಸಿತು. ಪ್ರೀತಿಯಿಂದ ಕಳಿಸಿಕೊಡುವುದಾದರೆ ಕಳಿಸಿ ಕೊಡಿ. ಇಲ್ಲದಿದ್ದರೆ ನಮ್ಮ ತಂಟೆಗೆ ಬರ್ಬೇಡಿ..."

"ಏನೋ ತಂಟೆ, ತರ್ಲೆ ಅಂತ ಮಾತಾಡ್ತೀಯಾ. ಮಹಾಧರ್ಮ ತಿಳಿದಿರೋನು! ನೀನು ಎಂಥೋನು ಅಂತ ಈಗ ಗೊತ್ತಾಗುತ್ತೆ... ಪೋಲೀಸರು ಬಂದ್ಮೇಲೆ" ಶ್ರೀನಾಥ ಅವನ ಮೈಮೇಲೆ ಏರಿಹೋದ. ರಮಾಕಾಂತ ಅನಂತ ಇಬ್ಬರೂ ಅವನನ್ನು ಎಳೆದರು.

"ಇಷ್ಟು ರಾಂಗ್ ಆಗ್ಬೇಡ ಶ್ರೀನಾಥ. ಈಗ ಇಬ್ಬರ ಮದುವೆ ನಡೆದುಹೋಗಿದೆ. ಕಾನೂನು ಅವರ ಕಡಗೇ ಇದೆ. ನೀನು ಕೆಟ್ಟವನಾಗ್ತೀಯ. ಅದರ ಬದಲು ಇಬ್ಬರಿಗೂ ಗೌರವವಾಗಿ ಸಂಸಾರ ಮಾಡಲು ಬಿಟ್ಟುಬಿಡು. ಯಾರ ಮನೆಯಲ್ಲೋ ಅವಿತಿಟ್ಟುಕೊಂಡು ಮಾಧವಿ ತಾಯಿಯಾದರೆ. ಏನು ಮರ್ಯಾದೆ ಬರುತ್ತೆ. ಮೇಲೆ ಕುಳಿತು ನೋಡುತ್ತಿರುವ ಅಮ್ಮ ಅಪ್ಪನ ಆತ್ಮಕ್ಕೆ ಎಷ್ಟು ಹಿಂಸೆಯಾಗುವುದಿಲ್ಲ!" ರಮಾಕಾಂತನೆಂದ

"ಹೌದು ಶ್ರೀನಾಥ. ಅಮ್ಮನ ಮುದ್ದಿನ ಮೊಮ್ಮಗಳು ನಮ್ಮ ಮಾಧವಿ. ಅಮ್ಮನ ಇಚ್ಛೆ, ದೇವರ ಇಚ್ಛೆ ಇದೇ ಆಗಿತ್ತು ಅಂತ ಕಾಣುತ್ತೆ. ಈಗಲಾದರೂ ಸುಮ್ಮನಾಗು" ಅನಂತನೂ ದನಿಗೂಡಿಸಿದ.

"ಹೌದು ರೀ, ಈ ಪ್ರಕರಣ ಇಲ್ಲಗೇ ಮುಗಿಯಲಿ. ಸುಮ್ಮನೇ ರಂಪ ರಾದ್ಧಾಂತ ಯಾಕೆ! ನಮ್ಮ ಒಪ್ಪಿಗೆ ಇಲ್ಲದಿದ್ದರೂ, ಎಲ್ಲಾ ಮುಗಿದಿದೆ. ಈಗ ಏನು ಆಡಿದರೆ ಏನು ಪ್ರಯೋಜನ." ಸುಗುಣ ಗಂಡನಿಗೆ ಹೇಳಿದಳು.

"ನೀನು ಇವರ ಕಡೆಗೆ ಸೇರಿಬಿಟ್ಟೆಯಾ!" ಹರಿತವಾದ ದೃಷ್ಟಿಯನ್ನು ಎಸೆದ.

"ಹಾಗಲ್ಲ ಶ್ರೀನಾಥ. ಈ ಮದುವೆಗೆ ವಿರೋಧ. ನಮ್ಮ ಮನೆಯವರಿಂದ ಮಾತ್ರ, ಅವರ ಮನೆಯವರ ವಿರೋಧ ಇಲ್ಲ. ಆ ಮನೆಗೆ ಮಾಧವಿ ಹೋಗೇ ಹೋಗ್ತಾಳೆ. ನಿನ್ನ ಇಷ್ಟ ಇರಲಿ ಇಲ್ಲದಿರಲಿ. ಆ ಮನೆಗೆ ಸೊಸೆಯಾಗುತ್ತಾಳೆ. ಆದರೆ, ನೀನು ಮಗಳನ್ನು ಕಳೆದುಕೊಳ್ಳುತ್ತೀಯಾ. ಆ ಕೊರಗು ನಿನ್ನಲ್ಲಿ ಸದಾಕಾಲ ಉಳಿಯುತ್ತದೆ" ಮಾಧವಿ ನೆಮ್ಮದಿಯಿಂದ ಬಾಳಲಿ ಅಂತ ನೀನು ಬಯಸುವುದಿಲ್ಲವಾ? ಹಠದಿಂದ ಏನು ಸಾಧಿಸ್ತೀಯ?"

"ಸರಿ ಯಾರು ಏನು ಬೇಕಾದರೂ ನಿರ್ಧರಿಸಿ. ಈ ಒಂದು ದಿನ ಮಾಧವಿ ಇಲ್ಲಿರಲಿ, ನಿಮ್ಮ ಮಗಳಾಗಿ ಅಲ್ಲ; ನನ್ನ ಪತ್ನಿಯಾಗಿ. ಆ ಮನೆಯಲ್ಲಿ ನನ್ನ ಪತ್ನಿಗೆ ಸ್ವಾಗತ ಇದ್ದೇ ಇದೆ, ನಾಳೆ ದಿನ ನಮ್ಮ ಮನೆಯವರು ಕುಟುಂಬ ಸಮೇತರಾಗಿ ಬಂದು, ಸಾಂಪ್ರದಾಯಕವಾಗಿ ಕರೆದುಕೊಂಡು ಹೋಗುತ್ತೇವೆ"

ಮನೋಜ ದೃಢವಾಗಿ ಹೇಳಿದ.

"ಈಗಲೇ ಕರ್‍ಕೊಂಡು ಹೋಗು, ಅವಳು ಇಲ್ಲಿ ಒಂದುಗಳಿಗೆಯೂ ಇರೋದು ಬೇಡ"

"ಅದು ನಿಮಗೇ ಅವಮಾನ. ಮಗಳು ಮನೆ ಬಿಟ್ಟು ಯಾರ ಹಿಂದೆಯೋ ಓಡಿ ಹೋದಳು, ಅನ್ನುವ ಅಪಖ್ಯಾತಿ ನಿಮ್ಮ ಮನೆಗೆ ಬರುತ್ತದೆ ಅಷ್ಟೇ" ರಮಾಕಾಂತನ ಕಡೆ ನೋಡಿದ.

"ನೀನು ನನಗೆ ತಿಳುವಳಿಕೆ ಹೇಳಬೇಕಾಗಿಲ್ಲ, ಇಲ್ಲಿಂದ ಹೊರಟುಹೋಗಿ"

"ಮನೆಬಾಗಿಲಲ್ಲಿ ಮಹಾಲಕ್ಷ್ಮಿಯಂತೆ ನಿಂತಿರುವ ಮಗಳಿಗೆ ಅವಮಾನ ಮಾಡ್ಬೇಡ ಶ್ರೀನಾಥ. ಪಲ್ಲವಿಗೆ ಮದುವೆ ಆಗ್ಲಿಲ್ಲವಲ್ಲ, ಅಂತ ನಾವಿಬ್ಬರೂ ಪರಿತಾಪ ಪಡ್ತಿದೀವಿ. ದೇವರ ನಿಯಮ ಇದೇ ಆಗಿತ್ತು ಅಂತ ಈಗ್ಲಾದ್ರೂ ತಿಳ್ಕೋ..." ಅನಂತ ಶ್ರೀನಾಥನ ಕೈಹಿಡಿದು ಹೇಳಿದ.

ಶ್ರೀನಾಥ ದಿಕ್ಕು ತೋಚದನವಂತೆ ಎಲ್ಲರ ಕಡೆ ನೋಡಿದ. ಮುಖದಲ್ಲಿ ಸಿಟ್ಟು ಎದ್ದು ಕುಣಿಯುತ್ತಿತ್ತು. ಅಷ್ಟರಲ್ಲಿ ಮನೋಜನ ಮೊಬೈಲ್ ರಿಂಗಾಗಿತ್ತು. ಅವನ ಅಣ್ಣ ಪೋನು ಮಾಡಿದ್ದ. "ಮನೋಜ್ ಎಲ್ಲಿದ್ದೀಯಾ! ಪೋಲಿಸರು ನಿನ್ನನ್ನು ಹುಡಕ್ಕೊಂಡು ಮನೆಗೆ ಬಂದಿದ್ರಂತೆ. ಅಪ್ಪಾ ಗಾಬರಿಯಾಗಿದಾರೆ ಬೇಗ ಬಾ" ಎಂದಿದ್ದ.

"ನಾನು ಇಲ್ಲಿ ಮಾಧವಿಯ ಮನೇಲಿದೀನಿ. ನೀನು ಅತ್ತಿಗೆ ಇಬ್ಬರೂ ಈಗಲೇ ಇಲ್ಲಿಗೆ ಬನ್ನಿ. ಹಾಗೇ ಪೋಲಿಸರಿಗೆ ನಾನು ಇಲ್ಲಿದೀನಿ ಅಂತ ಹೇಳಿಬಿಡು" ಅವನ ಮಾತು ಎಲ್ಲರಿಗೂ ಕೇಳಿಸಿತ್ತು. ಆದರೂ ಅನಂತರ ಕಡ ತಿರುಗಿ ನುಡಿದ "ನನ್ನ ಅಣ್ಣ ಅತ್ತಿಗೆ ಇಲ್ಲಿಗೆ ಬರ್ತಾರೆ. ನಾವಿಬ್ಬರೂ ಅವರ ಜೊತೆಯಲ್ಲಿ ನಮ್ಮ ಮನೆಗೆ ಹೋಗ್ತೀವಿ. ಪೋಲಿಸರು ಸಾಕ್ಷಿಯಾಗ್ತಾರೆ"

"ಈಗ ಹಾಗೆ ದಿಢೀರನೇ ಅವರುಗಳು ಬರುವುದು ಬೇಡ. ಸಂಪ್ರದಾಯದ ಪ್ರಕಾರ ನಾವುಗಳೇ ನಿಮ್ಮ ಮನೆಗೆ ಬಂದು ಮಾತಾಡ್ತೀವಿ. ಒಂದು ಒಳ್ಳೆಯ ದಿನವನ್ನು ನೋಡಿ ಮಾಧವಿಯನ್ನು ಮನೆ ತುಂಬಿಸಿಕೊಡ್ತೀವಿ" ಅನಂತ ಶ್ರೀನಾಥನ ಕಡೆ ನೋಡುತ್ತಾ ಹೇಳಿದ. ಯಾಕೋ ಏನೋ ಶ್ರೀನಾಥ ಸುಸ್ತಾದವನಂತೆ ಕುಳಿತಿದ್ದ. ಅವನ ಮೌನ ಹೆದರಿಸುವಂತಿದ್ದರೂ, ಸಮ್ಮತಿಯ ಲಕ್ಷಣವೆಂದು ರಮಾಕಾಂತ ಭಾವಿಸಿದ. ಭವಾನಿಯೂ ಮುಂದೆ ಬಂದಳು, ಶ್ರೀನಾಥ ಎಲ್ಲರ ಕಡೆಯೂ ನೋಡಿದ. ಅವನ ಮುಖ ವ್ಯಥೆಯಿಂದ ಕೂಡಿತ್ತು, ತಡೆ ತಡೆದು ಹೇಳಿದ.

"ಯಾರಿಗೂ ಇವರಿಬ್ಬರ ತಪ್ಪು ಕಾಣುವುದೇ ಇಲ್ಲ. ಎಲ್ಲರ ಅವರಿಬ್ಬರ ಪರವಾಗಿಯೇ ಮಾತನಾಡ್ತೀರಿ. ಈಗಲೂ ನಾನು ಮನಃಪೂರ್ವಕವಾಗಿ

ಒಪ್ಪಿಗೆಯನ್ನು ಕೊಡುತ್ತಿಲ್ಲ. ನಾನು ಯಾರ ಮನೆಗೂ ಹೋಗುವುದಿಲ್ಲ. ಯಾರ ಹತ್ತಿರ ಮಾತನ್ನಾಡುವುದಿಲ್ಲ. ನಾನು ಮಾಧವಿಯನ್ನು ಎಂದಿಗೂ ಕ್ಷಮಿಸುವುದಿಲ್ಲ. ಅಮ್ಮಾ ಕನಸ್ನಲ್ಲಿ ಬಂದು ಕೇಳಿದ್ರೆ ನಾನು ಏನು ಉತ್ತರ ಹೇಳ್ಲಿ?"

"ಹೌದು ಶ್ರೀನಾಥ, ನಿನ್ನ ವ್ಯಥೆ ನಮಗೆ ಅರ್ಥವಾಗುತ್ತೆ. ಅಮ್ಮನಿಗೆ ತಿಳಿಯದ್ದು ಏನೂ ಇಲ್ಲ. ಅಮ್ಮನ ಆಶೀರ್ವಾದ ಇದೆ ಅಂತಲೇ ಭಾವಿಸು. ಮನೋಜನ ಮನೆಯವರ ಎದುರಿಗೆ ನಾವು ಸಣ್ಣವರಾಗೋದು ಬೇಡ. ಅವರಿಗೆ ಸರಿ ಸಮಾನರಾಗಿರೋಣ. ಆಗಲೇ ಮಾಧವಿಗೆ ಆ ಮನೆಯಲ್ಲಿ ಸರಿಯಾದ ಸ್ಥಾನಮಾನ ಸಿಗೋದು. ಇಲ್ಲದಿದ್ರೆ, ಇದೊಂದು ಕಪ್ಪು ಚುಕ್ಕೆ ಉಳಿದುಬಿಡುತ್ತೆ"

"ಯಾರು ಏನೇ ಹೇಳಲಿ, ಈಗ ನನ್ನ ಮನಸ್ಸು ಒಡಂಬಡುತ್ತಿಲ್ಲ. ನೀವುಗಳು ಯಾರು ಏನುಬೇಕಾದ್ರೂ ಮಾಡ್ಕೊಳ್ಳಿ, ನಾನು ಅಡ್ಡಿ ಪಡಿಸುವುದಿಲ್ಲ" ಅನಂತ, ರಮಕಾಂತ ಮುಖ ಮುಖ ನೋಡಿಕೊಂಡರು. ಭವಾನಿ ಮನೋಜನಿಗೆ ಸಂಜ್ಞೆ ಮಾಡಿದಳು. ಅವನು ಶ್ರೀನಾಥನಿಗೆ ಕೈ ಮುಗಿದ,

"ಥ್ಯಾಂಕ್ ಯೂ ಸಾರ್. ನೀವೆಲ್ಲಿ ನಿಮ್ಮ ಹಠವನ್ನೇ ಸಾಧಿಸ್ತೀರೋ ಅಂತ ಭಯ ಆಗಿತ್ತು. ಥ್ಯಾಂಕ್ ಯೂ ವೆರಿಮಚ್ ಸಾರ್."

"ಅಣ್ಣಾ ಈ ಹುಡುಗನಿಗೆ ಮಾತಾಡ್ಬೇಡ ಅಂತ ಹೇಳು. ಅವನಿನ್ನೂ ಈ ಮನೆಯ ಅಳಿಯನಾಗಿಲ್ಲ" ಅಣ್ಣತಮ್ಮಂದಿರು ಅವನಿಗೆ ಸುಮ್ಮನಿರುವಂತೆ ಸಂಜ್ಞೆಮಾಡಿದರು.

"ಈಗ ನೀನು ಮನೆಗೆ ಹೋಗು. ಮಾಧವಿ ಇಲ್ಲಿರಲಿ, ಸಾಯಂಕಾಲ ಸಂಪ್ರದಾಯದ ಪ್ರಕಾರ ಅಣ್ಣ ಅತ್ತಿಗೆ ನಿಮ್ಮ ಮನೆಗೆ ಬರುತ್ತಾರೆ" ಎಂದು ನುಡಿದು ರಮಾಕಾಂತ ಅತ್ತಿಗೆಯ ಕಡೆ ನೋಡಿ ಸಮ್ಮತಿಯನ್ನು ಕಣ್ಣಿನಲ್ಲೇ ಬೇಡಿದ. ವನಜ ತಲೆಯಾಡಿಸಿದಳು. ಮನೋಜ, ಮಾಧವಿಯ ಕೈ ಹಿಡಿದ.

"ಇದು ನೀನು ಹುಟ್ಟಿ ಬೆಳೆದ ಮನೆ. ಇಲ್ಲಿಂದ ನೀನು ನಮ್ಮ ಮನೆಗೆ ಬರುವುದು ಸಂಪ್ರದಾಯ ಆ ಗಳಿಗೆಗಾಗಿ ನಾನು ಕಾಯುತ್ತಿದ್ದೇನೆ. ನಿನ್ನನ್ನು ಇವರೆಲ್ಲರ ಮೇಲೆ ನಂಬಿಕೆಯುನ್ನಿಟ್ಟು ಹೋಗುತ್ತಿದ್ದೇನೆ. ನೀನು ನಿರಾಂತಕವಾಗಿರು" ಎಂದು ಹೇಳಿ ಎಲ್ಲರಿಗೂ ಕೈ ಮುಗಿದು ಹೊರಬಿದ್ದ ಅವನತ್ತ ಮರೆಯಾದ ಕೂಡಲೇ ಸುಗುಣ ಮಗಳ ಬಳಿಗೆ ಧಾವಿಸಿ ಬಂದಳು. ಕೆನ್ನೆಗೆ ಛಟೀರನೇ ಹೊಡೆದಳು.

"ಯಾಕೆ ಹೀಗೆ ಅಪಮಾನ ಮಾಡಿ ಕೊಲ್ತಿದೀಯೆ! ನಾವೇನು ಕಡಿಮೆ ಮಾಡಿದ್ದೇವು ನಿನಗೆ! ಹೀಗೆ ಮಾಡುವ ಬದಲು. ನೀನೂ ಸತ್ತು ಹೋಗಿದದ್ದಿದ್ದರೆ, ನಿನ್ನ ಪೋಟೋಕ್ಕೂ ಹೂವಿನ ಹಾರ ಹಾಕ್ತಿದೆ. ನಿನಗೂ ತಿಥಿ ಮಾಡ್ತಿದ್ದೆವು,"

ಮತ್ತೊಂದು ಏಟು ಹಾಕಿದಳು ಭವಾನಿ ಸರ್‍ರನೆ ಬಂದು ಮಾಧವಿಯನ್ನು ತನ್ನೆಡೆಗೆ ಎಳೆದುಕೊಂಡಳು.

"ಛೀ ತಾಯಿಯಾಗಿ ಇಂಥಾ ಮಾತನ್ನಾಡ್ತೀಯಲ್ಲ. ಮದುಮಗಳಾಗಿ ನಿಂತಿರುವವಳಿಗೆ ಆಶೀರ್ವಾದ ಮಾಡುವ ಬದಲು ಆಡುವ ಮಾತಾ ಇದು?"

"ಅಕ್ಕಾ ನಿಮಗ್ಯಾಕೆ ಇನ್ನು ಇವಳ ತಪ್ಪು ಕಾಣ್ತಿಲ್ಲ. ಮನೆಯವರೆಲ್ಲಾ ಬೊಟ್ಟು ಮಾಡಿ ಬೆರಗಾಗಿ ನೋಡುವ ಸ್ಥಿತಿಯನ್ನು ತಂದಿಟ್ಟಳಲ್ಲ. ನಾವೇನು ಮದುವೆ ಮಾಡ್ತಿರ್ಲಿಲ್ವಾ? ಇವಳು ನನ್ನ ಮಗಳಲ್ಲ ಶತ್ರು. ನೀನೂ ಅವನ ಹಿಂದೆಯೇ ಹೋಗ್ಬೇಕಾಗಿತ್ತು. ಇಲ್ಯಾಕೆ ನಿಂತೆ ಹರಿಹಾಯ್ದಳು.

"ನೀನೂ ಶ್ರೀನಾಥನ ಥರವೇ ಮಾತಾಡ್ತೀಯಲ್ಲ. ಸುಗುಣ ನೀನು ತಾಯಿ, ನಿನ್ನ ಗಂಡನಿಗೆ ಕಾಣದಂತೆ ನಿನ್ನ ಮಗಳ ತಪ್ಪುಗಳನ್ನೆಷ್ಟನ್ನೋ ಮುಚ್ಚಿಟ್ಟೇದೀಯ. ಈಗ ಶ್ರೀನಾಥನೇ ಸಮಾಧನ ಮಾಡ್ಕೊಂಡಿದಾನೆ. ನೀನು ಶುರುಮಾಡ್ಬೇಡ... ಮುಂದಿನ ಕೆಲಸಗಳಿಗೆ ಗಮನಕೊಡು"

"ಮುಂದಿನ ಕೆಲಸ ಯಾವುದರಲ್ಲೂ ನನಗೆ ಆಸಕ್ತಿ ಇಲ್ಲ. ನೀವುಗಳು ಏನಾದ್ರೂ ಮಾಡ್ಕೊಳ್ಳಿ. ನನಗೂ ಇವಳಿಗೂ ಸಂಬಂಧವಿಲ್ಲ"

"ಸರಿ ಇದೇ ನಿನ್ನ ಮಾತಾದ್ರೇ ಮಾಧವಿ ಇವತ್ತಿಂದ ನನ್ನ ಮಗಳು. ಗಂಡನ ಮನೆಗೆ ಹೋಗುವವರೆಗೂ ಇವಳು ನಮ್ಮ ಮನೇಲಿರ್ತಾಳೆ. ಹೋಗು ಮಾಧವಿ. ನಮ್ಮ ಮನೆಗೆ ಹೋಗಿ ರೆಸ್ಟ್ ತಗೋ, ನಿನಗೂ ಸುಸ್ತಾಗಿರಬಹುದು. ಪಲ್ಲವಿ ಇವಳನ್ನು ಕರ್ಕೊಂಡು ಹೋಗು, ಇವಳ ಜತೇಲೇ ಇರು." ಎಂದು ಹೇಳಿ ಇಬ್ಬರನ್ನು ಕಳಿಸಿದಳು. ಸುಗುಣ ಅಳತೊಡಗಿದಳು. ನಿನ್ನ ಕೋಪವನ್ನಾ ತೋರಿಸಿಕೊಂಡಾಯ್ತಲ್ಲ. ಅತ್ತು ಹೃದಯವನ್ನು ಹಗುರುಮಾಡ್ಕೋ. ಆದರೆ ಮಾಧವಿಯ ಮೇಲೆ ಮತ್ತೆಂದೂ ಕೈ ಮಾಡಬೇಡ. ಅದು ಅಪರಾಧವಾಗುತ್ತೆ" ಸುಗುಣಳಿಗೆ ಹೇಳಿದಳು.

"ಎಲ್ರೂ ನಮಗೇ ತಿಳುವಳಿಕೆ ಹೇಳ್ತೀರಿ. ತಂದೆ ತಾಯಿಗಳಿಗೆ ಎಂಥಾ ಶಿಕ್ಷೆ ಕೊಟ್ಟುಬಿಟ್ಟಳು! ನಗೆಪಾಟಲು ಆಗಿ ಹೋಯ್ತು ನಮ್ಮ ಸಂಸಾರ...."

"ಹಾಗ್ಯಾಕೆ ಅಂದ್ಕೋತೀಯ. ಅದನ್ನು ಸರಿಪಡಿಸೋಣ....."

"ಏನು ಸರಿ ಮಾಡ್ತೀರಿ! ಮೊದಲು ಮದುವೆ, ನಂತರ ಮಗು ಆಗ್ಬೇಕಾಗಿತ್ತು. ಈಗ ಇಲ್ಲಿ ತಿರುಗಾ ಮುರುಗ... ಇದನ್ನು ಹೇಗೆ ಸರಿ ಮಾಡೋದು?

"ಸರಿ ಮಾಡಲೇಬೇಕಾಗಿದೆ, ಅವಿವೇಕವೋ, ಆಕಸ್ಮಿಕವೋ, ಆಗಬಾರದ್ದು ಆಗಿ ಹೋಗಿದೆ. ಇಲ್ಲದಿದ್ದರೆ ಈ ವರ್ಷದಲ್ಲೇ ಮಾಧವಿಯ ಮದುವೆ ನೆರವೇರುತ್ತಿತ್ತು. ಅತ್ತೆಯವರ ಅಪೇಕ್ಷೆ ಇದೇ ಆಗಿತ್ತು ಅಂತ ಭಾವಿಸೋಣ"

"ಇನ್ನು ಮಾತು ಸಾಕು. ಯಾರೂ ಈ ಸುದ್ಧಿಯನ್ನು ಮತ್ತೆ ಮತ್ತೆ

ಆಡ್ಬೇಡಿ" ಶ್ರೀನಾಥ ವಿರುದ್ಧನಿಯಲ್ಲಿ ಹೇಳಿ, ಅಲ್ಲಿಂದ ಎದ್ದು ಹೋದ. ಸುಗುಣ ಕಣ್ಣೊರೆಸಿಕೊಂಡು ಗಂಡನ ಹಿಂದೆ ನಡೆದಳು.

"ಅಕ್ಕಾ, ನೀವು ಭಾವ, ಇವತ್ತು ಸಾಯಂಕಾರಲವೇ ಅವರ ಮನೆಗೆ ನೀವುಗಳು ಹೋಗಿ, ಮದುವೆಯನ್ನು ನಿಶ್ಚಯಿಸಿಕೊಂಡು ಬನ್ನಿ. ಹೂವು ಹಣ್ಣುಗಳನ್ನು ಮರೆಯದೇ ತೆಗೆದುಕೊಂಡು ಹೋಗಿ" ಭವಾನಿ ವನಜಳಿಗೆ ಮತ್ತೆ ಹೇಳಿದಳು.

"ನೀವಿಬ್ಬರೇ ಯಾಕೆ ಹೋಗ್ಬಾರ್ದು! ಹೇಗೂ ಮಾಧವಿ, ಈಗ ನಿಮ್ಮ ಮಗಳಾಗಿ ನಿನ್ನ ಮೇಲಿದಾಳಲ್ಲ!" ವನಜ ವ್ಯಂಗ್ಯವನ್ನಾಡದೇ ಬಿಡಲಿಲ್ಲ

"ನೀನು ಈಗ ಕೊಂಕು ಮಾತನಾಡ್ಬೇಡ. ಈಗ ಮನೆಗೆ ಹಿರಿಯರು ನಾವು. ನಮ್ಮ ಹಿರಿತನವನ್ನು ನಾವು ಕಾಪಾಡ್ಕೋ ಬೇಕು" ಅನಂತ ಹೆಂಡತಿಯ ಮೇಲೆ ಜಬರ್ದಸ್ತು ತೋರಿದ.

"ಸರಿಯಾಗಿ ಮಾತಾಡಿದ್ರಿ ಭಾವ. ನಿನ್ನ ಗಂಡನಷ್ಟು ಜಾಣನಲ್ಲ. ನನಗೆ ಏನೂ ಗೊತ್ತಿಲ್ಲ. ಅಂಬ ಭಾವಿಸ್ಬೇಡ ಭವಾನಿ... ಆದರೂ ನಾನು ಮಾತಾಡದೇ ಸುಮ್ಮನಿದೀನಿ"

"ಥ್ಯಾಂಕ್ಸ್ ಅಕ್ಕಾ... ಈಗ ನೀವು ಹಿರಿಯಕ್ಕ ಆದದ್ದು ಸಾರ್ಥಕ" ಭವಾನಿಯೂ ತಿರುಗಿಸಿ ನುಡಿದಳು. ರಮಾಕಾಂತ ಸಾಕು ಎನ್ನುವಂತೆ ಹೆಂಡತಿಗೆ ಸಂಜ್ಞೆಯಲ್ಲಿ ತಿಳಿಸಿದ.

* * *

ಅದೇ ಸಾಯಂಕಾಲ ಅನಂತ ವನಜಳೊಡನೆ, ಮನೋಜನ ಮನೆಗೆ ಮಾತುಕತೆಗಳನ್ನಾಡಲೆಂದು ಹೊರಟ. ಮರೆಯದೇ ಹೂವು ಹಣ್ಣುಗಳನ್ನು ತೆಗೆದುಕೊಂಡರು. ಸುಗುಣ ತಿಳಿದರೂ ತಿಳಿಯದವಳಂತೆ ಸುಮ್ಮನಿದ್ದಳು. ಭವಾನಿ ಸಂಭ್ರಮದಿಂದ ಶುಭವನ್ನು ಹಾರೈಸಿದಳು. ಮನೋಜನ ಅಣ್ಣ ಅತ್ತಿಗೆ, ಸಂತಸದಿಂದ ಇವರಿಬ್ಬರನ್ನು ಸ್ವಾಗತಿಸಿದರು. ಮನೋಜ ಪರಸ್ಪರ ಪರಿಚಯ ಮಾಡಿಕೊಟ್ಟ. ಅವನ ಕಸಿನ್ ವಿನೋದನೂ ಅಲ್ಲಿದ್ದ. ಮನೆಯ ಮುಂದೆ ನಿಂತಿದ್ದ ಕಾರು, ಬೈಕ್‌ಗಳು ಹಾಗೂ ಮನೆಯ ಅಂದಚೆಂದ, ಅವರು ಅನುಕೂಲಸ್ಥರು ಎಂದು ಸಾರಿ ಹೇಳುತ್ತಿತ್ತು. ವನಜ ಸಂಕೋಚಗೊಂಡಿದ್ದಳು. ಪಡಸಾಲೆಯಲ್ಲಿದ್ದ ತೂಗುಯ್ಯಾಲೆ ಮೇಲೆ ಕುಳಿತಿದ್ದ ಮನೋಜನ ತಂದೆ ಇಬ್ಬರನ್ನು ಸ್ವಾಗತಿಸಿದರು. ವನಜ ಹೂವು ಹಣ್ಣುಗಳನ್ನು ಅವನ ಅತ್ತಿಗೆಯ ಕೈಯಲ್ಲಿಟ್ಟಳು. ಅವನ ಅಣ್ಣ ವಿನಯದಿಂದ ಮಾತನಾಡಿಸಿದ. ಅನಂತ ಸಂತಸಗೊಂಡಿದ್ದ.

"ಕಡೆಗೂ ನಿಮ್ಮ ಕಡೆಯಿಂದ ಒಪ್ಪಿಗೆ ಸಿಕ್ಕಿದ್ದು ನಮಗೆ ತುಂಬಾ

ಸಂತೋಷವಾಗಿದೆ. ಆದಷ್ಟು ಬೇಗ ಮಾಧವಿಯನ್ನು ನಮ್ಮ ಮನೆಗೆ ಕಳಿಸಿಕೊಡಿ" ತಂದೆ ಹೇಳಿದರು.

"ಅದೇ ವಿಷಯವನ್ನು ಮಾತನಾಡಲು ಬಂದಿದೀವಿ. ಮದುವೆ ಯಾವ ಸಂಪ್ರದಾಯದ ಪ್ರಕಾರ ಮಾಡಿಕೊಡ್ಬೇಕು!"

"ನಮ್ಮದೇ ಸಂಪ್ರದಾಯ ಆಗಬೇಕು ಎಂಬ ಹಠ ನಮಗಿಲ್ಲ. ಅದನ್ನೆಲ್ಲಾ ಅನುಸರಿಸಲು ನನ್ನ ಪತ್ನಿ ಬದುಕಿಲ್ಲ. ನನ್ನ ಹಿರಿಸೊಸೆಯೂ, ಬೇರೆ ಪಂಗಡದಿಂದ ಬಂದವಳು. ನಿಮಗೆ ಹೇಗೆ ಇಷ್ಟವೋ ಹಾಗೇ ಮಾಡಿಕೊಡಿ" ಆತನ ನಯವಾಗಿ ಮಾತನಾಡಿದಾಗ ಅನಂತ ತಲೆದೂಗಿದ.

"ಈಗಾಗ್ಲೇ, ದೇವಸ್ಥಾನದಲ್ಲಿ ಇಬ್ಬರೂ ಮದುವೆಯಾಗಿದಾರೆ. ಆ ವಿಷಯ ನಮಗೆ ತಿಳಿದಿತ್ತು. ಆದ್ದರಿಂದ ರಿಸೆಪ್ಷನ್ ಇಟ್ಟುಕೊಂಡರೂ ಸಾಕು. ನಿಮಗೆ ಅದೂ ಕಷ್ಟವೆನಿಸಿದರೆ, ನಾವೇ ವ್ಯವಸ್ಥೆ ಮಾಡುತ್ತೇವೆ, ಯಾಕೆಂದರೆ ಈಗಾಗಲೇ ನಿಮಗೆ ಸಾಕಷ್ಟು ಖರ್ಚಾಗಿದೆ, ನಿಮ್ಮ ತಾಯಿಯ ಶ್ರಾದ್ಧಕ್ಕೆ, ಗೋದಾನಕ್ಕೆ ಸಾಕಷ್ಟು ಖರ್ಚು ಮಾಡಿದೀರಿ. ನಮ್ಮ ಮನೆಯಲ್ಲಿ ಇದೇ ಕಡೇ ಮದುವೆ. ನಮ್ಮ ಕಡೆಯ ಬಂಧು ಬಳಗ ಜಾಸ್ತಿ. ನಿಮ್ಮ ಕೈಲಿ ಖರ್ಚು ಮಾಡಿಸುವುದು ಸರಿಯಲ್ಲ ಅಂತ ನಮಗೆ ಅನ್ನಿಸುತ್ತೆ" ಆತ ಮತ್ತೆ ನುಡಿದಾಗ ಅನಂತ ಮೂಕನಾದ. ಇಂಥ ಸುಸಂಸ್ಕೃತ ಶ್ರೀಮಂತರ ಮನೆ ಹುಡುಗನೊಬ್ಬ ನಮ್ಮ ಪಲ್ಲವಿಗೂ ಸಿಗಬಾರದೇ ಎಂದು ವನಜ ಚಿಂತಿಸುತ್ತಿದ್ದಳು.

"ನಿಮ್ಮ ತಮ್ಮನ ಬೇಸರ ಏನು ಅಂತ ನಮಗೆ ಅರ್ಥವಾಗುತ್ತೆ. ಮಕ್ಕಳಿಬ್ಬರೂ ದುಡುಕಿ ಬಿಟ್ಟಿದ್ದಾರೆ. ಹೀಗಾಗುತ್ತೆ ಅಂತ ಯಾರಿಗೂ ಗೊತ್ತಿರಲಿಲ್ಲ. ನನ್ನ ಸೊಸೆಯೊಂದಿಗೆ, ಈ ಮನೆಗೆ ಬರಲಿರುವ ಮಗುವನ್ನು ನಾವು ಸಂಭ್ರಮದಿಂದ ಬರಮಾಡಿಕೊಳ್ತೀವಿ. ಆದ್ದರಿಂದ ಈ ಸಮಯದಲ್ಲಿ ಮದುವೆ ಹೇಗೆ ನಡೆಯಬೇಕು ಎನ್ನುವುದು ಮುಖ್ಯವಲ್ಲ. ಆದಷ್ಟು ಬೇಗ ನಮ್ಮ ಸೊಸೆಯನ್ನು ಮನೆಗೆ ಕಳಿಸಿ ಕೊಡಿ" ಆತನ ನುಡಿಗಳು ಅನಂತನನ್ನು ಮೆಚ್ಚಿಸಿದ್ದವು. ಗಂಡಿನವರಾಗಿ, ಯಾವ ದರ್ಪವನ್ನು ಪ್ರದರ್ಶಿಸದ ಎಷ್ಟು ಒಳ್ಳೆಯ ವ್ಯಕ್ತಿಗಳೂ ಇರುವುದು ಸಾಧ್ಯವೇ? ಎಂದು ಅವನು ಯೋಚಿಸುತ್ತಿದ್ದ.

"ಸರಿ ನೀವುಗಳು ಇಷ್ಟು ಉದಾರಭಾವನೆಯಿಂದ ಇರುವಾಗ, ಯಾರ ಆತಂಕವೂ ನಮಗಿಲ್ಲ. ನನ್ನ ತಮ್ಮನೊಡನೆ ಮಾತನಾಡಿ, ಒಂದು ಒಳ್ಳೆಯ ದಿನವನ್ನು ಗೊತ್ತುಮಾಡಿ, ಆರತಕ್ಷತೆಯನ್ನು ಇಟ್ಟುಕೊಳ್ತೀವಿ. ಯಾಕೆಂದರೆ ನೆಂಟರಿಷ್ಟರು ಆಕ್ಷೇಪಣೆ ಮಾಡಬಾರದು ನಮಗೆ ಸ್ವಲ್ಪ ಸಮಯ ಬೇಕು ಎಂದು ಹೇಳಿ ಕೈ ಮುಗಿದು ಎದ್ದ.

ಮೊದಲ ಬಾರಿಗೆ ನಮ್ಮ ಮನೆಗೆ ಬಂದಿದೀರಿ ನಮ್ಮ ಆತಿಥ್ಯವನ್ನು

ಸ್ವೀಕರಿಸಿ, ಎಂದು ಹೇಳಿ ಹಾಲು, ಹಣ್ಣು ಸಿಹಿ ತಿಂಡಿಯನ್ನು ಕೊಟ್ಟು ಉಪಚರಿಸಿ ಕಳಿಸಿಕೊಟ್ಟರು. ವನಜ ರಿಕ್ಷಾದಲ್ಲಿ ಕುಳಿತ ನಂತರ ಗಂಡನ ಕಡೆ ನೋಡಿದಳು. "ಮಾಧವಿ ಅತಿ ಜಾಣೆ, ಪ್ರೀತಿಯ ಹೆಸರಿನಲ್ಲಿ ದೊಡ್ಡ ಕುಳವನ್ನೇ ಗಾಳಕ್ಕೆ ಹಾಕಿಕೊಂಡಿದಾಳೆ. ಶ್ರೀಮಂತರು, ಸಜ್ಜನರು ಶ್ರೀನಾಥನಿಗೆ ಇದೆಲ್ಲಾ ತಿಳೀದು. ಬರೀ ಕೋಪ ಒಂದೇ ಗೊತ್ತಿರೋದು. ಅವನಾಗಿಯೇ ಹುಡುಕಿದ್ರೂ ಇಂಥಾ ಗಂಡು ಸಿಗ್ತಿರ್ಲಿಲ್ಲ"

"ಹೌದು ಮಾಧವಿಯ ಮೇಲೆ ಅಮ್ಮನ ಆಶೀರ್ವಾದ ಚೆನ್ನಾಗಿದೆ. ಈ ಮನೆಯಲ್ಲಿ ಅವಳು ಸುಖವಾಗಿರ್ತಾಳೆ ಅನ್ನುವ ನಂಬಿಕೆ ನನಗಿದೆ. ಶ್ರೀನಾಥನಿಗೂ ಮುಂದೆ ತಿಳಿಯುತ್ತೆ.

"ಇಂಥಾ ಗಂಡು ಒಬ್ಬ ನಮ್ಮ ಪಲ್ಲವಿಗೂ ಸಿಕ್ಕಿದ್ದರೇ! ನಿಮ್ಮ ಅಮ್ಮನ ಆಶೀರ್ವಾದ ನಮ್ಮ ಪಲ್ಲವಿಯ ಮೇಲೆ ಯಾಕೆ ಇಲ್ಲ!"

"ಅಮ್ಮನ ಆಶೀರ್ವಾದ ಎಲ್ಲರ ಮೇಲೂ ಇದೆ. ಅಮ್ಮ ಯಾವತ್ತು ಯಾರಿಗೂ ಕೆಟ್ಟದ್ದನ್ನ ಬಯಸಲಿಲ್ಲ. ಆದರೆ, ಅವರವರು ಪಡೆದುಕೊಂಡು ಬಂದದ್ದು ಅಂತ ಒಂದು ಇರುತ್ತಲ್ಲ. ಅದಕ್ಕೆ ಯಾರು ಏನು ಮಾಡಕ್ಕೆ ಆಗುತ್ತೇ?"

"ಅದು ಸರಿ ಕರ್ಮ ಅಂತ ಅನುಭವಿಸಬೇಕಾಗುತ್ತೆ" ಎಂದು ಮನದೊಳಗೇ ಅಂದುಕೊಂಡಳು.

ಇಬ್ಬರೂ ಮನೆಗೆ ಹಿಂತಿರುಗುತ್ತಿದ್ದಂತೆಯೇ, ರಮಾಕಾಂತ, ಭವಾನಿ ಧಾವಿಸಿ ಬಂದರು. ಶ್ರೀನಾಥ ನಿರುತ್ಸಾಹದಿಂದ ಕುಳಿತಿದ್ದ. ಸುಗುಣ ಪಿಳಿ ಪಿಳಿ ನೋಡಿದಳು. ಅನಂತ ಅವರ ಸಜ್ಜನಿಕೆಯನ್ನು ಹೊಗಳಿದ, ವನಜ ಅವರ ಶ್ರೀಮಂತಿಕೆಯನ್ನು ವರ್ಣಿಸಿದಳು.

"ಹಾಗಾದ್ರೆ ನಮ್ಮ ಮಾಧವಿ ಸರಿಯಾದವನನ್ನೇ ಆಯ್ಕೆ ಮಾಡಿಕೊಂಡಿದಾಳೆ. ಯಾವುದರಲ್ಲೂ ಎತ್ತಿ ಹಾಕುವಂತಿಲ್ಲ" ಭವಾನಿ ಸುಗುಣಳ ಕಡೆ ನೋಡಿ ನುಡಿದಳು.

"ಹೂಂ ಭವಾನಿ, ಮಾಧವಿ ಅದೃಷ್ಟ ಮಾಡಿದ್ಲು. ಅಂಥೋರ ಮನೆಯನ್ನು ಸೇರಕ್ಕೆ" ಶ್ರೀನಾಥ ಸರ್ರನೆ ಎದ್ದು ಹೋಗಿ ತಾಯಿಯ ಪಟದ ಮುಂದೆ ನಿಂತು ಮನಸಾರೆ ಅತ್ತುಬಿಟ್ಟ.

"ಅಮ್ಮ ನನ್ನನ್ನೂ ಕ್ಷಮಿಸಿಬಿಡು, ನಾನು ಮಾಡುತ್ತಿರುವುದು ಸರಿಯೋ, ತಪ್ಪೋ ನಂಗೆ ಗೊತ್ತಾಗ್ತಿಲ್ಲ" ಎಂದ. ರಮಾಕಾಂತ, ಅನಂತ ಇಬ್ಬರು ಅವನ ಎರಡು ಬದಿಗಳಲ್ಲಿ ನಿಂತರು.

"ಇನ್ನು ವ್ಯಥೆ ಪಡ್ಬೇಡ ಶ್ರೀನಾಥ. ಬಹುಶಃ ಅಮ್ಮನ ಇಚ್ಛೆಯೂ ಇದೇ

ಆಗಿದ್ದಿರಬಹುದು. ನಿನ್ನ ವಿರೋಧ ಎಷ್ಟೇ ಇದ್ದರೂ, ಮದುವೆ ನೆರವೇರಿದೆ. ಇನ್ನು ಮನೆ ತುಂಬಿಸಿಕೊಡುವುದಷ್ಟೇ ನಮ್ಮ ಕೆಲಸ. ಈ ವರ್ಷದೊಳಗೆ ಮದುವೆಯೂ ನಡೆಯಿತು. ಅವಳ ಒಡಲಲ್ಲಿ ಅಮ್ಮನೇ ಇದಾಳೆ, ಕೆಲವೇ ತಿಂಗಳುಗಳಲ್ಲಿ ಜನ್ಮವೆತ್ತಿ ಬರುತ್ತಿದ್ದಾಳೆ" ರಮಾಕಾಂತನ ಮಾತುಗಳನ್ನು ಅನಂತನೂ ಅನುಮೋದಿಸಿದ.

ಶ್ರೀನಾಥ ಸುಗುಣಳ ಕಡೆ ನೋಡಿದ. ಆ ನೋಟದಲ್ಲಿ ಅಸಹಾಯಕತೆ, ಅಸಮಾಧಾನ ಎರಡು ಅಡಗಿದ್ದವು. ಹೆಣ್ಣು ಮಕ್ಕಳಿಲ್ಲ ಎಂಬ ಕೊರಗು ರಮಾಕಾಂತನಿಗಿದ್ದರೂ, ಪಲ್ಲವಿಗೆ ಮದುವೆಯಾಗಲಿಲ್ಲ ಎಂಬ ವ್ಯಥೆ ಅನಂತನಿಗಿದ್ದರೂ, ಇವರಿಬ್ಬರಿಗಿಂತ ಹೆಚ್ಚಿನ ವೇದನೆ ನನ್ನದು. ಇದು ಯಾರಿಗೂ ಅರ್ಥವಾಗುತ್ತಿಲ್ಲವಲ್ಲ ಎಂದು ಪೇಚಾಡಿಕೊಂಡ.

ಪಲ್ಲವಿಯಂತೆ, ತಾನೂ ಸರಿಯಾದ ವಯಸ್ಸಲ್ಲಿ ಮದುವೆಯಾಗದೇ ಹಾಗೇ ಎಲ್ಲಿ ಉಳಿದು ಬಿಡುತ್ತೀನೋ ಎಂಬ ಹೆದರಿಕೆಯಿಂದ ಮಾಧವಿ ತಾನೇ ಸಂಗಾತಿಯನ್ನು ಆರಿಸಿಕೊಂಡಿರಬಹುದು. ತಾವೆಲ್ಲಿ ಮದುವೆಗೆ ಒಪ್ಪುವುದಿಲ್ಲವೋ ಎಂದು ಅಂದು ಈ ದಿಟ್ಟ ಹೆಜ್ಜೆಯನ್ನು ತೆಗೆದುಕೊಂಡಿರ ಬಹುದು. ಆದರೂ ನಮ್ಮಿಬ್ಬರ ಚಿತ್ತವನ್ನು ನೋಯಿಸಿದ ಮಾಧವಿ ಕ್ಷಮೆಗೆ ಅರ್ಹಳಲ್ಲ, ಎಂದು ತನ್ನಲ್ಲೇ ಹೇಳಿಕೊಂಡ ಸುಗುಣ ಶ್ರೀನಾಥನ ವ್ಯಥೆಯನ್ನು ಹಂಚಿಕೊಂಡಳು.

* * *

ಆರತಕ್ಷತೆಯ ಸಮಾರಂಭ ಸಾಂಗವಾಗಿ ನೆರವೇರಿತು, ಬಂಧು ಮಿತ್ರರು ಗಳೆಲ್ಲಾ ಬಂದು ವಧೂವರರಿಗೆ ಉಡುಗೊರೆಗಳನ್ನು ಕೊಟ್ಟು ಶುಭವನ್ನು ಹಾರೈಸಿದ್ದರು. ಕೇಳಿದವರಿಗೆ ಭವಾನಿ ತಾನು ಈ ವೊದಲೇ ಸಿದ್ಧವಾಗಿಟ್ಟುಕೊಂಡಿದ್ದ ಉತ್ತರವನ್ನು ಹೇಳಿದ್ದಳು. "ನಿಮಗೇ ಗೊತ್ತಿರುವಂತೆ ಇದು ಪ್ರೇಮವಿವಾಹ ಅವರ ಮನೆಯವರ ಇಚ್ಛೆಯಂತೆ ದೇವಸ್ಥಾನದಲ್ಲಿ ಮದುವೆ ಸರಳವಾಗಿ ನೆರವೇರಿತು, ಈಗ ಸಂಪ್ರದಾಯಿಕವಾಗಿ ಮನೆ ತುಂಬಿಸಿಕೊಡುತ್ತಿದ್ದೇವೆ" ಎಂದು ಕೆಲವರು ಸುಮ್ಮನೆ ತಲೆಯಾಡಿಸಿದ್ದರು. ಕೆಲವರು ಪಿಸುದನಿಯಲ್ಲಿ ಆಡಿಕೊಂಡಿದ್ದರು. ಶ್ರೀನಾಥ ವೌನವನ್ನು ಮುರಿದಿರಲಿಲ್ಲ. ಸುಗುಣ ನೆಂಟರಿಷ್ಟರಿಂದ ದೂರ ದೂರವೇ ಉಳಿದುಬಿಟ್ಟಳು. ಮನೋಜನ ಮನೆಯವರೂ ಹೆಚ್ಚು ಪ್ರಶ್ನಿಸಲಿಲ್ಲ. ಶ್ರೀನಾಥ ಯಾವುದನ್ನು ಕಡಿಮೆ ಮಾಡಿರಲಿಲ್ಲ, ಊಟದ ವ್ಯವಸ್ಥೆ ಬಹಳ ಚೆನ್ನಾಗಿದ್ದಿತು. ಮೂರು ನಾಲ್ಕು ಬಗೆಯ ಭಕ್ಷ್ಯಗಳು, ಐಸ್‌ಕ್ರೀಂ, ಫ್ರೂಟ್‌ಸಲಾಡ್ ಎಲ್ಲವೂ ಇದ್ದವು. ಕೊಡಬೇಕಾದವರಿಗೆಲ್ಲಾ ಉಡುಗೊರೆಗಳನ್ನು ತಂದಿದ್ದ. ಯಾರೂ ಯಾವ

ಆಕ್ಷೇಪಣೆಯನ್ನು ಎತ್ತಿ ಆಡುವಂತಿರಲಿಲ್ಲ.

ಊಟದ ನಂತರ ಮಗಳನ್ನು ಒಪ್ಪಿಸಿಕೊಡುವ ಸಮಯ ಶ್ರೀನಾಥ ಆಗಲೂ ಮಾತನ್ನಾಡಲಿಲ್ಲ. ಸುಗುಣ ಮಾತ್ರ ರೋಧಿಸಿದ್ದಳು. ಮಾಧವಿಯೂ ಕಣ್ಣೀನಲ್ಲೇ ಹೋಗಿ ಬರುತ್ತೇನೆಂದು ತಿಳಿಸಿದ್ದಳು. ಅವರ ವ್ಯಥೆಯನ್ನು ಕೆದಕುವ ಕೆಲಸವನ್ನು ಮಾಡಲಿಲ್ಲ. ಮನೋಜನೂ ಸುಮ್ಮನಿದ್ದು ಬಿಟ್ಟ. ಇದುವರೆಗೂ ಯಾವ ಮಾತುಗಳೂ ಇಲ್ಲದೇ ಸಮಾರಂಭ ಮುಗಿದಿದೆ. ಕ್ರಮೇಣ ಎಲ್ಲವೂ ಸರಿಹೋಗುತ್ತದೆ ಎಂದು ಅವರ ಮನೆಯವರೂ ಅಂದು ಕೊಂಡರು. ಥರದ ಮಂಥನ. ಅಲಂಕೃತಗೊಂಡ ಕಾರಿನಲ್ಲಿ ವಧೂವರರು ತೆರಳುವವರೆಗೂ ಚಪ್ಪರದ ಕೆಳಗೆ ನಿಇಂತಿದ್ದ ಭವಾನಿ ಭಾರಿ ನಿಟ್ಟುಸಿರನ್ನು ಹೊರ ಚೆಲ್ಲಿದಳು. ಪಕ್ಕದಲ್ಲಿಯೇ ನಿಂತಿದ್ದ ಗಂಡನ ತೋಳನ್ನು ಚಿವುಟಿದಳು.

"ಅಂತೂ ನಿಮ್ಮಮ್ಮ ತಮ್ಮ ಆಸೆಯನ್ನು ಪೂರೈಸಿಕೊಂಡ್ರು. ಗೋದಾನ, ಕನ್ಯಾದಾನ ಎಲ್ಲವೂ ಆಯಿತು. ಪುಣ್ಯಾತ್ಗಿತ್ತಿ ಕಣ್ರೀ, ಸದ್ಗತಿಯನ್ನು ಹೊಂದೇ ಬಿಟ್ಟರು"

"ನಾನು ಆಟಕ್ಕುಂಟು ಲೆಖ್ಖಕ್ಕಿಲ್ಲ ಶ್ರೇಯಸ್ಸೆಲ್ಲಾ ಅನಂತನಿಗೆ, ಶ್ರೀನಾಥನಿಗೆ ಅವರು ಹಿರಿಯಮಗ. ಇವನು ಕಿರಿಯಮಗ. ನಾನೋ ಶುನಶ್ಕೇಪ. ಅನಂತ ವಂಶೋದ್ಧಾರಕ್ಕ ಶ್ರೀನಾಥ ಮುದ್ದಿನ ಮಗ. ನನಗೇನಿದೆ ಓಡಾಡಿದ್ದಷ್ಟೇ ಬಂದದ್ದು ಪುಣ್ಯವೆಲ್ಲಾ ಅವರಿಬ್ಬರಿಗೇ"

"ನಾನು ಮಧ್ಯೆ ಪ್ರವೇಶಿಸದೇ ಇದ್ದಿದ್ದರೆ ಮಾಧವಿ ಮದುವೆ ಇಲ್ಲದೇ ತಾಯಿಯಾಗುತ್ತಿದ್ದಳು. ಗೋದಾನದ ಖರ್ಚೆಲ್ಲಾ ನಮ್ಮದೇ ಹೆಚ್ಚಿನ ಪುಣ್ಯ ನಮ್ಮದೇ"

"ಹೌದು. ಆದರೆ ಆಡಿರುವ ನಾಟಕ ಏನಾದ್ರೂ ಶ್ರೀನಾಥನಿಗೆ ತಿಳಿದರೇ ಸುಮ್ಮನೆ ಬಿಟ್ಟಾನಾ?"

"ತಿಳಿದರೆ ತಿಳಿಯಲಿ ಬಿಡಿ. ಒಳ್ಳೆಯ ಕೆಲಸಕ್ಕಾಗಿ ಒಂದು ನಾಟಕ ಆಡಿದೀವಿ. ಈ ನಾಟಕದಲ್ಲಿ ರಾಧಾನೂ ಪಾತ್ರವಹಿಸಿದಾಳೆ. ಭವಾನಿ ಮಾದಕ ವಾಗಿ ನಕ್ಕಳು. ಅವನು ಹುಬ್ಬೇರಿಸಿ ನಕ್ಕ. ಅವಳು ಮಾತ್ರ ನುಡಿದಳು, "ಪಲ್ಲವೀನ ನೋಡಿದ್ರೆ ಅಯ್ಯೋ ಅಂತ ಅನ್ಸುತ್ತೆ. ಅವಳೂ ಹೀಗೇ ಯಾರನ್ನಾದ್ರೂ ಲವ್ ಮಾಡಿ ಮದುವೆ ಮಾಡ್ಕೊಳ್ಳೋದಾದ್ರೇ ನಾನು ಮತ್ತೆ ನಾಟಕವಾಡುಕ್ಕೆ ಸಿದ್ಧ"

"ನಿನಗೇನು ಬರೀ ನಾಠಕ ಆಡೋ ಕೆಲ್ಸನ! ಹೋಗು ಸುಗುಣಳನ್ನು ಮಾತನಾಡಿಸು, ಅಳ್ತಾ ಇರಬಹುದು" ರಮಾಕಾಂತ ಹೆಂಡತಿಯನ್ನು ಅತ್ತ ಕಳಿಸಿದ. ಪಲ್ಲವಿ ವನಜಳೊಡನೆ ದೂರದಲ್ಲಿ ನಿಂತು ಮಾತನಾಡುತ್ತಿದ್ದನ್ನು ಕಂಡ "ಹೌದು ಭವಾನಿ ಹೇಳೋದು ಸರಿ. ಪಲ್ಲವಿಯೂ ಮಾಧವಿಯಂತೆ

ಧೈರ್ಯವಹಿಸಿದ್ದರೆ. ಇಷ್ಟು ಹೊತ್ತಿಗೆ ಮದುವೆ ಆಗಿರ್ತಿತ್ತು. ಅನಂತ ತಾತನಾಗಿರ್ತಿದ್ದ. ಶ್ರೀನಾಥ ಎಲ್ಲರಿಗಿಂತ ಚಿಕ್ಕವನು. ಆದರೆ ಅವನೇ ಎಲ್ಲರಿಗಿಂತ ಮೊದಲು ತಾತನಾಗ್ತಿದಾನೆ. ಈ ವರ್ಷ ಕಳೆಯುತ್ತಿದ್ದ ಹಾಗೇ ರಮೇಶನಿಗೆ ಮದುವೆ ಮಾಡಿಬಿಡ್ಬೇಕು ಇಲ್ಲದಿದ್ದರೆ, ಅವನೇ ಯಾರನ್ನಾದ್ರೂ ನೋಡಕೊಂಡಾನು" ಎಂದು ತನಗೆ ತಾನೇ ಹೇಳಿಕೊಂಡು ಮನದೊಳಗೆ ನಕ್ಕೊಂಡ.

"ಅಂತೂ ಅವರಿಬ್ರೂ ಅಮ್ಮನಿಗೆ ಪ್ರೀತಿ ಪಾತ್ರರಾದ ಮಕ್ಕಳು ಅಂತ ಅನ್ನಿಸ್ಕೊಂಡ್ರು. ನಾವೇ ಯಾತಕ್ಕೂ ಬೇಡದವರಾದ್ರೀ..." ವನಜ ಗಂಡನನ್ನು ಹಂಗಿಸಿದಳು. ಗೋದಾನದ ಪುಣ್ಯ ರಮಾಕಾಂತನಿಗೂ ಕನ್ಯಾದಾನದ ಪುಣ್ಯ ಶ್ರೀನಾಥನಿಗೂ ನಮಗೇನ್ರೀ ಸಿಕ್ತು?"

"ಇದೆಂಥಾ ಮಾತು? ನಮಗೆ ಪುಣ್ಯದಲ್ಲಿ ಪಾಲು ಇಲ್ಲದೇ ಇರುತ್ತ? ನಾನು ಹಿರಿಯವನು ಧರ್ಮಶಾಸ್ತ್ರದ ಪ್ರಕಾರ ಎಲ್ಲವನ್ನು ನೆರವೇರಿಸಿದ್ದು ನಾನು" ಹೆಮ್ಮೆಯಿಂದ ಹೇಳಿಕೊಂಡ.

"ಆದ್ರೇನು! ನೀವು ಯಾವ ಖರ್ಚನ್ನು ಮಾಡಿಲ್ಲ ಅಂತ ನಿಮ್ಮ ತಮ್ಮಂದಿರಿಗೆ ಗೊತ್ತು. ಮೇಲಿರುವ ನಿಮ್ಮ ತಾಯಿಗೆ ಗೊತ್ತು" ನಾವೂ ಖರ್ಚುಮಾಡಿ ಏನಾದ್ರೂ ದಾನ ಕೊಡುವ ಹಾಗಿದ್ದಿದ್ರೇ?"

"ಖರ್ಚು ಮಾಡಿದ್ರೇ ಪುಣ್ಯ ಸಿಗುತ್ತೆ ಅಂತ ನಿಂಗ್ಯಾರು ಹೇಳಿದ್ರು? ನನ್ನ ಹತ್ತಿರ ಅಷ್ಟು ಹಣ ಎಲ್ಲಿದೆ? ಮಕ್ಕಳಿಗೆ ಪಾಠ ಹೇಳಿಕೊಡುವ ಬಡಮೇಷ್ಟ್ರು ನಾನು, ವಿದ್ಯಾದಾನ ಮಾಡ್ತಿದೀನಲ್ಲ" ನಕ್ಕ

"ನಾವು ಒಂದು ಚೂರು ಭೂದಾನ ಮಾಡುವಂತಾದ್ರೇ?" ಆಸೆಯನ್ನು ವ್ಯಕ್ತಪಡಿಸಿದ್ದಳು.

"ಭೂಧಾನ! ತಮಾಷೇನಾ ವನಜಾ? ಭೂಮಿ ಚಿನ್ನವಾಗಿದೆ, ಸುಲಭವಾಗಿ ಎಲ್ಲಿ ಸಿಗುತ್ತೆ. ಕೊಂಡುಕೊಳ್ಳುವ ಚೈತನ್ಯ ನಮಗೆಲ್ಲಿದೆ? ಒಂದು ವೇಳೆ ಒಂದು ಚೂರು ಭೂಮಿ ಇತ್ತು ಅಂತ ಅಂದ್ಕೊ, ಅದು ನಮ್ಮ ಮಕ್ಕಳಿಗೆ ಇರಲಿ ಅಂತ ಅನ್ಸಲ್ವಾ? ಎಷ್ಟು ಕೊಟ್ಟರೂ ಖರ್ಚಾಗದೇ ನನ್ನಲ್ಲೇ ಉಳಿಯುವ ದಾನ ಎಂದರೆ ವಿದ್ಯಾದಾನ ಅದನ್ನು ಮಾಡ್ತಾನೇ ಇದೀನಲ್ಲ. ನನ್ನಲ್ಲಿ ಶಕ್ತಿ ಇರುವವರೆಗೂ ಮಕ್ಕಳಿಗೆ ಪಾಠ ಹೇಳಿಕೊಡ್ತೀನಿ. ಇದಷ್ಟೇ ಈ ಬಡಮೇಷ್ಟ್ರು ಕೈಯಲ್ಲಿ ಆಗೋ ಕೆಲಸ"

"ಮುಂದೆ ನಿಮ್ಮ ತಮ್ಮಂದಿರೇ ನಿಮ್ಮನ್ನು ಹಂಗಿಸಬಹುದು. ಹೇಗೂ ನಮ್ಮ ಭಾಗದ ಆಸ್ತಿ ಸಿಗುತ್ತಲ್ಲ. ಅದನ್ನು ಮಾರಿಬಿಡೋಣ. ಆ ಹಣದಲ್ಲಿ ಅಂಗೈ ಅಗಲವಾದರೂ ಸರಿ. ಭೂಮಿಯನ್ನು ಕೊಂಡು ದಾನ ಕೊಡೋಣ. ವಿದ್ಯಾದಾನ ಮಾಡ್ತಾನೇ ಇದೀರಲ್ಲ ಭೂದಾನ ಮಾಡೋಣ:

"ಆಮೇಲೆ ಎಲ್ಲರೂ ನನ್ನನ್ನು ದಡ್ಡ ಅಂತ ಆಡ್ಕೋತಾರೆ. ಈ ಆಸೆಯನ್ನು ನಿನ್ನ ಮನಸ್ಸಿಂದ ಕಿತ್ಹಾಕು. ಆ ಮನೆ, ನಮ್ಮಪ್ಪ ಕಷ್ಟಪಟ್ಟು ಸಂಪಾದಿಸಿ ಕಟ್ಟಿಸಿದ ಮನೆ. ಅಮ್ಮ ಆಸೆಯಿಂದ ನೋಡಿಕೊಂಡ ಮನೆ. ನಿನ್ನ ಮಗನ ಹತ್ರ ನಿನ್ನಾಸೆಯನ್ನು ಹೇಳಿಕೋ. ಅವನು ಒಪ್ಪಿದರೆ, ನಿನ್ನಾಸೆ ಪೂರೈಸಬಹುದು. ಅವನು ಒಪ್ಪಿಕೊಂಡರೆ ಅದು ನಿನ್ನ ಪುಣ್ಯ"

"ಅವನನ್ನು ಹೇಗ್ರೀ ಕೇಳೋದು? ಹೆಂಡತಿಯ ಆಸೆಯನ್ನು ಪೂರೈಸಬೇಕಾದುದು ಗಂಡನ ಧರ್ಮ. ನಾನೊಂದು ಹೇಳಿದ್ರೆ ನೀವೊಂದು ಆಡ್ತೀರಿ. ಬರೀ ಅಸಂಬದ್ಧ ಅದೇನು ಪಾಠ ಹೇಳಿಕೊಡ್ತೀರೋ?" ಗಂಡನನ್ನು ಮೂದಲಿಸಿದಳು.

"ಹಾಸಿಗೆ ಇದ್ದಷ್ಟು ಕಾಲನ್ನು ಚಾಚಬೇಕು. ಆಸೆಗೆ ಮಿತಿ ಎಲ್ಲಿದೆ? ನಿನ್ನದು ಆಸೆಯಲ್ಲ ಅಸೂಯೆ. ಭವಾನಿ ಸುಗುಣರನ್ನು ಮೀರಿಸಬೇಕು ಎನ್ನುವ ಹುಚ್ಚಾಸೆ. ಅದಕ್ಕೆ ಕಡಿವಾಣ ಹಾಕು ತಿಳೀತಾ?"

"ನಿಮ್ಮ ಜೋರು ಜಬರ್ದಸ್ತು ಎಲ್ಲ ನನ್ನ ಮೇಲೆ. ನನ್ನ ಯಾವ ಆಸೆಯನ್ನು ಪೂರೈಸಿದೀರಿ"

"ಹಾಗೇ ಅಂದ್ಕೋ, ಆದರೆ ನಾನು ಇವತ್ತು ನಿನಗೆ ಒಂದು ವಿಶೇಷವಾದ ಸುದ್ದಿಯನ್ನು ತಿಳಿಸೋಣ ಅಂತಿದ್ದೆ ಹೋಗಲಿಬಿಡು"

"ಏನು ಸುದ್ಧಿ? ನೀವು ನನಗೆ ಹೇಳುವಂಥದ್ದು?" ಹಂಗಿಸಿದಳು.

"ಹೋಗ್ಲಿ ಅಂದ್ನಲ್ಲ. ಇನ್ನೂ ಕೆಲವೇ ದಿನಗಳಲ್ಲಿ ನಿಂಗೆ ತಾನಾಗಿಯೇ ಗೊತ್ತಾಗುತ್ತೆ"

"ನೀವು ರಿಟೈರ್ ಆಗ್ತಿರಬಹುದು. ಅದು ವಿಶೇಷವಾದ ಸುದ್ದೀನಾ? ಅದೇನು ಅಂತ ಹೇಳ್ಬಿಡಿ ಕೇಳ್ಬಿಟ್ಟೆ ಮಲಗ್ತೀನಿ" ಪಟ್ಟು ಹಿಡಿದವಳಂತೆ ಅವನ ಎದುರಿಗೆ ಕುಳಿತಳು.

"ನಿನಗೇ ಮೊದಲು ಹೇಳ್ತಾ ಇರೋದು. ಸರಿಯಾಗಿ ಕೇಳಿಸ್ಕೋ. ಈ ವರ್ಷದ ಸಾಲಿನಲ್ಲಿ ಅತ್ಯುತ್ತಮ ಶಿಕ್ಷಕರಿಗೆ ಕೊಡುವ ಪ್ರಶಸ್ತಿಯ ಪಟ್ಟಿಯಲ್ಲಿ ನನ್ನ ಹೆಸರೂ ಇದೆ. ನಿಧಾನವಾಗಿ ವಿದ್ಯಾರ್ಥಿಗಳಿಗೆ ಪಾಠ ಹೇಳುವವನಂತೆ ಹೇಳಿದ. ಅವಳಿಗೆ ಮೊದಲಿಗೆ ಅರ್ಥವಾಗಲಿಲ್ಲ, ಸುಮ್ಮನೇ ನೋಡಿದಳು, "ಯಾಕೆ? ನಾನು ಹೇಳಿದ್ದು ಕೇಳಿಸಲಿಲ್ವಾ? ಅರ್ಥವಾಗಲಿಲ್ವಾ?" ಕೇಳಿದ ಅವಳು ಇಲ್ಲ ಎನ್ನುವಂತೆ ತಲೆಯಾಡಿಸಿದಳು. ಅವನು ಅವಳ ತಲೆಯ ಮೇಲೆ ಹಗುರವಾಗಿ ಮೊಟಕಿದ

"ಈ ವರ್ಷ ಈ ರಾಜ್ಯದಿಂದ ಅತ್ಯುತ್ತಮ ಶಿಕ್ಷಕನೆಂದು ಪ್ರಶಸ್ತಿಗಾಗಿ ನನ್ನನ್ನು ಆಯ್ಕೆಮಾಡಿದಾರೆ, ರಾಷ್ಟ್ರಪತಿಯವರಿಂದ ಪ್ರಶಸ್ತಿಯನ್ನು ಸ್ವೀಕರಿಸಲು

ನಾನು ಡೆಲ್ಲಿಗೆ ಹೋಗಬೇಕಾಗುತ್ತದೆ" ಬಿಡಿಸಿ ಬಿಡಿಸಿ ಹೇಳಿದ.

"ಡೆಲ್ಲಿಗಾ? ಯಾವಾಗ?" ಬೆರಗಾಗಿ ಕೇಳಿದಳು ಅವಳ ಮುಖ ಅರಳಿತ್ತು.

"ಪ್ರಶಸ್ತಿ ಪ್ರದಾನ ಸಮಾರಂಭದ ದಿನ ಯಾವತ್ತು ಅಂತ ಇನ್ನು ತಿಳಿದಿಲ್ಲ, ನನ್ನ ಸಹೋದ್ಯೋಗಿ ಒಬ್ಬರಿಂದ, ಕೆಲವು ಗಂಟೆಗಳ ಮುಂಚೆ ನನಗೆ ಈ ವಿಷಯ ತಿಳಿಯಿತು. ನಮ್ಮ ಮನೆಯ ಸಮಾರಂಭಕ್ಕೆ ಅವರು ಬಂದಿದ್ದರು. ನಾಳೆಯ ದಿನ ನಾನು ಶಾಲೆಗೆ ಹೋದಮೇಲೆ ಎಲ್ಲಾ ವಿಷಯಗಳೂ ವಿವರವಾಗಿ ತಿಳಿಯುತ್ತೆ"

"ಆಗಲೇ ಹೇಳಿದಿದ್ದರೇ, ನೆಂಟರಿಷ್ಟರಿಗೆಲ್ಲಾ ತಿಳಿಸಬಹುದಾಗಿತ್ತು. ಎಂಥಾ ಕೆಲಸ ಮಾಡಿದ್ರೀ? ನಾನು ಭವಾನಿಗೇ ಈಗ್ಲೇ ಹೇಳ್ತೀನಿ" ಸಂಭ್ರಮದಿಂದ ಎದ್ದಳು. ಅವನು ಎಳೆದು ಕೂರಿಸಿದ.

"ನಾನು ಡೆಲ್ಲಿಗೆ ಹೋಗುವ ಸಮಯದಲ್ಲಿ ಎಲ್ಲರಿಗೂ ತಿಳಿದೇ ತಿಳಿಯುತ್ತೆ."

"ನನ್ನ ಕೈಲಿ ಆಗಲ್ಲಪ್ಪಾ. ಭವಾನಿಗೆ ಈಗಲಾದ್ರೂ ಈ ಬಡಮೇಷ್ಟ್ರ ಬೆಲೆ ಗೊತ್ತಾಗಲಿ"

"ನಮ್ಮ ಬೆಲೇನ ನಾವೇ ಹೇಳ್ಕೊಂಡು ತಿರುಗಾಡಬೇಕಾಗಿಲ್ಲ. ಅದನ್ನು ಬೇರೆಯವರು ಗುರುತಿಸಬೇಕು. ಈ ಅತ್ಯುತ್ತಮ ಶಿಕ್ಷಕ ಪ್ರಶಸ್ತಿ ಎಷ್ಟೋ ಮಂದಿ ಶಿಕ್ಷಕರಿಗೆ ಈ ಮೊದಲೇ ಸಿಕ್ಕಿದೆ. ಅದನ್ನು ಕೊಡುವುದು, ಶಿಕ್ಷಕರ ದಕ್ಷತೆಯನ್ನು ಗುರುತಿಸಿ ಮಾತ್ರ. ನಾನು ಮೊದಲನೆಯವನಲ್ಲ. ನನಗಿಂತ ಮೊದಲು ಈ ರಾಜ್ಯದ ಕೆಲವು ಶಿಕ್ಷಕರಿಗೆ ಈ ಪ್ರಶಸ್ತಿ ಸಿಕ್ಕಿದೆ. ಕೆಲವರಿಗೆ ಸಿಗದೆ ನಿರಾಸೆಗೊಂಡಿದಾರೆ. ಇದರಲ್ಲಿ ಹೆಚ್ಚುಗಾರಿಕೆಯಿಂದ ಹೇಳಿಕೊಳ್ಳುವಂಥದ್ದು ಏನೂ ಇಲ್ಲ"

"ನಿಮಗೆ ಹಾಗೆನ್ನಿಸಬಹುದು. ಆದರೆ ನನಗೆ ಹಾಗಲ್ಲ, ನಿಮ್ಮ ತಾಯಿ ಬದುಕಿರಬೇಕಾಗಿತ್ತು. ಅವರಿಗೆ ಖಂಡಿತಾ ಖುಷಿಯಾಗಿರ್ತಿತ್ತು" ಗಂಡನ ಭಾವನೆಗಳನ್ನು ಕೆದಕಿದಳು.

"ಹೌದು ಅಮ್ಮ ಈದಿನ ಬದುಕಿರಬೇಕಾಗಿತ್ತು. ಯಾವ ತಾಯಿಗೆ ಮಗನ ಅಭ್ಯುದಯದಿಂದ ಖುಷಿಯಾಗಲ್ಲ? ನಮಗೆ ಅವಳೇ ಮನಾರ್ಗದರ್ಶಕಿ. ಅವಳು ಕಲಿಸಿಕೊಟ್ಟ ರೀತಿ, ನೀತಿ ಆದರ್ಶಗಳೇ ನನ್ನ ಪ್ರಗತಿಗೆ ಸಹಾಯಕವಾಗಿವೆ. ಆ ನೆಮ್ಮದಿ, ಸಂತೋಷ ನನಗಿದೆ. ಅನೇಕ ಮಕ್ಕಳಿಗೆ ಪಾಠವನ್ನು ಹೇಳಿಕೊಡುತ್ತಿದ್ದೇನೆ, ವಿದ್ಯಾದಾನ ಮಾಡುತ್ತಿದ್ದೇನೆ. ಇದರ ಪುಣ್ಯವೆಲ್ಲಾ ಅಮ್ಮನಿಗೆ ಸಲ್ಲುತ್ತದೆ. ಇದು ಎಲ್ಲಾ ಪ್ರಶಸ್ತಿಗಿಂತಲೂ ಅಮೂಲ್ಯವಾದುದು. ನನಗೆ ರಿಟೈರ್ ಆದಮೇಲೆ, ಸಿಗುವ ಸ್ವಲ್ಪ ಹಣವನ್ನು ಸ್ವಲ್ಪ ಭಾಗವನ್ನು ಅಮ್ಮನ ಹೆಸರಿನಲ್ಲಿ ಬಡ ಪ್ರತಿಭಾವಂತ ಮಕ್ಕಳಿಗೆ ಸ್ಕಾಲರ್‌ಷಿಪ್ ರೂಪದಲ್ಲಿ ಕೊಡುವ ಆಸೆ ನನಗೆ, ಈಗ ಸಿಗುವ ಪ್ರಶಸ್ತಿ ಫಲಕ, ಪದಕ, ಏನೇ ಇರಲಿ, ಎಲ್ಲವನ್ನು

ಅಮ್ಮನಿಗೆ ಸಮರ್ಪಣೆ ಮಾಡುತ್ತೇನೆ. ಇದೇ ನಾನು ಮಾಡುವ ಮೊದಲ ಕೆಲಸ. ನನಗೆ ಸಿಗುವ ಯಾವುದೇ ಪ್ರಶಸ್ತಿಗೆ. ಅಮ್ಮನೇ ಕಾರಣ" ತಾಯಿಯನ್ನು ನೆನೆಸಿಕೊಂಡು ಭಾವೋದ್ವೇಗದಿಂದ ನುಡಿದ.

ವನಜ ತನ್ನ ಆಲೋಚನೆಗಳ ಲೋಕದಲ್ಲಿ ಮುಳುಗಿದ್ದಳು. ತನ್ನ ಗಂಡನ ಹೆಸರು ಪೋಟೋದೊಂದಿಗೆ ದಿನ ಪತ್ರಿಕೆಗಳಲ್ಲಿ ಬರುತ್ತದೆ. ಅಭಿನಂದನೆಗಳ ಸುರಿಮಳೆ ಆಗುತ್ತದೆ. ಸನ್ಮಾನ ಸಮಾರಂಭಗಳು ಏರ್ಪಡುತ್ತವೆ. ವನಜಳ ಗಂಡ, ಅನಂತರಾವ್‌ಗೆ ಪ್ರಶಸ್ತಿ ಸಿಕ್ಕಿದೆ ಎನ್ನುವ ವಿಷಯ ನಮ್ಮ ಬಳಗದಲ್ಲಿ ಹರಡುತ್ತದೆ. ನಮ್ಮ ಮನೆಯಲ್ಲಿ ನನ್ನ ಪ್ರತಿಷ್ಠೆ ಹೆಚ್ಚುತ್ತದೆ. ಭವಾನಿಗೂ ತಿಳಿಯಲಿ. ನಾವು ಯಾರಿಗೂ ಕಡಿಮೆ ಇಲ್ಲ ಅಂತ. ವಿದ್ಯಾದಾನ ಎಲ್ಲಕ್ಕಿಂತ ಶ್ರೇಷ್ಠ ಅಂತ ತಿಳಿಯಲಿ.

ಎಂದಿಗೆ ಬೆಳಗಾದೀತು, ಈ ಸುದ್ದಿಯನ್ನು ಎಷ್ಟು ಬೇಗ ಎಲ್ಲರಿಗೂ ತಿಳಿಸುವೆನೋ, ಎಂಬ ಕಾತುರದಲ್ಲಿ ವನಜ ಎಚ್ಚರಗೊಂಡಿದ್ದಳು. ಅನಂತ ಎಂದಿನಂತೆ ಸಮಾಧಾನದ ನಿಟ್ಟುಸಿರನ್ನು ಹೊರಹಾಕಿ ಗೋಡೆಯ ಮೇಲಿದ್ದ ತಾಯಿಯ ಭಾವಚಿತ್ರಕ್ಕೆ ಕೈ ಮುಗಿದು, ವಂದಿಸಿದ. ಗಂಡ ಹೆಂಡತಿಯರಲ್ಲಿ ಅವರವರ ಭಾವಕ್ಕೆ ತಕ್ಕನಾದ ಸಮಾಧಾನದ ಗೆರೆಗಳು! ಶೇಷಮ್ಮನವರ ಮುಖದಿಂದ ಹೊರಹೊಮ್ಮಿದ ಸಂತೃಪ್ತಿಯ ಕಳೆ ಎಲ್ಲಕ್ಕಿಂತ ಮಿಗಿಲಾಗಿತ್ತು.

*ಮುಗಿಯಿತು*

# ಡೈಮಂಡ್ ಸಕ್ಕರೆ

"ಮೋದಿ, ಡ್ಯಾಡಿ ನಿಮ್ಮಿಬ್ಬರನ್ನು ಕರೀತಿದಾರೆ, ಬರ್ಬೇಕಂತೆ..." ದೀಕ್ಷಾ ಹೇಳಿದಾಗ, ಪ್ರಮೋದ, ಪ್ರಣೀತಾಳ ಕಡೆ ನೋಡಿದ. ಅವಳು ಮುಗುಳ್ನಕ್ಕಳು.

"ಡ್ಯಾಡಿ ಎಲ್ಲಿದ್ದಾರೆ? ಯಾಕೆ ಕರೆದ್ರು?" ಪ್ರಶ್ನಿಸಿದ.

"ರೂಂನಲ್ಲಿದ್ದಾರೆ, ನೀನೇ ಹೋಗಿ ಕೇಳು...." ದೀಕ್ಷಾ ನುಡಿದು ಅಲ್ಲಿ ನಿಲ್ಲದೇ ಹೊರಟು ಹೋಗಿದ್ದಳು. ಎಂಗೇಜ್ ಮೆಂಟ್‌ಗೆ ಬಂದಿದ್ದ ಅತಿಥಿಗಳೆಲ್ಲ ಹೊರಟು ಹೋಗಿದ್ದರು. ಬರೀ ಮನೆ ಮನೆಯವರೇ.... ಪ್ರಣೀತಾಳನ್ನು ಅವಳ ಮನೆಗೆ ಬಿಟ್ಟು ಬರಬೇಕಾಗಿತ್ತು. ಪ್ರಮೋದ ತನ್ನ ಭಾವೀ ಪತ್ನಿಗೆ ಸಂಜ್ಞೆ ಮಾಡಿದ. ಇಬ್ಬರೂ ರೂಮಿಗೆ ಬಂದರು. ಶೇಷಾದ್ರಿ ಅವರಿಬ್ಬರಿಗಾಗಿಯೇ ಕಾಯುತ್ತಾ ಕುಳಿತಿದ್ದ. ಇಬ್ಬರನ್ನೂ ಕಂಡು ನಸುನಕ್ಕು ಬನ್ನಿ ಎಂದು ಆತ್ಮೀಯವಾಗಿ ಕರೆದ.

"ಡ್ಯಾಡೀ.... ಈಗಾಗ್ಲೇ ಹೊತ್ತಾಗಿದೆ. ನಾನು ಇವಳನ್ನು ಮನೆಗೆ ಬಿಟ್ಟು ಬರ್ಬೇಕು. ಏನದು ಬೇಗ ಹೇಳಿ..." ಅವಸರದಿಂದ ಕೇಳಿದ. ದನಿಯಲ್ಲಿ ಅಸಹನೆಯಿತ್ತು.

"ಹೋಗೂವಂತೆ.... ಇಲ್ಲೇ ತಾನೇ ಹತ್ತಿರದಲ್ಲಿ ಮನೆ.... ಕೂತ್ಕೋಮ್ಮಾ ಪ್ರಣೀತಾ...." ಎಂದ ಶೇಷಾದ್ರೀ.... ಅವಳು ಅನುಮಾನಿಸುತ್ತಾ ಕುಳಿತಳು. ತನ್ನ ಕೈಯಲ್ಲಿದ್ದ ಚಿಕ್ಕ ಡಬ್ಬಿಯ ಮುಚ್ಚಳವನ್ನು ತೆರೆದು ಅವಳ ಮುಂದೆ ಹಿಡಿದ. ಹರಳಿನ ಓಲೆಗಳು! ಮಂಕುಮಂಕಾಗಿ ಹೊಳೆದವು. "ಇದು ನಿನಗೆ.... ತಗೋ...." ಎಂದು ಮುಂದೆ ಚಾಚಿದ. ಅವಳು ಅನುಮಾನಿಸುತ್ತಾ ಇಬ್ಬರ ಕಡೆಯೂ ನೋಡಿದಳು.

"ಅನುಮಾನ ಯಾಕೆ? ನಾನು, ನಿನ್ನ ಮಾವ ಕೊಡ್ತಿದೀನಿ.... ತಗೋ. ಇದು ನಿನಗೆ ಸೇರಬೇಕಾದದ್ದೇ...." ಎನ್ನುತ್ತಾ ಅವಳ ಕೈಗೆ ಕೊಟ್ಟ. ಪ್ರಮೋದ ಅದನ್ನು ತನ್ನ ಕೈಗೆ ಎತ್ತಿಕೊಂಡ.

"ಇದು ಮಮ್ಮಿಯ ಓಲೆಗಳಲ್ವಾ ಡ್ಯಾಡ್....?" ಕೇಳಿದ.

"ಹೌದು.... ಆದರೆ ಇನ್ನು ಮುಂದೆ ಇದು ಪ್ರಣೀತಾಳದ್ದು...."

"ಬೇಡ ಮಾವ.... ಇದು ನಿಮ್ಮ ಹತ್ತಿರವೇ ಇರಲಿ. ಅತ್ತೆಯ ನೆನಪಿನಲ್ಲಿ ನೀವೇ ಇಟ್ಕೊಳ್ಳಿ...."

"ಹೌದು ಡ್ಯಾಡ್... ಇದನ್ನು ಯಾರ್‍ಗೂ ಕೊಡ್ಬೇಡಿ...."

"ಯಾರ್‍ಗೋ ಯಾಕೆ ಕೊಡ್ಲಿ?... ನನ್ನ ಸೊಸೆಯಾಗುವವಳಿಗೆ ಕೊಡ್ತಿದೀನಿ.... ನೀನು ಸುಮ್ನಿರು...." ಮಗನನ್ನು ನಯವಾಗಿ ಗದರಿದ.

"ದೀಕ್ಷಾ, ರಕ್ಷಿತಾ ಇಬ್ಬರನ್ನೂ ಕೇಳಿದೀರಾ ಡ್ಯಾಡ್...?"

"ಅವರನ್ನೇನು ಕೇಳೋದು....? ಇದು ನನ್ನ ಇಷ್ಟ....ಇಷ್ಟಕ್ಕೂ ಇದು ನಿನ್ನ ಅಮ್ಮನಿಗೆ, ನನ್ನ ಅಮ್ಮ ಕೊಟ್ಟದ್ದು.... ನನ್ನ ಅಮ್ಮ.... ಅಂದರೆ ನಿನ್ನ ಅಜ್ಜಿ...." ಹೆಮ್ಮೆಯಿಂದ ತುಟಿ ಉಬ್ಬಿಸಿ ಹೇಳಿದ.

"ಹೌದಾ?" ಅಚ್ಚರಿಯಿಂದ ಕಣ್ಣರಳಿಸಿದಳು ಪ್ರಣೀತಾ....

"ಹೌದಮ್ಮ.... ಇದು ನನ್ನ ತಾಯಿಯದು.... ಅವಳ ನಂತರ ಅವಳ ಆಸೆಯಂತೆ.... ನಿನ್ನ ಅತ್ತೆಗೆ, ನಮ್ಮ ಮದುವೆಯಲ್ಲಿ ಕೊಟ್ಟರು. ಈಗ ಅದೇ ಪದ್ಧತಿಯ ಪ್ರಕಾರ ನಿಮ್ಮ ಮದುವೆಯ ಉಡುಗೊರೆಯಾಗಿ, ನಾನು ನಿನಗೆ ಕೊಡ್ತಿದೀನಿ...."

"ಥ್ಯಾಂಕ್ಸ್ ಮಾವ...." ಅವಳ ದನಿ ಸಪ್ಪಗಿದ್ದುದನ್ನು ಗಮನಿಸಿದ. ಈ ಕಾಲದ ಹುಡುಗಿ... ಹಳೇ ಕಾಲದ ಓಲೆಗಳು, ಬಹುಶಃ ಇಷ್ಟವಾಗಲಿಲ್ಲವೇನೋ.... ಆದರೇನು ಮಾಡೋದು? ಇದನ್ನು ನನ್ನ ಬಳಿ ಇಟ್ಕೊಂಡು ಏನು ಮಾಡಲಿ? ....ಇಷ್ಟವಾದರೆ ಹಾಕಿಕೊಳ್ಳಲಿ... ಇಲ್ಲದಿದ್ದರೆ, ಲಾಕರ್‌ನಲ್ಲಿಟ್ಟಿರಲಿ.... ಎಲ್ಲಿದ್ದರೂ ಅದರ ಬೆಲೆ ಅದಕ್ಕೆ ಇದ್ದೇ ಇರುತ್ತೆ" ಅಂತಂದುಕೊಂಡ.

"ಪ್ರಣೀತಾಳ ಮುಖದ ಚಹರೆ ಬದಲಾಯಿಸಿದ್ದನ್ನು ಪ್ರಮೋದ ಗಮನಿಸಿದ. ಅವಳಿಗೆ ಹಳೇ ಕಾಲದ ಆ ಓಲೆಗಳು ಇಷ್ಟವಾಗಲಿಲ್ಲವೆಂದುಕೊಂಡು, ಅವಳ ಕೈಯಿಂದ ತನ್ನ ಕೈಗೆ ತೆಗೆದುಕೊಂಡು, ತಂದೆಯ ಕೈಗಿತ್ತು. "ಸಧ್ಯಕ್ಕೆ ಇದು ನಿಮ್ಮ ಹತ್ತಿರವೇ ಇರಲಿ ಡ್ಯಾಡೀ.... ಮದುವೆಗೆ ಸಮಯವಿದೆಯಲ್ಲ.... ಈಗ ಕತ್ತಲೆಯಾಗಿದೆ.... ಈ ಬೆಲೆ ಬಾಳುವ ಒಡವೆಯನ್ನೇಕೆ ತಗೊಂಡು ಓಡಾಡ್ಬೇಕು....?"

"ನೀನೂ ಜೊತೋಲಿ ಇರ್ತೀಯಲ್ಲೋ.... ಅಲ್ಲದೇ ಮೈ ಮೇಲೆ ಒಡವೆಗಳಿವೆ... ನೀವೇನು ನಡ್ಕೊಂಡು ಹೋಗ್ತೀರಾ? ಕಾರ್‍ನಲ್ಲಿ ಬಿಟ್ಟು ಬಾ....."

"ಕಾರು ಇನ್ನೂ ವಾಪಸ್ಸು ಬಂದಿಲ್ಲ ಡ್ಯಾಡ್.... ನಾನೇ ಹೇಳೋಣ ಅಂತಿದ್ದೆ.... ಈ ಒಡವೆಗಳನ್ನೆಲ್ಲ ತೆಗೆದು ಡ್ಯಾಡಿಯ ಕೈಯಲ್ಲಿ ಕೊಡು. ಲಾಕರ್‌ನಲ್ಲಿಟ್ಟಿರಲಿ..."

"ಬೇಡ, ಬೇಡ.... ಲಕ್ಷಣವಾಗಿ ಹಾಕ್ಕೊಂಡಿರುವ ಒಡವೆಗಳನ್ನು

ತೆಗೆಯೋದು ಬೇಡ.... ನಾನು ಡ್ರೈವರ್‌ಗೆ ಫೋನು ಮಾಡ್ತೀನಿ.... ಬೇಗ ಬಾ ಅಂತ...." ಶೇಷಾದ್ರಿ ಮೊಬೈಲ್‌ನ್ನು ಎತ್ತಿಕೊಂಡು ಕಿಟಕಿಯ ಬಳಿಗೆ ನಡೆದಾಗ ಪ್ರಣೀತಾ ಸಂಜ್ಞೆಯಿಂದ ತನ್ನ ಅಸಮ್ಮತಿಯನ್ನು ಸೂಚಿಸಿದಳು. "ಅವನು ಬರೋಕೆ ಇನ್ನೂ ಅರ್ಧಗಂಟೆಯಾಗುತ್ತಂತೆ.... ಅಲ್ಲೆಲ್ಲೋ ಟ್ರಾಫಿಕ್ ಜಾಮ್‌ನಲ್ಲಿ ಸಿಕ್ಕೊಂಡಿದಾನಂತೆ..." ಬೇಸರದಿಂದ ಹೇಳಿದ.

"ಪರವಾಗಿಲ್ಲ ಡ್ಯಾಡ್, ವಾಕ್ ಆದ ಹಾಗೆ ಆಗುತ್ತೆ.... ಮಾತಾಡ್ಕೊಂಡು ಹೋಗ್ತೀವಿ...." ಅವಳ ಕಡೆ ನೋಡಿ ಕಣ್ಣು ಹೊಡೆದ.

'ಸರಿಯಪ್ಪಾ.... ನಿಮ್ಮ ಇಷ್ಟ.... ಹೆಚ್ಚಿನ ಒಡವೆಗಳನ್ನು ತೆಗೆಯೋದಾದ್ರೆ ತೆಗೆದು ಕೊಡ್ಲಿ.... ಮೈಮೇಲೆ ಶಾಲನ್ನು ಹೊದ್ಕೊಂಡ್ಬಿಡು.... ಯಾರ್ಗೂ ಒಡವೆ ಕಾಣುಲ್ಲ...."

ಅಷ್ಟರಲ್ಲಿ ಪ್ರಣೀತಾ, ಮನಸ್ಸಿಲ್ಲದ ಮನಸ್ನಲ್ಲಿ, ವಿಶೇಷವಾಗಿ ಹಾಕಿಕೊಂಡಿದ್ದ ಒಡವೆಗಳನ್ನು ತೆಗೆದು, ಮಂಚದ ಮೇಲೆ ಇಟ್ಟಳು. "ಡ್ಯಾಡೀ, ಇವನ್ನೆಲ್ಲ ಭದ್ರವಾಗಿ ಲಾಕರ್‌ನಲ್ಲಿಟ್ಟು ಲಾಕ್ ಮಾಡಿ.... ಬೀಗದ ಕೈಯನ್ನು ಜೋಪಾನ ವಾಗಿಡಿ.... ಯಾರ್ಗೂ ಕೊಡ್ಬೇಡಿ...." ಶೇಷಾದ್ರಿ ನಕ್ಕ.

"ಹೂಂ ಕಣೋ... ನಿನ್ನ ಅಮ್ಮನ ಒಡವೆಗಳನ್ನು ಇಷ್ಟು ವರ್ಷ ಜೋಪಾನ ವಾಗಿ ಇಟ್ಟಿಲ್ವಾ? ....ಹೆದರ್ಬೇಡ.... ನಾಳೆ ಬಂದು ಮರೀದೇ ಇದನ್ನೆಲ್ಲ ತಗೊಂಡು ಹೋಗಮ್ಮಾ.... ಚಿಂತೆ ಮಾಡ್ಬೇಡ.... ಎಲ್ಲಾ ಸೇಫ್ ಆಗಿ ಲಾಕರ್‌ನಲ್ಲಿರುತ್ತೆ...." ಎಂದ.

ಅವರುಗಳು ರೂಮಿನಿಂದ ಹೊರಗೆ ಹೋದ ಮೇಲೆ, ಪ್ರಣೀತಾ ಕೊಟ್ಟ ಒಡವೆಗಳನ್ನು ಪ್ರತ್ಯೇಕವಾಗಿ ಒಂದು ಕೈ ಚೀಲದಲ್ಲಿಟ್ಟು, ದಾರಕಟ್ಟಿ, ಲಾಕರ್ ನಲ್ಲಿಟ್ಟನು. ನಂತರ ಓಲೆಯ ಡಬ್ಬಿಯನ್ನು ಕೈಗೆತ್ತಿಕೊಂಡು, ಮುಚ್ಚಳವನ್ನು ತೆರೆದು ನೋಡಿದನು. ವಜ್ರಗಳ ಹೊಳಪು ಕಣ್ಣುಗಳನ್ನು ಕೋರೈಸಿತು. ಒಂದು ತರಹದ ತನ್ಮಯತೆಯ ಭಾವ ತೋರಿತು.

ಇದನ್ನು ಅಮ್ಮ ಧರಿಸುತ್ತಿದ್ದಾಗ, ಅವಳಿಗೆ ಹೇಗೆ ಒಪ್ಪುತ್ತಿತ್ತು ಎಂದು ಕೊಂಡು ಮನದ ಮುಂದೆ ತಾಯಿಯ ಮುಖವನ್ನು ತಂದುಕೊಳ್ಳಲು ಪ್ರಯತ್ನಿಸಿದ. ಆದರೆ ಸರಿಯಾಗಿ ನೆನಪೇ ಬರುತ್ತಿಲ್ಲ.... ತನಗೆ ತಿಳಿದಂತೆ ಅಮ್ಮನೆಂದೂ ಮಕ್ಕಳೊಂದಿಗೆ ಬೆರೆತು, ಆಟ ಆಡಿದಂತೆ ನೆನಪಿಲ್ಲ. ಕತೆ ಹೇಳುತ್ತಾ ತಟ್ಟಿ ಮಲಗಿಸಿದ ನೆನಪಿಲ್ಲ. ಲಾಲಿ ಹಾಡುತ್ತಾ ತೊಟ್ಟಿಲನ್ನು ತೂಗಿದ್ದೂ ಸಹ ನೆನಪಿಲ್ಲ.

ತಾವು ಒಟ್ಟು ಹದಿನಾರು ಜನ ಮಕ್ಕಳು. ಎಂಟು ಗಂಡು, ಎಂಟು ಹೆಣ್ಣು. ಇದಲ್ಲದೇ, ನೆಂಟರಿಷ್ಟರ ಮಕ್ಕಳು ರಜದಲ್ಲಿ ಬರುತ್ತಿದ್ದರು.... ಮನೆಯಲ್ಲಿ

ಅಡಿಗೆಯವರಿದ್ದರು, ಕೆಲಸದವರಿದ್ದರು, ಹೊರಗಿನ ಕೆಲಸಕ್ಕೆ ಆಳುಕಾಳುಗಳಿದ್ದರು. ಸ್ಕೂಲಿಗೆ ತಾವು ತಾವೇ ಸಿದ್ಧರಾಗಿ, ಪ್ರಾರ್ಥನೆಯ ಹೊತ್ತಿಗೆ, ಓಡಿ ಹೋಗಿ ಸ್ಕೂಲನ್ನು ತಲುಪುತ್ತಿದ್ದುದು ಮಾತ್ರ ನೆನಪಿದೆ. ಅಮ್ಮನಾಗಲೀ, ಅಪ್ಪನಾಗಲೀ, ಸ್ಕೂಲಿನಲ್ಲಿ ಏನು ಹೇಳಿಕೊಟ್ಟರು? ಪರೀಕ್ಷೆ ಯಾವಾಗ? ಎಷ್ಟು ಅಂಕಗಳು ಬಂದವು, ಒಂದನ್ನೂ ವಿಚಾರಿಸಿದ್ದಿಲ್ಲ. ಅಮ್ಮ ಹೆಚ್ಚು ಕಡಿಮೆ ತನ್ನ ಕತ್ತಲು ಕೋಣೆಯಲ್ಲಿ ಕಾಲವನ್ನು ಕಳೆಯುತ್ತಿದ್ದಳು. ಅಪ್ಪ, ಮನೆಯಲ್ಲಿದ್ದ ಹೊತ್ತಿನಲ್ಲಿ ಅಮ್ಮನ ಕೋಣೆಯಲ್ಲಿರುತ್ತಿದ್ದರು. ಅಲ್ಲಿಗೆ ಮಕ್ಕಳು ಹೋಗುವಂತಿರಲಿಲ್ಲ. ಹೋಗಬೇಕು ಎಂದೆನಿಸುತ್ತಲೂ ಇರಲಿಲ್ಲ. ಅಮ್ಮನ ಮಗ್ಗುಲಲ್ಲಿ, ಅಥವಾ ಮಡಿಲಲ್ಲಿ ಅವಳ ಕೈಗೂಸು ಇರುತ್ತಿತ್ತು.

ತನಗೆ ಐದು ಜನ ಅಕ್ಕಂದಿರು, ಮೂರು ಜನ ತಂಗಿಯರು, ಆರು ಜನ ಅಣ್ಣಂದಿರು, ಒಬ್ಬನೇ ಒಬ್ಬ ತಮ್ಮ. ಅವನೂ ಚಿಕ್ಕ ವಯಸ್ಸಿನಲ್ಲೇ ಮನೆ ಬಿಟ್ಟು ಹೋದವನು ಇದುವರೆಗೂ ಹಿಂತಿರುಗಿಲ್ಲ. ಎಲ್ಲಿ ಹೋದನೋ? ಯಾಕೆ ಹೋದನೋ? ಎಲ್ಲಿದಾನೋ.... ಒಂದೂ ತಿಳಿಯದು.

ಅಕ್ಕಂದಿರಿಗೆ ಬೇಗ ಬೇಗ ಮದುವೆಯಾಗಿ, ಅವರಿಗೂ ಬೇಗ ಬೇಗ ಮಕ್ಕಳೂ ಹುಟ್ಟಿದವು. ಅಣ್ಣಂದಿರು ಓದು ಮುಗಿಸಿ, ಕೆಲಸಕ್ಕೆ ಸೇರಿಕೊಂಡು, ಬೇರೆ ಬೇರೆ ಊರಿಗೆ ಹೊರಟು ಹೋಗಿದ್ದರು. ತನಗೆ ವಿದ್ಯೆ ಹತ್ತಿರಲಿಲ್ಲ. ಅಲ್ಲದೇ ತಾನೇ ಚಿಕ್ಕವನೆಂದು, ಅಪ್ಪ ತನ್ನನ್ನು ತನ್ನ ಬಳಿಯೇ ಇಟ್ಟುಕೊಂಡಿದ್ದರು. ತನಗೆ ಒಂದು ಚಿಲ್ಲರೆ ಅಂಗಡಿಯನ್ನು ಹಾಕಿಸಿ ಕೊಟ್ಟಿದ್ದರು. ಅದು ಕೇವಲ ಕಾಲವ್ಯಯಕ್ಕೆ ಮಾತ್ರ. ಅದರಿಂದ ಆದಾಯವೂ ಇರಲಿಲ್ಲ, ಲಾಭವಂತೂ ಇಲ್ಲವೇ ಇಲ್ಲ.

ಅಮ್ಮ ಸತ್ತಾಗ, ತನಗೆ ಕೇವಲ ಇಪ್ಪತ್ತೈದು ವರ್ಷ.... ಐದು ಜನ ಅಣ್ಣಂದಿರಿಗೆ ಮದುವೆಯಾಗಿತ್ತು. ಆರನೆಯವನ ಮದುವೆ ಗೊತ್ತಾಗಿತ್ತು. ಮೂರನೇ ತಂಗಿ ಓದುತ್ತಿದ್ದಳು. ಉಳಿದಿಬ್ಬರು ತಂಗಿಯರಿಗೂ ಮದುವೆ ಯಾಗಿತ್ತು. ದಿನ ಕರ್ಮಗಳು ಮುಗಿದ ನಂತರ ಒಂದು ದಿನ ತಾಯಿಯ ಒಡವೆ ವಸ್ತುಗಳನ್ನು, ಬೆಳ್ಳಿಯ ಪಾತ್ರೆ ಪಡಗಗಳನ್ನು ಆಚೆ ತೆಗೆದರು.

ಹೆಣ್ಣು ಮಕ್ಕಳು, ಸೊಸೆಯಂದಿರು ಒಡವೆಗಳನ್ನು ಬೆಳ್ಳಿಯನ್ನು ತಮತಮಗೆ ಬೇಕೆನ್ನಿಸಿದ್ದನ್ನು ತೆಗೆದುಕೊಂಡರು. ಕಡೆಯಲ್ಲಿ ಶೇಷಾದ್ರಿಗೆ, ಅವನ ತಂಗಿ ಮಂಜುಳಂಗೆ ಏನೂ ಉಳಿಯಲಿಲ್ಲ. ಯಾರೂ ಗಣನೆಗೂ ತೆಗೆದುಕೊಳ್ಳಲಿಲ್ಲ. ಆಗ ಯಾರಿಗೂ ತಿಳಿಯದಂತೆ ಉಳಿದು ಹೋದ ಒಡವೆ ಎಂದರೆ, ಒಂದು ಜೊತೆ ಓಲೆಗಳು ಹಾಗೂ ಮೂಗುಬೊಟ್ಟು. ತಾಯಿ ಎಣ್ಣೆ ಸ್ನಾನ ಮಾಡುವಾಗ ತೆಗೆದಿರಿಸುತ್ತಿದ್ದುದರಿಂದ, ಅವುಗಳು ಹಾಸಿಗೆಯ ದಿಂಬಿನಡಿಯಲ್ಲಿ ಒಂದು

ಚಿಕ್ಕ ಡಬ್ಬಿಯಲ್ಲಿದ್ದುದು, ಹೇಗೋ ಗೂಡಿನ ಬಟ್ಟೆಗಳ ನಡುವೆ ಸೇರಿಕೊಂಡಿತ್ತು.

ತಂಗಿ ಮಂಜುಳ ಅಳುತ್ತಿದ್ದಳು. ತಾಯಿಯನ್ನು ನೆನೆಸಿಕೊಂಡೋ, ಅಥವಾ ತನಗೆ ಏನೂ ಸಿಗಲಿಲ್ಲವೆಂದೋ, ಯಾರು ಅತ್ತ ಗಮನ ಕೊಡಲಿಲ್ಲ. ಶೇಷಾದ್ರಿಗೆ ತಂಗಿಯ ಬಗ್ಗೆ ಮರುಕ ಹುಟ್ಟಿತು. "ಅಳ್ಬೇಡ ಮಂಜೂ, ನಾವು ನತದೃಷ್ಟರು.... ನಾನು ಅಪ್ಪನ ಹತ್ತಿರ ಮಾತನಾಡಿ ನಿನಗೆ ಹೊಸ ಒಡವೆಗಳನ್ನು ಮಾಡಿಸಿ ಕೊಡುತ್ತೇನೆ..." ಎಂದಿದ್ದ.

"ಅಮ್ಮನ ನೆನಪಾಗಿ, ನನಗೆ ನಿನಗೆ ಏನೂ ಸಿಗಲಿಲ್ಲವಲ್ಲೋ ಶೇಷೂ.... ಅತ್ತಿಗೆಯರಿಗಿಂತ ಹೆಚ್ಚಾಗಿ, ಅಕ್ಕಂದಿರೂ ಸ್ವಾರ್ಥಿಗಳಾಗಿ ಬಿಟ್ಟರಲ್ಲ...."

ಅಣ್ಣ ತಂಗಿಯರಿಬ್ಬರೂ ಒಂದು ಕಡೆ ನಿಂತು ಕೆಳದನಿಯಲ್ಲಿ ಮಾತನ್ನಾಡುತ್ತಿದ್ದುದನ್ನು ಕೆಲವರು ಗಮನಿಸಿದರು. ಹಿಂದಿನ ವರ್ಷವಷ್ಟೇ ಮದುವೆಯಾಗಿದ್ದ ಅಕ್ಕ ಅವರ ಬಳಿಗೆ ಬಂದಳು. "ಮಂಜೂ.... ಬೇಜಾರು ಮಾಡ್ಕೋಬೇಡ್ವೇ... ಅತ್ತೆ ಮನೇಲಿ ಅವತ್ನಿಂದ್ಲೇ ನಿಮ್ಮಮ್ಮನ ಒಡವೆಗಳಲ್ಲಿ ನಿಂಗೂ ಏನಾದ್ರೂ ಸಿಗುತ್ತಾ ಅಂತ ವ್ಯಂಗ್ಯವಾಗಿ ವಿಚಾರಿಸ್ತಾನೇ ಇದ್ರು.... ಇಲ್ದಿದ್ರೆ ನಿಂಗೇ ಕೊಟ್ಟು ಬಿಡ್ತಿದ್ದೆ....ಅತ್ತೆಗೆ ಉತ್ತರ ಕೊಡಬೇಕಲ್ಲ.... ನಿಂಗೆ ಇನ್ನೂ ಮದುವೆ ಆಗಿಲ್ಲವಲ್ಲ.... ಆ ಹೊತ್ತಿಗೆ ಹೊಸಾ ಒಡವೇನೇ ಮಾಡಿಸ್ಕೊಳ್ಳುವಂತೆ.... ಇವೆಲ್ಲಾ ಬಹಳ ಹಳೇದು...." ಶೇಷಾದ್ರಿ ಅಕ್ಕನ ಕಡೆ ನಿರ್ಭಾವದಿಂದ ನೋಡಿದ.

"ಇವಳೂ ನಿಮ್ಮ ಹಾಗೇ ಅಮ್ಮನ ಮಗಳು ತಾನೇ...? ನೀವೆಲ್ಲಾ ಇವಳನ್ನು ಹೇಗೆ ಮರೆತ್ರೀ?" ರೋಷದಿಂದ. ಇತ್ತ ತಿರುಗಿದರು, ಎಲ್ಲರೂ...

"ಶೇಷೂ, ಈಗ ಆಪಾದನೆ ಹಾಕ್ತೀಯಲ್ಲ. ನೀನೂ ನೋಡ್ತಾ ನಿಂತಿದ್ದೆಯಲ್ಲ, ಹೇಗೂ ನಿನಗೆ, ಇವಳಿಗೆ ಮದುವೆ ಆಗಿಲ್ಲವಲ್ಲ ಅಂತ ಸುಮ್ಮನಾದೆವು.... ಬಾಯಿಬಿಟು ಕೇಳ್ಬೇಕಾಗಿತ್ತು...." ಅತ್ತಿಗೆ ನುಡಿದಳು.

"ಹೋಗ್ಲೀ ಬಿಡಿ ಅತ್ತಿಗೆ.... ನನಗೆ ಏನೂ ಬೇಡ, ಇವನನ್ನು ಬೈಯಬೇಡಿ...."

"ಸರಿ ಈಗೇನೂ? ನಿಮಗೆ ಸಮಾಧಾನವಿಲ್ಲದಿದ್ದರೆ, ನಾವ್ಯಾರೂ ಇದನ್ನು ಮುಟ್ಟೋಲ್ಲ.... ಎಲ್ಲವನ್ನೂ ನೀವೇ ಇಟ್ಕೊಳ್ಳಿ...." ಇನ್ನೊಬ್ಬಳು ಅತ್ತಿಗೆ ನುಡಿದಳು.

"ಸಾರೀ ಅತ್ತಿಗೆ.... ಇವನ ಪರವಾಗಿ ನಾವು ಕ್ಷಮೆ ಕೇಳ್ತೀವಿ...." ತಂಗಿಯರು ನುಡಿದರು. ನಮಗೆ ಯಾವ ಆಸೆಯೂ ಇಲ್ಲ.... ಆದರೆ ಅತ್ತೆ ಕೇಳಿದರೆ ಹೇಳ್ಬೇಕಲ್ಲ, ಅದಕ್ಕೆ ತೆಗೆದುಕೊಂಡೆವು...." ಸಮರ್ಥನೆಯನ್ನು ನುಡಿದರು.

"ನಮಗೂ ಯಾವ ಆಸೆಯೂ ಇಲ್ಲಮ್ಮ... ಆದರೆ ನಾವೂ ಈ ಮನೆಯವರೇ.... ನಮಗೂ ಹಕ್ಕಿದೆ ಅಲ್ವಾ? ನಾವಾಗೇ ಕೇಳದಿದ್ರೆ ನಮಗೆ ಯಾರೂ ಏನೂ ಕೊಡುಲ್ಲ...." ಹೆಣ್ಣು ಮಕ್ಕಳ ಕಡೆ ನೋಡಿದಳು ಅತ್ತಿಗೆ.

"ಏನತ್ತಿಗೇ ಹೀಗೆ ಮಾತಾಡ್ತೀರಾ? ಹುಟ್ಟಿದ ಮನೆಯನ್ನು ಬಿಟ್ಟು ಹೋಗಿರುವ ಹೆಣ್ಣು ಮಕ್ಕಳಿಗೆ ಅಮ್ಮನ ನೆನಪಿಗೆ ಅಂತ ಏನಾದ್ರೂ ಇಟ್ಕೊಂಡ್ರೆ ತಪ್ಪಾ? ....ತಾಯಿಯೇ ಇಲ್ಲದಿದ್ದ ಮೇಲೆ ತವರಿಗೆ ಯಾಕೆ ಪದೇ ಪದೇ ಬರ್ತೀವಿ? ಹೀಗೆಲ್ಲಾ ಮಾತಾಡಬಹುದಾ ನೀವು?...." ಹೆಣ್ಣು ಮಕ್ಕಳು ಇದೇ ನೆವ ಮಾಡಿಕೊಂಡು ಅಳತೊಡಗಿದ್ದರು.

"ಸಾಕು ನಿಲ್ಸಿ, ಏನಾಗ್ಹೋಯ್ತು ಅಂತ ಹೀಗೆ ಅಳ್ತೀರಿ? ....ನಾನೇನು ಅನ್ನಬಾರದ್ದನ್ನು ಅಂದೆ? ....ಈ ಮನೇಲೇನು ಶ್ರೀಮಂತಿಕೆ ಕುಣಿದಾಡ್ತಾ ಇದೆಯಾ? ....ಮನೆ ತುಂಬಾ ಸಾಲಾಗಿ ಹದಿನಾರು ಮಕ್ಕಳು.... ಏನು ಆಸ್ತೀನೇ ಪಾಸ್ತೀನೇ....? ನಿಮ್ಮ ಅಣ್ಣಂದಿರು ತಾವೇ ದುಡಿದು ಸಂಪಾದಿಸ್ತಾ ಇರೋದ್ರಿಂದ ಇಷ್ಟರ ಮಟ್ಟಿಗೆ ಇದೀವಿ.... ಇಲ್ದಿದ್ರೆ ಈ ಶೇಷಾದ್ರಿ ತರಹ ಒಂದು ಚಿಲ್ಲರೆ ಅಂಗಡಿ ಇಟ್ಕೊಂಡು ಅಪ್ಪನ ಹಂಗಿನಲ್ಲಿರಬೇಕಾಗಿತ್ತು...."

"ನನ್ನನ್ಯಾಕೆ ಅಂತೀರಿ ಅತ್ತಿಗೆ? ನನಗೆ ವಿದ್ಯೆ ಹತ್ತಲಿಲ್ಲ, ಓದಲಿಲ್ಲ. ಅಣ್ಣಂದಿರನ್ನೆಲ್ಲ ಅಪ್ಪನೇ ಓದಿಸಿದ್ದು.... ಕೆಲಸಕ್ಕೆ ಸೇರಿ, ಅವರವರ ಪಾಡಿಗೆ ಹಾಯಾಗಿದಾರೆ.... ಅಂತಂದ್ರೆ ಅದಕ್ಕೂ ಅಪ್ಪನೇ ಕಾರಣ...."

"ಹೌದಪ್ಪಾ.... ಎಲ್ಲಾದಕ್ಕೂ ನಿಮ್ಮ ಅಪ್ಪನೇ ಕಾರಣ....ಇನ್ನು ಸಾಕು ಮಾತು. ಜುಜುಬಿ ಈ ಒಡವೆಗಳಿಗೇ ಇಷ್ಟು ಮಾತುಗಳನ್ನು ಕೇಳಿದ್ದಾಯ್ತು.... ಇನ್ನು ಈ ಮನೇನ ಮಾರಿ ಬಂದ ಹಣವನ್ನು ಕೊಡುವಾಗ ಏನು ಮಾರಾಮಾರಿ ಯಾಗುತ್ತೋ....."

"ಈ ಮನೇನ ಮಾರುವ ಮಾತು ಈಗ್ಯಾಕೆ? ಅಪ್ಪ ಇನ್ನೂ ಬದುಕಿದಾರೆ. ಅವರು ಸಂಪಾದಿಸಿ ಕಟ್ಟಿಸಿದ ಮನೆ ಇದು.... ಅವರಿಗೆ ಇಷ್ಟ ಬಂದಂತೆ ಮಾಡಲಿ.... ಅಪ್ಪ ಇರೋವರ್ಗೂ ಈ ಮನೇಲೇ ಇರ್ತಾರೆ...." ಹಿರೀ ಮಗ ಹೇಳಿದ.

"ಅಮ್ಮ ಇಲ್ಲದ ಮನೇಲಿ ಅಪ್ಪ ಒಬ್ಬರೇ ಹೇಗೆ ಇರ್ತಾರೆ? ...ಎಲ್ಲರ ಮನೇಲೂ ಸ್ವಲ್ಪ ಸ್ವಲ್ಪ ದಿನ ಇರಲಿ..." ಹಿರೀ ಮಗಳು ಹೇಳಿದಳು.

"ಎಲ್ಲರ ಮನೆ ಅಂದ್ರೆ ಏನು? ಗಂಡು ಮಕ್ಕಳ ಮನೆ ತಾನೇ...." ಅತ್ತಿಗೆ ವ್ಯಂಗ್ಯವಾಗಿ ಕೇಳಿದಾಗ ಶೇಷಾದ್ರಿ ರೋಷದಿಂದ ನುಡಿದ.

"ಅಪ್ಪ ಯಾರ ಮನೆಗೂ ಹೋಗುಲ್ಲ. ಎಲ್ಲಿಯೂ ಇರುಲ್ಲ. ಇಲ್ಲೇ ಇರ್ತಾರೆ... ನಿಮಗ್ಯಾರಿಗೂ ಚಿಂತೆ ಬೇಡ...."

"ಹಾಗಾದ್ರೆ ಅಪ್ಪನ್ನ ನೀನು ನೋಡ್ಕೋತೀಯೋ....? ಅಂಗಡಿ ಕೆಲಸಾನ ನೋಡ್ಕೋತೀಯಾ? ಅಡಿಗೆ ಮಾಡಿ ಹಾಕ್ತೀಯೋ....?"

"ಹೇಗೋ ನೋಡ್ಕೋತೀನಿ, ಅದೆಲ್ಲಾ ನಿಮಗ್ಯಾಕೆ?" ಎಂದು ಬಿಟ್ಟ.

. . .

"ಹೌದು ನಮಗೆಲ್ಲ ಯಾಕೆ? ....ನೀನೊಬ್ಬನೇ ತಾನೇ ಅಪ್ಪನಿಗೆ ತಕ್ಕ ಮಗ...."

"ಅತ್ತಿಗೆ ಹೀಗೆಲ್ಲಾ ಮಾತಾಡ್ಬೇಡಿ.... ನಂಗೆ ಕೋಪ ಬರುತ್ತೆ...."

"ಕೋಪ ಮಾಡ್ಕೋಪ್ಪಾ.... ಯಾರು ಬೇಡಾಂದ್ರು.... ನಮಗೆ ಇಲ್ಲಿ ಇನ್ನು ಏನು ಕೆಲಸ?" ಹಿರಿಯ ಸೊಸೆ ಹೊರಡಲು ಸಿದ್ಧಳಾದಳು.

"ಸಾರೀ ಅತ್ತಿಗೇ, ಏನೋ ಬೇಸರವಾಗಿತ್ತು.... ಮಾತಾಡ್ಬಿಟ್ಟೆ ಕ್ಷಮಿಸಿ...." ಎಂದು ಹೇಳಿ ಅಲ್ಲಿ ನಿಲ್ಲದೇ ಶೇಷಾದ್ರಿ ಹೊರಗೆ ಹೊರಟು ಹೋದ.

"ನೀನು ಸುಮ್ಮನಿರ್ತ್ಬಾರ್ದಾ? ಈಗಾಗ್ಲೇ ಒಬ್ಬ ಮಗ ಮನೆ ಬಿಟ್ಟು ದೇಶಾಂತರ ಹೊರಟು ಹೋಗಿದಾನೆ.... ಇವನೂ ಬೇಸರ ಮಾಡ್ಕೊಂಡು ಹೊರಟು ಹೋದ್ರೆ...ಅಪ್ಪನ ಗತಿ ಏನು?" ಅಣ್ಣ ಗದರಿದಾಗ ಎಲ್ಲರೂ ಒಂದು ಗಳಿಗೆ ಸುಮ್ಮನಾದರು.

"ಹೌದುರೀ.... ನಿಮ್ಮಮ್ಮ ಸತ್ತಾಗಲೂ ಆ ಮಗ ಬರಲೇ ಇಲ್ಲವಲ್ಲ... ಯಾಕೆ?"

"ಅವನು ಸನ್ಯಾಸಿಯಾಗಿದಾನಂತೆ.... ಹಾಗೆಲ್ಲಾ ಬರುವಂತಿಲ್ಲ...."

"ಹಾಗಾದ್ರೆ, ಅವನಿಗೆ ನಿಮ್ಮಪ್ಪನ ಆಸ್ತಿಯಲ್ಲಿ ಯಾವ ಪಾಲನ್ನೂ ಕೊಡಬೇಕಾಗಿಲ್ಲ ಅಲ್ವಾ?" ಮತ್ತೊಬ್ಬ ಅತ್ತಿಗೆ ಕೇಳಿದಾಗ, ಅವಳ ಗಂಡ ಕನಲಿ ನುಡಿದ.

"ನಿಮಗೊಳ್ಳೇ ಆಸ್ತಿ ಚಿಂತೆಯಲ್ಲ... ಅದನ್ನೆಲ್ಲ ನೋಡ್ಕೊಳ್ಳೋಕೆ ಅಪ್ಪ ಇನ್ನೂ ಇದಾರೆ.... ಇನ್ಯಾವತ್ತೂ ಯಾರೂ ಈ ವಿಷಯ ಮಾತಾಡಕೂಡದು...." ಗದರಿ ನುಡಿದಾಗ ಎಲ್ಲರೂ ಗಪ್ ಚುಪ್ ಆದರು. ಆದರೂ, ಎಲ್ಲರ ಆಸಕ್ತಿಯೂ .... ಆಸ್ತಿಯ ಪಾಲಿನ ಮೇಲೇ ಎನ್ನುವುದು ಅರ್ಥವಾಗಿತ್ತು.... ಎಲ್ಲರೂ ತಮ್ಮ ತಮ್ಮ ಮನೆಗೆ ಹೋಗುವ ಮೊದಲು, ಅಮ್ಮನ ನೆನಪಿಗೆ ಅಂತ ಕೇಳಿ ಕೇಳಿ, ಸಣ್ಣ ಸಣ್ಣ ವಸ್ತುಗಳನ್ನು ತೆಗೆದಿಟ್ಟುಕೊಂಡರು. ಚಿಕ್ಕ ತಂಗಿ ಮನದಲ್ಲೇ ಅತ್ತಳು. ಶೇಷಾದ್ರಿ ಹಲ್ಲು ಕಡಿದ.

*****

"ವರ್ಷ ಕಳೇಯೋದರಲ್ಲಿ ಮಂಜೂಗೆ ಮದುವೆ ಮಾಡಿಬಿಡೋಣ... ಅಮ್ಮನಿಗೆ ಕನ್ಯಾದಾನದ ಪುಣ್ಯ ಸಿಗಲಿ...." ದೊಡ್ಡ ಹೆಣ್ಣು ಮಕ್ಕಳು ಅಭಿಪ್ರಾಯ ಪಟ್ಟರು. ತಂದೆ ಬೇಡ ಅನ್ನಲಿಲ್ಲ.... ಮಂಜು ಕೂಡಾ ಬೇಡಾ ಅನ್ನಲಿಲ್ಲ. ಅವಳ ಮನಸ್ನಲ್ಲಿ ಏನು ಆಸೆ ಇತ್ತೋ, ಗಂಡು ಮಕ್ಕಳು ಯಾವ ಜವಾಬ್ದಾರಿಯನ್ನೂ ಹೊರಲು ಸಿದ್ಧರಾಗಿರಲಿಲ್ಲ. ಎರಡನೆಯ ಅಕ್ಕ ತನ್ನ ಕಡೆಯ ಗಂಡೊಂದನ್ನು ಗೊತ್ತು ಮಾಡಿದಳು.

"ಅವನಿಗೆ ನಮ್ಮ ಮನೆಯ ಕಷ್ಟ ಸುಖ ಎಲ್ಲಾ ತಿಳಿದಿದೆ. ಸರಳವಾಗಿ ಮದುವೆ ಮಾಡಿಕೊಟ್ಟರೂ ಸಾಕು ಎಂದಿದಾರೆ.... ಆದರೆ ವರನಿಗೆ ಸ್ವಲ್ಪ ವರದಕ್ಷಿಣೆ ಕೊಡಬೇಕು. ಅವನು, ಏನೋ ಸಾಲ ಮಾಡಿಕೊಂಡಿದಾನಂತೆ.... ತೀರಿಸ್ಕೊಳ್ತಾ ನಂತೆ...." ಎಂದಳು.

"ಅಂಥಾ ಗಂಡು ಬೇಡವೇ ಬೇಡ. ವರದಕ್ಷಿಣೆ ಯಾಕೆ ಕೊಡ್ಬೇಕು! ಯಾರಿಗೂ ಕೊಟ್ಟಿಲ್ಲ...." ತಂದೆ ನುಡಿದಾಗ, ಶೇಷಾದ್ರಿ ಮಧ್ಯೆ ಬಾಯಿ ಹಾಕಿದ್ದ.

"ವರದಕ್ಷಿಣೆ ಕೊಟ್ಟರಾಯ್ತು... ಅವರಿಗೆ ನಮ್ಮ ಹಣದಿಂದ ಅನುಕೂಲ ವಾಗಿ, ನಮ್ಮ ಮಂಜೂನ ಚೆನ್ನಾಗಿ ನೋಡ್ಕೊಂಡ್ರೆ ಅಷ್ಟು ಸಾಕು...."

"ಹಣಕ್ಕೆ ಏನು ಮಾಡೋದೋ....? ನಿಮ್ಮಮ್ಮನ ಒಡವೆಗಳೂ ಇಲ್ಲವಲ್ಲ...."

"ಅಂಗಡೀನ ಮಾರಿ ಬಿಡೋಣ ಅಪ್ಪಾ.... ಅದರಿಂದ ಲಾಭ ಅಷ್ಟರಲ್ಲೇ ಇದೆ...."

"ಬೇಡ.... ಅದು ನಿನಗೆ ಸೇರಿದ್ದು...."

"ನಾನು ಬೇರೆ ಕಡೆ ಕೆಲಸಕ್ಕೆ ಸೇರಿ, ಅಣ್ಣಂದಿರಂತೆ ಸಂಪಾದನೆ ಮಾಡ್ತೀನಿ. ಈ ವ್ಯಾಪಾರ ನನಗೆ ಸರಿ ಬರ್ಲಿಲ್ಲ.... ನಾನು ನಿರ್ಧರಿಸಿದ್ದಾಗಿದೆ..." ಅವನು ದೃಢವಾಗಿ ಹೇಳಿದಾಗ ಅಣ್ಣಂದಿರೂ ಅದನ್ನು ಅನುಮೋದಿಸಿದರು. ಕೆಲವೇ ದಿನಗಳಲ್ಲಿ ಮದುವೆ ನಿಶ್ಚಯವಾಗಿತ್ತು. ಅಂಗಡಿಯನ್ನು ತಕ್ಕ ಬೆಲೆಗೆ ಮಾರಿದ್ದಾಗಿತ್ತು. ವರ ಕೇಳಿದಷ್ಟು ಹಣವನ್ನು ಕೊಟ್ಟು ತಕ್ಕ ಮಟ್ಟಿಗೆ ಮದುವೆಯನ್ನು ಮಾಡಿಕೊಟ್ಟರು. ಮಂಜುಗೆ ಹೊಸ ಒಡವೆಗಳನ್ನು ತಂದಿದ್ದರು.

ಅವಳನ್ನು ಕಳಿಸಿ ಕೊಡುವಾಗ, ಶೇಷಾದ್ರಿ ಹೇಳಿದ್ದ...." ಅಮ್ಮನ ನೆನಪಾಗಿ ನಿನಗೆ ಏನೂ ಸಿಕ್ಕಲಿಲ್ಲವಲ್ಲೇ ಮಂಜು.... ನಿನ್ನ ಅತ್ತೆ ಮನೆಯವರು ಕೇಳಿದ್ರೆ ಏನು ಹೇಳ್ತೀಯಾ?"

"ಅಮ್ಮನ ಹತ್ರ ಯಾವ ಒಡವೆಯೂ ಇರ್ಲಿಲ್ಲ ಅಂತ ಹೇಳ್ತೀನಿ.... ನನಗೆ ಯಾವ ಚಿಂತೆಯೂ ಇಲ್ಲ.... ಆದರೆ, ಇಲ್ಲಿ ನೀನು ಹೇಗೆ ಇರ್ತೀಯಾ? ...ಅಪ್ಪನೂ ನಿನ್ನ ಜತೇಲಿರ್ತಾರೆ... ಅಂಗಡಿಯೂ ಇಲ್ಲ, ಏನು ಮಾಡ್ತೀಯಾ....?"

"ಬೆಂಗಳೂರಿನಲ್ಲಿ ಯಾವುದಾದ್ರೂ ಕೆಲಸಕ್ಕೆ ಸೇರ್ಕೊಂಡು, ಅಪ್ಪನ್ನೂ ನೋಡ್ಕೊಳ್ತೀನಿ. ಹಾಗೇ ನನ್ನ ಓದನ್ನೂ ಮುಂದುವರೆಸ್ತೀನಿ...." ಎದೆ ಉಬ್ಬಿಸಿ ಹೇಳಿದ.

"ಒಬ್ಬನೇ ಆಗಿ ಬಿಟ್ಯಲ್ಲಾ ಕಷ್ಟ ಆಗುಲ್ವಾ?"

"ಇನ್ನು ಮುಂದೆ ಕಷ್ಟ ಪಡ್ತೀನಿ. ಇದುವರೆಗೂ ಆರಾಮವಾಗಿದ್ದುದು ಸಾಕು...." ಎಂದು ಹೇಳಿ ಅವಳ ತಲೆ ಸವರಿ ಕಳಿಸಿ ಕೊಟ್ಟಿದ್ದ.

*****

ಕಷ್ಟಪಟ್ಟು ಹುಡುಕಿದ ನಂತರ, ಸುಮಾರಾದ ಒಂದು ಕೆಲಸ ಸಿಕ್ಕಿತ್ತು. ಅಪ್ಪನಿಗೂ ಸಂತೋಷವಾಗಿತ್ತು.... ತಾನೀಗ ಇಲ್ಲಿ ಒಂಟಿಯಾಗಿ ಇರುವುದಂತೂ ಸಾಧ್ಯವಿಲ್ಲ. ಮನೆಯನ್ನು ಮಾರಿ ಬಿಡುವುದೇ ಸರಿ ಎಂದು ತೀರ್ಮಾನಿಸಿ, ಮಕ್ಕಳನ್ನು ಕರೆಸಿ ಮಾತನಾಡಿದರು. ಗಂಡು ಮಕ್ಕಳಿಗೆ, ಒಳಗೊಳಗೇ ಖುಷಿ ಯಾಗಿತ್ತು. ಮನೆಯನ್ನು ಎರಡು ಲಕ್ಷ ರೂಗಳಿಗೆ ಮಾರಿ ಆರು ಜನ ಗಂಡು ಮಕ್ಕಳಿಗೆ ಇಪ್ಪತ್ತೈದು ಸಾವಿರ ರೂ. ತಲಾ ಒಬ್ಬೊಬ್ಬರಿಗೆ ಕೊಟ್ಟು ಪತ್ರವನ್ನು ಬರೆಸಿಟ್ಟುಕೊಂಡರು. ಉಳಿದ ಹಣದಲ್ಲಿ ಹೆಣ್ಣು ಮಕ್ಕಳಿಗೆ ಸಾವಿರ ಸಾವಿರ ರೂಗಳನ್ನು ಅರಶಿನ ಕುಂಕುಮಕ್ಕೆಂದು ಕೊಟ್ಟು, ಉಳಿದ ಹಣವನ್ನು ಶೇಷಾದ್ರಿಯ ಕೈಗೆ ಕೊಟ್ಟರು. "ನಾನು ಇವನ ಜತೆಯಲ್ಲಿ ಇರ್ತೀನಿ.... ಈ ಮನೆಯ ಸಾಮಾನು ಗಳಲ್ಲಿ ಯಾರಿಗೆ ಏನು ಬೇಕೋ ಅದನ್ನು ತೆಗೆದುಕೊಂಡು ಹೋಗಬಹುದು. ಆದರೆ ನಿಮ್ಮ ನಿಮ್ಮಲ್ಲಿ ಕಿತ್ತಾಡಬೇಡಿ.... ಇದರಿಂದ ನಿಮ್ಮ ಅಮ್ಮನ ಆತ್ಮ ನೊಂದು ಕೊಳ್ಳುತ್ತೆ...." ಎಂದರು.

ಶೇಷಾದ್ರಿ ತನಗೆ ಏನೂ ಬೇಡವೆಂದು ಖಡಾ ಖಂಡಿತವಾಗಿ ಹೇಳಿ ಬಿಟ್ಟ. ಅಮ್ಮನನ್ನು ನಾನು ಎಂದಿಗೂ ಮರೆಯುವುದಿಲ್ಲ. ನನ್ನ ತಮ್ಮ ಮನೆ ಬಿಟ್ಟು ಓಡಿ ಹೋದ ಎಂಬ ಕಾರಣದಿಂದ, ಅಮ್ಮ ನನ್ನನ್ನು ಹೆಚ್ಚು ಹೆಚ್ಚು ಮುದ್ದಿಸಿದಳು. ಆ ಮುದ್ದಿನಿಂದ ನಾನು ಸೋಮಾರಿಯಾದೆ, ಮನೆಯಲ್ಲೇ ಉಳಿದೆ. ಅದು ತಪ್ಪೋ ಸರಿಯೋ ನನಗೆ ತಿಳಿಯದು. ಆದರೆ ಅಪ್ಪನನ್ನು ನೋಡಿಕೊಳ್ಳುವ ಜವಾಬ್ದಾರಿ, ಕರ್ತವ್ಯ ನನ್ನದು. ಅದಕ್ಕೆ ಅಪ್ಪಣೆ ಕೊಡಿ..." ಎಂದು ವಿನಂತಿಸಿಕೊಂಡ.

"ಅಪ್ಪನಿಗೆ ನಿನ್ನ ಜತೆ ಇರ್ಬೇಕು ಅಂತ ಇಷ್ಟವಿರುವಾಗ ನಾವೇಕೆ ತಡೆ ಯೋಣ ....? ಆದರೆ ನೀನು ಹೀಗೆ ಒಬ್ಬನೇ ಇರೋಕೆ ಆಗುತ್ತಾ? ಮದುವೆ ಮಾಡಿಕೊಳ್ಳಲ್ವಾ? ....ನಿನ್ನ ಹೆಂಡತಿ ಅಪ್ಪನ್ನ ಚೆನ್ನಾಗಿ ನೋಡ್ಕೋತಾಳೆ ಅಂತ ಏನು ಗ್ಯಾರಂಟಿ?" ಮಧ್ಯದ ಅಣ್ಣ ಕೇಳಿದ್ದ.

"ಸಧ್ಯಕ್ಕೆ ನನಗೆ ಮದುವೆ ಯೋಚನೆ ಇಲ್ಲ. ಆ ಕಾಲ ಬಂದಾಗ ನೋಡಿ ಕೊಳ್ಳೋಣ" ಎಂದು ಹಾರಿಕೆಯ ಉತ್ತರವನ್ನು ಕೊಟ್ಟಿದ್ದ.

"ಆಗ ತಂದೆ ನೆನಪಾದವರಂತೆ, ತಮ್ಮ ಬಳಿ ಇದ್ದ ಚಿಕ್ಕ ಡಬ್ಬಿಯನ್ನು ತೆರೆದು ಮಕ್ಕಳಿಗೆ ತೋರಿಸಿದರು. ಇದು ನಿಮ್ಮ ಅಮ್ಮನ ಓಲೆಗಳು ಹಾಗೂ ಮೂಗು ಬೊಟ್ಟು. ಇದನ್ನು ಅವಳ ನೆನಪಿಗೆಂದು ನನ್ನ ಬಳಿ ಇಟ್ಟುಕೊಂಡಿ ದ್ದೇನೆ.... ನನ್ನ ಸಂಪಾದನೆಯ ಹಣದಲ್ಲಿ ನಾನೇ ತೆಗೆಸಿಕೊಟ್ಟ ಓಲೆಗಳು ಇವು. ಇದರ ಮೇಲಿನ ಸಂಪೂರ್ಣ ಹಕ್ಕು ನನ್ನದು...."

ಎಲ್ಲರೂ ಬಾಗಿ ಆ ಓಲೆ, ಮೂಗು ಬೊಟ್ಟನ್ನು ನೋಡಿದರು.... ತಮ್ಮ

ತಮ್ಮಲ್ಲೇ ಪಿಸುದನಿಯಲ್ಲಿ ಮಾತಾಡಿಕೊಂಡರು. ಆತ ನಕ್ಕು ಮುಂದುವರೆದರು. "ನೀವೆಲ್ಲರೂ ನಿಮ್ಮ ಅಮ್ಮನ ಒಡವೆಗಳನ್ನು ಹಂಚಿಕೊಂಡಿದೀರಿ... ಆದರೆ ಏನನ್ನೂ ತೆಗೆದುಕೊಂಡಿಲ್ಲದವರು ಈ ಮೂವರು. ಮನೆ ಬಿಟ್ಟು ಹೋದ ಸನ್ಯಾಸಿಗೆ ಈ ಒಡವೆಯ ಗೊಡವೆ ಯಾಕೆ? ...ಮಂಜು ಗಂಡನಿಗೆ ಇವನ ಅಂಗಡಿಯನ್ನು ಮಾರಿ, ವರದಕ್ಷಿಣೆಯನ್ನು ಕೊಟ್ಟಿದ್ದಾನೆ. ಹಾಗಾಗಿ ಈ ಒಡವೆಯನ್ನು ನಾನು ಶೇಷಾದ್ರಿಯ ಹೆಂಡತಿಯಾಗಿ ಬರುವವಳಿಗೆ ಉಡುಗೊರೆಯಾಗಿ ಕೊಡುತ್ತೇನೆ."

ಕೇ ವರು ತಮ್ಮ ತಮ್ಮಲ್ಲೇ ನಕ್ಕೊಂಡರು. "ಅಲ್ಲಾ ಮಾವ, ಈ ಹಳೆಯ ಓಲೆಗಳನ್ನು ನಿಮ್ಮ ಮುದ್ದಿನ ಸೊಸೆಗೆ ಅಂತ ಈಗ್ಲಿಂದ ಯಾಕೆ ಇಟ್ಕೋಬೇಕು. ಆ ಸಮಯ ಬಂದಾಗ ಹೊಸ ಓಲೆಗಳನ್ನು ಕೊಂಡುಕೊಂಡರಾಯ್ತು...."

"ಹೊಸ ಓಲೆ ಯಾಕೆ? ಇದು ಹಳೆಯ ಓಲೆಗಳೇ ಇರಬಹುದು. ಆದರೆ ಇದು ಇವನ ಪಾಲಿಗೆ...."

"ಇದಕ್ಕೋಸ್ಕರವೇ ತೆಗೆದಿಟ್ಟುಕೊಂಡಿದ್ರಾ? ನಮಗ್ಯಾರಿಗೂ ಒಂದ್ಮಾತು ಹೇಳ್ಲಿಲ್ಲ ನೀವು.... ಈ ವಾಲೆಗಳು ಅಪ್ಪನ ಹತ್ರ ಇತ್ತು ಅಂತ ನಿಂಗೆ ಗೊತ್ತಿತ್ತಾ ಶೇಷಾದ್ರೀ...."

"ಇಲ್ಲ, ನಂಗೆ ಏನೂ ಗೊತ್ತಿರ್ಲಿಲ್ಲ. ಅಮ್ಮನ ಹತ್ರ ಏನು ಒಡವೆಗಳಿದ್ದವು.... ಯಾವುದರ ಬೆಲೆ ಎಷ್ಟು ಅಂತ ಸಹ ನನಗಾಗಲೀ, ಮಂಜುಗಾಗಲೀ ಗೊತ್ತಿರ್ಲಿಲ್ಲ.... ಈ ಓಲೆಗಳೂ ನನಗೆ ಬೇಕಿಲ್ಲ. ಆದರೆ ಅಪ್ಪನ ಮಾತಿಗೆ ಎದುರಾಡುಲ್ಲ ನಾನು...."

"ಬಹಳ ಉದಾರಿ ನೀನು. ನಿನ್ನ ಅಪ್ಪನ ಹೃದಯವನ್ನು ಗೆದ್ದಿದೀಯ.... ಪರವಾಗಿಲ್ಲ. ನೀನು ಈ ಓಲೆಗಳನ್ನು ಇಟ್ಕೋ.... ಆದರೆ ನಿನ್ನ ಹೆಂಡತಿ ಆಗೋಳಿಗೆ ಇಷ್ಟವಾಗದೆಯೂ ಇರಬಹುದು. ಆಗ ಇದನ್ನು ಕೊಟ್ಟು ಹೊಸ ಓಲೆಗಳನ್ನು ತಗೊಂಡ್ರಾಯ್ತು.... ಅಬ್ಬಬ್ಬ ಅಂದ್ರೆ ಎಷ್ಟು ಬೆಲೆ ಬಾಳೀತು! ...ಚಿನ್ನ ಎಷ್ಟಿದ್ದೀತು? ....ಈ ಹಳೆಯ ಹರಳಿಗೆ ಯಾವ ಬೆಲೆಯೂ ಇಲ್ಲ...."

"ಪರವಾಗಿಲ್ಲ, ಹಳೆಯ ಹರಳಿನ ಓಲೆ ಆದರೇನಾಯ್ತು? ಅದಕ್ಕಿರುವ ಬೆಲೆ ಅದಕ್ಕೆ ಇದ್ದೇ ಇದೆ. ನಿಮಗೆ ಅರ್ಥವಾಗುಲ್ಲ ಬಿಡಿ...."

"ಚಿನ್ನದ ಬೆಲೆ ಈಗ ಹೇಗಿದೆ ಗೊತ್ತಾ? ....ಈಗ ನೀನು ಇದನ್ನು ಮಾರಿದರೂ, ಇದಕ್ಕೆ ಕೊಟ್ಟ ಬೆಲೆ ಸಹ ಸಿಗುಲ್ಲ...."

"ಇದನ್ನು ಯಾರೂ ಮಾರಕೂಡದು...." ಅಪ್ಪ ಎತ್ತರದ ದನಿಯಲ್ಲಿ ನುಡಿದಾಗ ಎಲ್ಲರೂ ತೆಪ್ಪಗಾದರು. ಅವರುಗಳೆಲ್ಲ ಅತ್ತ ಸರಿದ ಮೇಲೆ, ತಂದೆ ಶೇಷಾದ್ರಿಯನ್ನು ಬಳಿಗೆ ಕರೆದರು. ಬೇಜಾರು ಮಾಡ್ಕೋ ಬೇಡ್ವೋ

ಶೇಷು.... ಯಾವಕ್ಕೂ ಇದರ ನಿಜವಾದ ಬೆಲೆಯ ಅರಿವಿಲ್ಲ. ನಿನಗೆ ಎಷ್ಟೇ ಕಷ್ಟ ಬಂದರೂ, ಈ ಓಲೆಗಳನ್ನು ಮಾತ್ರ ಮಾರಬಾರದು. ಹಾಗಂತ ಭಾಷೆ ಕೊಡು." ಕೈ ಚಾಚಿದರು. ಅವನು ಅವರ ಹಸ್ತದ ಮೇಲೆ ತನ್ನ ಹಸ್ತವನ್ನು ಜೋಡಿಸಿದ.

"ಆಯ್ತು ಅಪ್ಪ... ಮಾತು ಕೊಡ್ತೀನಿ.... ಎಂದಿಗೂ ಇದನ್ನು ಮಾರುಲ್ಲ...." ಎಂದ.

"ಇದನ್ನು ನಿಮ್ಮಮ್ಮ ಧರಿಸಿದ ದಿನದಿಂದ, ನನ್ನ ಸಂಪಾದನೆ ಇಮ್ಮಡಿಯಾಯ್ತು.... ಮನೆ ನಂದಗೋಕುಲವಾಯ್ತು....ನಾನು ಅವಳು ಬಹಳ ಅನ್ಯೋನ್ಯವಾಗಿದ್ದೆವು. ಅವಳು ಅದೃಷ್ಟವಂತೆ. ಮುತ್ತೈದೆಯಾಗಿ ಮುಂದೆ ಹೋದಳು. ನಾನು ಪಾಪಿ.... ಇನ್ನೂ ಉಳಿದುಕೊಂಡಿದೀನಿ...."

"ಛೇ.... ಹೀಗೆಲ್ಲಾ ಮಾತಾಡ್ಬೇಡಿ ಅಪ್ಪಾ.... ನಾನು ನಿಮಗೋಸ್ಕರ ಮದುವೆಯಾಗದೇ ಹಾಗೇ ಇರಬಲ್ಲೆ.... ನನ್ನ ಹೆಂಡತಿಯಾಗಿ ಎಂಥವಳು ಬರ್ತಾಳೋ....?"

"ನಾನು ನಿನಗೆ ತಕ್ಕವಳನ್ನು ಹುಡುಕ್ತೀನಿ. ಮೊದಲು ನೀನು ಸೆಟ್ಲ್ ಆಗು.... ಹಾಗೇ ನಿನ್ನ ಅಣ್ಣನ ಮದುವೆಯ ಕಾರ್ಯ ಮುಗಿಯಲಿ... ನಮಗೆ ಎಷ್ಟು ಬೇಕೋ ಅಷ್ಟನ್ನು ಮಾತ್ರ ಬೆಂಗಳೂರಿಗೆ ಸಾಗಿಸೋಣ.... ಉಳಿದುದನ್ನು ನಿನ್ನ ಅಣ್ಣಂದಿರು ಹಂಚಿಕೊಳ್ಳಲಿ.... ಅವರುಗಳಿಗೆಲ್ಲ ಆಸೆ ಜಾಸ್ತಿ...." ಎಂದು ಹೇಳಿ ತುಟಿಯಂಚಿನಲ್ಲಿ ನಕ್ಕರು.

******

ಶೇಷಾದ್ರಿಗೆ ಈ ಮಾತುಗಳು ನೆನಪಿಗೆ ಬಂದು, ಕಣ್ಣಂಚುಗಳು ತೇವಗೊಂಡವು. ಅಪ್ಪನಿಗೆ ತನ್ನ ಮೇಲೆ ಸ್ವಲ್ಪ ಹೆಚ್ಚಿನ ಮಮತೆ... ಹೆಚ್ಚು ಓದಲಿಲ್ಲವೆಂದೋ, ಒಳ್ಳೆಯ ಕೆಲಸವಿಲ್ಲವೆಂದೋ, ಹೆಚ್ಚು ಸಂಪಾದನೆ ಇಲ್ಲವೆಂದೋ.... ಅದಕ್ಕಾಗಿ ತನ್ನನ್ನು ಆರಿಸಿಕೊಂಡಿದ್ದರು.... ಉಳಿದವರು ಮನೆಯಿಂದ ಹೊರಗೆ ಎಂದೋ ಹೊರಟು ಹೋಗಿದ್ದರು. ತಾನೊಬ್ಬನೇ ಅವರೊಂದಿಗೆ ಇದ್ದುದು... ತನ್ನನ್ನು ಬೆಳಿಗ್ಗೆ ಬೇಗನೇ ಎಬ್ಬಿಸುತ್ತಿದ್ದುದು.... ತಿಂಡಿ, ಕಾಫಿ ಕೊಡುತ್ತಿದ್ದುದು.... ತಮ್ಮಿಬ್ಬರಿಗಾಗಿ ತಾವೇ ಅಡಿಗೆ ಮಾಡುತ್ತಿದ್ದುದು.... ಎಲ್ಲವೂ ನೆನಪಿಗೆ ಬಂತು....

ಅಣ್ಣನ ಮದುವೆಯಾದ, ಒಂದೆರಡು ತಿಂಗಳುಗಳ ನಂತರ, ಆ ಮನೆಯನ್ನು ಖಾಲಿ ಮಾಡಿ, ತಮಗೆ ಅಗತ್ಯವೆನಿಸುವ ಕೆಲವು ಸಾಮಾನು ಸರಂಜಾಮುಗಳನ್ನು ಮಾತ್ರ ತಮ್ಮೊಂದಿಗೆ ತೆಗೆದುಕೊಂಡು, ಬೆಂಗಳೂರಿನಲ್ಲಿ ಬಂದು ನೆಲೆಸಿದರು. ಭೋಗ್ಯಕ್ಕೆ ಒಂದು ಮನೆಯನ್ನು ತೆಗೆದುಕೊಂಡು ಸಂಸಾರವನ್ನು ಪ್ರಾರಂಭಿಸಿದರು. ಅಪ್ಪನನ್ನು ನೋಡಿಕೊಂಡು ಹೋಗಲೆಂದು

ಆಗ ಈಗ ಬರುತ್ತಿದ್ದ ಮಕ್ಕಳು ಅಪ್ಪನಿಗೆ ತಿಳುವಳಿಕೆ ಹೇಳುತ್ತಿದ್ದರು. ಈ ವಯಸ್ಸಲ್ಲಿ ಕೈ ಸುಟ್ಟುಕೊಂಡು, ಅಡಿಗೆ ಮಾಡಿ ಹಾಕುವ ಕರ್ಮ ನಿಮಗೇಕೆ? ಶೇಷುಗೆ ಇಪ್ಪತ್ತೇಳು ವರ್ಷಗಳಾದವು.... ಮದುವೆ ಮಾಡಿ, ನಾವು ಹೆಣ್ಣು ನೋಡ್ತೀವಿ...." ಎನ್ನುತ್ತಿದ್ದರು.

"ಶೇಷು ಬಡವ.... ಅವನಿಗೆ ಹೊಂದಿಕೊಂಡು ಹೋಗುವ ಹುಡುಗಿ ಬೇಕು.... ಹಾಗೇ ನನ್ನ ಬಗ್ಗೆ ಗೌರವವಿರಬೇಕು.... ಅಂಥೋಳು ಅರ್ಜೆಂಟಿಗೆ ಎಲ್ಲಿ ಸಿಗ್ತಾಳೆ?"

"ಸಿಗ್ತಾಳೆ ಬಿಡಿ ಅಪ್ಪಾ.... ನಾವು ಎಂಟು ಹತ್ತ ಜನ ಇದೀವಿ.... ಸರಿಯಾದವ ಳನ್ನೇ ಹುಡುಕ್ತೀವಿ...." ಎಂದಿದ್ದರು.

"ಬಡವರ ಮನೆಯ ಹುಡುಗಿ ಆದರೂ ಪರವಾಗಿಲ್ಲ.... ಎರಡೂ ಖರ್ಚುಗಳನ್ನು ನಾವೇ ಹಾಕಿ ಮದುವೆ ಮಾಡಿಕೊಳ್ತೀವಿ. ಅಂಥಾ ಹುಡ್ಗೀನ ಹುಡುಕಿ."

"ಅದ್ಯಾಕಪ್ಪಾ.... ಅವರೂ ಖರ್ಚು ಮಾಡ್ಲೀ... ಶೇಷುಗೆ ಹೆಚ್ಚು ಅನುಕೂಲ ವಿಲ್ಲ. ವರದಕ್ಷಿಣೆಯನ್ನು ಕೊಡೋ ಅಂತಹವಳನ್ನೇ ನೋಡೋಣ.... ನಾವು ಮಂಜು ಗಂಡಂಗೆ ಕೊಡ್ಲಿಲ್ವಾ.... ಈಗ ಅದನ್ನು ವಸೂಲು ಮಾಡೋಣ...."

"ಬೇಡ, ವರದಕ್ಷಿಣೆಯ ಆಸೆ, ನನಗಾಗ್ಲೀ ನನ್ನ ಮಗನಿಗಾಗ್ಲೀ ಇಲ್ಲ.... ಆಗೋದಾದ್ರೆ, ನನ್ನ ಇಷ್ಟದಂತೆ ಹುಡುಗಿಯನ್ನು ಹುಡುಕಿ. ಇಲ್ಲದಿದ್ರೆ ಬಿಟ್ಬಿಡಿ...." ತಂದೆ ರೇಗಿ ನುಡಿದಾಗ, ಅವರು ಪೆಚ್ಚಾದರು.

"ಮಂಜು ಮದುವೇಲಿ ಎಷ್ಟು ಖರ್ಚು ಹೆಚ್ಚಾಯ್ತು ಅಂತ, ನಮ್ಮಗಳಿಗೆಲ್ಲಾ ಒಳ್ಳೆಯ ಸೀರೆಯನ್ನಾಗಲೀ, ಉಡುಗೊರೆಯನ್ನಾಗಲೀ ತರ್ಲಿಲ್ಲ ನೀವು.... ನಮ್ಮ ಮನೆಯಲ್ಲಿ ಇದೇ ಕೊನೇ ಮದುವೆ, ಈಗ್ಲಾದ್ರೂ ಒಳ್ಳೆಯ ಸೀರೇನಾ ತರ್ತೀರಾ?"

"ನಿಮಗೆಲ್ಲಾ ಸೀರೆ, ಒಡವೆ, ಉಡುಗೊರೆ, ಬರೀ ಇದೇ ಆಸೆ.... ನನಗೆ ಮೆಚ್ಚುಗೆಯಾಗುವಂಥ ಹುಡುಗಿಯನ್ನು ಗೊತ್ತು ಮಾಡಿಕೊಡಿ. ನಾನು ನಿಮಗೆಲ್ಲಾ ಸಾವಿರ ಸಾವಿರ ರೂಪಾಯಿ ಕೊಡ್ತೀನಿ. ನಿಮಗೇನು ಬೇಕೋ ಅದನ್ನು ತಗೊಳ್ಳಿ. ..." ಹೆಣ್ಣು ಮಕ್ಕಳ ಮುಖ ಹೂವಿನಂತೆ ಅರಳಿತ್ತು. ಅಮ್ಮನನ್ನು ನೆನಪಿಸಿಕೊಂಡರು.

"ಅಮ್ಮ ಇರ್ಬೇಕಾಗಿತ್ತು ಅಪ್ಪಾ.... ಎಷ್ಟು ಖುಷಿ ಪಟ್ಟಿರೋಳೋ...."

"ನಿಮ್ಮಮ್ಮ ಬದುಕಿದ್ದಿದ್ದರೆ, ಆ ಮಾತೇ ಬೇರೆ ಆಗ್ತಿತ್ತು.... ನಾನು ಅಲ್ಲೇ ಇರ್ತಿದ್ದೆ.... ಅದೇ ಮನೇಲಿರ್ತಿದ್ವು...." ನಿಟ್ಟುಸಿರನ್ನು ಬಿಟ್ಟರು.

"ನಿನ್ನ ಭಾಗದ ಹಣ ಎಲ್ಲಾ ಖರ್ಚಾಗಿ ಹೋಯ್ತಾ ಅಪ್ಪಾ...."

"ಅದೆಲ್ಲಾ ನಿಮಗ್ಯಾಕೆ? ನಿಮ್ಮ ನಿಮ್ಮ ಭಾಗದ್ದೆಲ್ಲಾ ಸಿಗ್ತಲ್ಲ... ನಾನು ಯಾರಿಗೂ ಕಡಿಮೆ ಮಾಡಿಲ್ಲ. ನೆನೆಪಿಟ್ಕೊಳ್ಳಿ...." ತಂದೆ ಲಘುವಾಗಿ ಗದರಿದಾಗ ಸುಮ್ಮನಾದರು.

*****

ಕೆಲವು ತಿಂಗಳೊಳಗೆ, ಶೇಷಾದ್ರಿಯ ಮದುವೆ ನಿಶ್ಚಯವಾಗಿತ್ತು. ಹುಡುಗಿ ಅವನ ಸಹೋದ್ಯೋಗಿಯ ತಂಗಿ. ಶೇಷಾದ್ರಿ ಮದುವೆಗಿರುವ ವರ ಅಂತ ತಿಳಿದು, ಅವರ ಮನೆಯವರು ಮನೆಗೆ ಬಂದು ವಿಚಾರಿಸಿದ್ದರು. ಅವರು ಹೆಚ್ಚು ಅನುಕೂಲವಂತರಲ್ಲ ಅಂತ ತಿಳಿದ ಕೂಡಲೇ ತಂದೆ ಒಪ್ಪಿಗೆ ಕೊಟ್ಟು ಬಿಟ್ಟಿದ್ದರು. ಹುಡುಗಿಯನ್ನು ನೋಡುವ ಶಾಸ್ತ್ರವಾಗಿತ್ತು. ನಾಗವೇಣಿ ನೋಡಲು ಸುಮಾರಾಗಿದ್ದರೂ, ತಂದೆ ಒಪ್ಪಿಗೆ ಕೊಟ್ಟಿರುವರೆಂದು ತಿಳಿದು ಶೇಷಾದ್ರಿ ತನ್ನ ಒಪ್ಪಿಗೆಯನ್ನು ಕೊಟ್ಟು ಬಿಟ್ಟ.

ಮದುವೆ ಬಹಳ ಸರಳವಾಗಿ ನೆರವೇರಿತ್ತು. ಹತ್ತಿರದ ಬಳಗದವರಿಗೆ ಮಾತ್ರ ಆಮಂತ್ರಣವನ್ನು ಕೊಟ್ಟಿದ್ದರು. ತಂದೆ ತಮ್ಮ ಮಾತಿನಂತೆ ಮನೆಯ ಮಕ್ಕಳು, ಮೊಮ್ಮಕ್ಕಳಿಗೆ ಉಡುಗೊರೆಯನ್ನು ಕೊಡಿಸಿದರು. ಆ ರಾತ್ರಿ ಮದು ಮಕ್ಕಳಿ ಗೆಂದು ತೈಯಾರಿ ಮಾಡಿದ್ದ ಕೋಣೆಯೊಳಗೆ ಹೋಗುವ ಮುನ್ನ ಆತ ಶೇಷಾದ್ರಿಯ ಕೈಗೆ ಓಲೆಗಳಿದ್ದ ಚಿಕ್ಕ ಡಬ್ಬಿಯನ್ನು ಕೊಟ್ಟರು.

"ಅವರು ತಮ್ಮ ಇಷ್ಟದಂತೆ, ಧಾರೆ ಎರೆದು ಕೊಟ್ಟಿದ್ದಾರೆ. ಅದಕ್ಕೆ ನನ್ನ ಕಡೆಯಿಂದ ಯಾವ ಅಪವಾದವೂ ಇಲ್ಲ. ನೀನೂ ಅಷ್ಟೇ... ಆ ಹುಡುಗಿಯ ಮನಸ್ಸನ್ನು ನೋಯುವಂತೆ ಯಾವುದೇ ಮಾತನ್ನಾಡಬಾರದು.... ನನ್ನ ಕಡೆ ಯಿಂದ ಈ ಒಡವೆಗಳು ನಿನ್ನ ಹೆಂಡತಿಗೆ ಉಡುಗೊರೆ.... ನಿನ್ನ ಅಮ್ಮನನ್ನು ನಾನು ಎಷ್ಟು ಪ್ರೀತಿಯಿಂದ ನೋಡಿಕೊಂಡೆನೋ, ಅಷ್ಟೇ ಪ್ರೀತಿಯಿಂದ ನೀನು ನೋಡಿಕೊಳ್ಳ ಬೇಕು.... ಈ ರಾತ್ರಿ ಅವಳು ಇದನ್ನು ಧರಿಸಿಕೊಳ್ಳುವಂತೆ ಹೇಳು. ಇದರಿಂದ ನಿಮ್ಮಿಬ್ಬರಿಗೂ ಒಳ್ಳೆಯದಾಗುತ್ತದೆ...." ಎಂದು ಹೇಳಿ ಮಗನ ತಲೆಯ ಮೇಲೆ ಕೈಯನ್ನಿಟ್ಟರು.

ತನಗಾಗಿ ಎದುರು ನೋಡುತ್ತಾ, ನಾಚಿಕೆಯಿಂದ ಕುಳಿತಿದ್ದ ನಾಗವೇಣಿ ಗಂಡನನ್ನು ಕಂಡು ಎದ್ದು ನಿಂತಳು. ಇವನು ಅವಳ ಬಳಿ ಸಾರಿದ.... ಮೇಲಿನಿಂದ ಕೆಳಗೆ ಅವಳನ್ನೇ ನೋಡಿದ... ಮದುಮಗಳ ಅಲಂಕಾರದಲ್ಲಿ ಅವಳು ಸೊಗಸಾಗಿಯೇ ಕಂಡಳು. ಅವಳು ಧರಿಸಿದ್ದ ಒಡವೆಗಳ ಕಡೆ ಅವನ ಗಮನ ಹರಿಯಿತು. ಕಿವಿಯಲ್ಲಿ ಚಿಕ್ಕ ಚಿಕ್ಕ ಚಿನ್ನದ ಓಲೆಗಳು, ಮೂಗಿನಲ್ಲಿ ಒಂದು ಚಿನ್ನದ ಮೂಗು ಬೊಟ್ಟು, ಕತ್ತಿನಲ್ಲಿ ತಾನು ಮುಹೂರ್ತದ ಸಮಯದಲ್ಲಿ ಕಟ್ಟಿದ ಮಂಗಳ ಸೂತ್ರ.... ಕೈಗಳಲ್ಲಿ ಹಸಿರು ಬಣ್ಣದ ಗಾಜಿನ ಬಳೆಗಳು....

ಕಾಲಿನ ಬೆರಳಿನಲ್ಲಿ ತಾನೇ ತೊಡಿಸಿದ್ದ ಕಾಲುಂಗುರಗಳು! ಅವನ ನೋಟ ತನ್ನ ಉಡುಗೆ ತೊಡುಗೆಗಳ ಮೇಲೆ ಇದೆ ಎಂದು ಅರಿತ ಅವಳು ನಾಚಿ ಮುದುರಿ ನಿಂತಳು.

"ಕೂತ್ಕೋ...." ಎಂದ. ಅವಳು ಅನುಮಾನದಿಂದ ಕುಳಿತಳು. ಅವಳ ಕೈಗೆ ಆ ಡಬ್ಬಿಯನ್ನು ಇತ್ತ...." ಈಗ್ಲೇ.... ಈಗ್ಲೇ ಈ ಓಲೆಗಳನ್ನು ಹಾಕ್ಕೋ...." ಎಂದ.

"ಈ ಓಲೆಗಳು, ಯಾರದ್ದು?" ಅನುಮಾನಿಸುತ್ತಾ ಪ್ರಶ್ನಿಸಿದಳು.

"ನಿಂದೇ.... ಇನ್ಯಾರದ್ದು....?" ತುಂಟತನದಿಂದ ಕೇಳಿದ.

"ನನಗಾ? ....ಹೊಸದು ಇದ್ದ ಹಾಗೆ ಕಾಣ್ತಿಲ್ಲ.... ಅದಕ್ಕೇ ಕೇಳಿದೆ"

ಓ.... ಹಾಗಾ? ಇದು ನಮ್ಮ ಅಮ್ಮಂದು.... ನಿಂಗೆ ಅಂತ ಕೊಡ್ತಿದೀನಿ...."

"ನಿಮ್ಮಮ್ಮಂದಾ? ....ಮೊದಲೇ ಕೊಟ್ಟಿದ್ದರೆ ಪಾಲಿಷ್ ಹಾಕಿಸಬಹುದಾಗಿತ್ತು.... ಹೊಳಪೇ ಇಲ್ಲ.... ಹಳೇದಾಗಿರುವ ಹಾಗೆ ಕಾಣುತ್ತೆ.... ಪಾಲಿಷ್ ಹಾಕಿಸಿ ಹಾಕ್ಕೊಳ್ತೀನಿ...."

"ಬೇಡ, ಇವತ್ತೇ ಈಗ್ಲೇ ಹಾಕ್ಕೋಬೇಕು ಅಂತ ಅಪ್ಪ ಹೇಳಿದಾರೆ.... ಅಮ್ಮನ ನೆನಪಿನಲ್ಲಿ ತಮ್ಮ ಬಳಿಯೇ ಇಟ್ಟುಕೊಂಡಿದ್ದರು...."

"ಮತ್ತೆ? ನಂಗ್ಯಾಕೆ ಕೊಡ್ತಿದಾರೆ....?"

"ನೀನು ಅವರ ಅಚ್ಚು ಮೆಚ್ಚಿನ ಸೊಸೆ.... ನಿಂಗೋಸ್ಕರವೇ ಇವತ್ತಿನವರೆಗೂ ತಾವು ಇಟ್ಟುಕೊಂಡಿದ್ದರು.... ಇದನ್ನು ನೀನು ಹಾಕಿಕೊಳ್ಳಿ ಅಂತ ಅವರ ಆಸೆ.... ಪ್ಲೀಸ್ ಹಾಕ್ಕೋ...."

"ನಾಳೆ ಹಾಕ್ಕೊಂಡ್ರೆ ಆಗುಲ್ವಾ? ....ಈಗಾಗ್ಲೇ ಹೊತ್ತಾಗಿದೆ..."

"ಇಲ್ಲ, ಈಗ ಈ ರಾತ್ರಿ ನೀನು ಹಾಕ್ಕೊಳ್ಳಲೇ ಬೇಕು.... ಇದರಿಂದ ನಮ್ಮಿಬ್ಬರ ಪ್ರೀತಿ ಹೆಚ್ಚಾಗುತ್ತಂತೆ.... ಅಪ್ಪ ಅಮ್ಮನನ್ನು ಎಷ್ಟು ಪ್ರೀತಿಸ್ತಿದ್ರೋ ಅಷ್ಟೇ ನಾವೂ ಒಬ್ಬರನ್ನೊಬ್ಬರು ಪ್ರೀತಿಸಲಿ ಅಂತ ಅವರ ಆಸೆ...."

ವಿಚಿತ್ರವಾದ ಆಸೆ ಅಂತ ಅಂದುಕೊಂಡರೂ, ಆ ರಾತ್ರಿಯೇ ಹೆಚ್ಚು ಮಾತಾಡಬಾರದೆಂದು ಕೊಂಡು, ಚಿನ್ನದ ಓಲೆಗಳನ್ನು ಬಿಚ್ಚಿ, ಈ ಓಲೆಗಳನ್ನು ಧರಿಸಿದಳು. ಮೂಗು ಬೊಟ್ಟನ್ನು ತೆಗೆಯಲಾಗಲಿಲ್ಲ.... "ಮೂಗು ನೋಯ್ತಿದೆ. ಬಲವಂತವಾಗಿ ತೆಗೆದ್ರೆ ರಕ್ತ ಬರುತ್ತೆ.... ಏನ್ಮಾಡ್ಲೀ....?" ಕೇಳಿದಳು.

"ಹೋಗ್ಲಿ ಬಿಡು... ನಮ್ಮ ಮಾತಿಗೆ ಬೆಲೆ ಕೊಟ್ಟು ಈ ಓಲೆಗಳನ್ನು ಹಾಕಿಕೊಂಡೆಯಲ್ಲ... ಅಷ್ಟು ಸಾಕು.... ಥ್ಯಾಂಕ್ಸ್ ಎಂದು ಹೇಳಿ ಅವಳ ಮುಖವನ್ನು ತನ್ನ ಬೊಗಸೆಯಲ್ಲಿ ಹಿಡಿದು, ಅವಳ ಕಿವಿಗಳಲ್ಲಿ ಹೊಳೆಯುತ್ತಿದ್ದ ಓಲೆಗಳನ್ನು ನೋಡಿದ. ಈ ಓಲೆ ಇಷ್ಟು ಚೆನ್ನಾಗಿದೆ ಅಂತ ನಂಗೆ ಗೊತ್ತಿರಲೇ

ಇಲ್ಲ.... ನಿನ್ನ ಮುಖಕ್ಕೆ ತುಂಬಾ ಚೆನ್ನಾಗಿ ಒಪ್ಪಿದೆ...." ಅವಳನ್ನು ಹೊಗಳಿದ. ಅವಳು ನಾಚಿದಳು.

"ನಂಗೆ ನಿದ್ದೆ ಬರ್ತಿದೆ...ಮಲಗೋಣ್ವಾ?" ನಿರಾಸೆಯಿಂದ ಕೇಳಿದಳು.

"ಹೂಂ.... ಮಲಗೋಣ..." ಎಂದು ಹೇಳಿ, ದೀಪವನ್ನಾರಿಸಲು ಅನುವಾದವನ್ನು ತಡೆದು, ಕುಡಿಯಲು ಹಾಲನ್ನು ಕೊಟ್ಟಳು. ತಾನೇ ದೀಪವನ್ನಾರಿಸಿ ಮಂಚದ ಮೇಲೆ ಕುಳಿತಳು. ಕಿಟಕಿಯಿಂದ ತೂರಿ ಬರುತ್ತಿದ್ದ ಚಂದ್ರನ ಕಿರಣಗಳು ಅವಳು ಧರಿಸಿದ್ದ ಓಲೆಗಳ ಮೇಲೆ ಬಿದ್ದು, ಪ್ರತಿಫಲಿಸಿದವು.... ಅವನು ಅವಳ ಬಳಿ ಸಾರಿದ. ನಾಗು, ನೀನು ಎಷ್ಟು ಅದೃಷ್ಟವಂತೆ ಗೊತ್ತಾ? ...ಅಮ್ಮನ ಅಮೂಲ್ಯ ವಾದ ಈ ಓಲೆಗಳು ನಿನಗೆ ಸಿಕ್ಕಿವೆ.... ನಾನು ಬಡವ.... ಬೆಲೆ ಬಾಳುವ ಒಡವೆಗಳನ್ನು ನಿನಗೆ ಮಾಡಿಸಿ ಕೊಡಲು ನನ್ನಿಂದ ಆಗುತ್ತೋ ಇಲ್ಲವೋ....ಆದರೆ ನಿನ್ನನ್ನು ಪ್ರೀತಿಯಿಂದ ನೋಡಿ ಕೊಳ್ಳುತ್ತೇನೆ.... ಅಪ್ಪ ಅಮ್ಮನನ್ನು ಪ್ರೀತಿಸಿದಷ್ಟೇ ನಾನು ನಿನ್ನನ್ನು ಪ್ರೀತಿಸುತ್ತೇನೆ...." ಎನ್ನುತ್ತಾ ಅವಳನ್ನು ತನ್ನ ಮಗ್ಗುಲಿಗೆ ಎಳೆದುಕೊಂಡ. ಅವಳು ನಿಟ್ಟುಸಿರು ಬಿಟ್ಟಳು.

* * *

ಬೆಳಿಗ್ಗೆ ಅವರಿಬ್ಬರೂ ರೂಮಿನಿಂದ ಹೊರಗೆ ಬರುವುದನ್ನೇ ಕಾತುರದಿಂದ ಕಾಯುತ್ತಾ ಕುಳಿತಿದ್ದ ತಂದೆಯನ್ನು ಕಂಡು ಅವನು ಮುಜುಗರಗೊಂಡ. ಅವಳು ನಾಚುತ್ತಾ ಅಡಿಗೆ ಮನೆಯ ಕಡೆಗೆ ನಡೆದಳು. "ಶೇಷೂ... ಬಾ ಇಲ್ಲಿ...." ಪಿಸುದನಿಯಲ್ಲಿ ತಮ್ಮ ಬಳಿಗೆ ಕರೆದರು. ಕಸಿವಿಸಿಗೊಂಡು ಅವರ ಬಳಿಗೆ ಬಂದ. "ವಾಲೆಗಳನ್ನು ಮರೀದೇ ಕೊಟ್ಯಾ? ....ನಿನ್ನ ಹೆಂಡ್ತಿ ಹಾಕ್ಕೊಂಡ್ಲಾ?" ಉತ್ಸುಕತೆ ಯಿಂದ ಕೇಳಿದರು.

"ಹೂಂನಪ್ಪಾ... ಹಾಕ್ಕೊಂಡಿದಾಳೆ, ಅವಳಿಗೆ ಇಷ್ಟವಾಯಿತು. ಅವಳಿಗೆ ಚೆನ್ನಾಗಿ ಒಪ್ಪುತ್ತೆ..." ತನ್ನ ಅನಿಸಿಕೆಯನ್ನು ಸೇರಿಸಿದ.

"ಹೌದಾ? ....ತುಂಬಾ ಸಂತೋಷ... ಇಬ್ಬರೂ ಸುಖವಾಗಿರಿ..." ಹರಸಿದರು. "ಅವಳನ್ನು ಕರ್ಕೊಂಡು ಬಾ, ನಾನು ಅವಳಿಗೆ ಹೇಗೆ ಕಾಣುತ್ತೆ ಅಂತ ನೋಡ್ಬೇಕು..." ತಮ್ಮ ಆಸೆಯನ್ನು ವ್ಯಕ್ತ ಪಡಿಸಿದರು.

"ಸರಿಯಪ್ಪಾ.... ಈಗ್ಲೇ ಅರ್ಜೆಂಟಾ? ....ಎಲ್ರೂ ಏನಂದ್ಕೊಳ್ತಾರೆ...?"

"ಎಲ್ರೂ ಮನೆಯವರೇ... ಯಾರೂ ಏನೂ ಅಂದ್ಕೊಳುಲ್ಲ...." ಅಷ್ಟರಲ್ಲಿ ಹಿರಿಯ ಅತ್ತಿಗೆ ಬಂದಳು.

"ಎಲ್ಲರೂ ಬೇಗ ಬೇಗ ಸ್ನಾನ ಮಾಡಿ ರೆಡಿಯಾಗಿ... ಎಲ್ರೂ ಸ್ನಾನ ಮಾಡಿ ತಿಂಡಿ ತಿನ್ನಬೇಕು. ಶೇಷೂ ಮಾವನ ಮನೆಯವರು ಎಲ್ಲರಿಗೂ ತಿಂಡಿಯನ್ನು ಕಳಿಸಿದಾರೆ. ಆಮೇಲೆ ಎಲ್ಲರೂ ದೇವಸ್ಥಾನಕ್ಕೆ ಹೋಗಿ ಪೂಜೆ

ಮಾಡಿಸಿಕೊಂಡು ಅವರ ಮನೆಗೆ ಹೋಗಬೇಕಂತೆ. ಇವತ್ತು ಬೀಗರ ಜೌತಣವನ್ನು ಇಟ್ಟುಕೊಂಡಿದಾರೆ."

"ಹೌದು, ನೆನ್ನೆ ಅಲ್ಲಿಂದ ಹೊರಟಾಗ್ಲೇ ಹೇಳಿದ್ರು. ಮರೆತೇ ಹೋಯ್ತು... ನನ್ನ ಸ್ನಾನ ಆಗಲೇ ಆಗಿದೆ.... ಶೇಷೂ ಹೋಗು ಬೇಗ ಸ್ನಾನ ಮಾಡಿ ಬಾ..." ಅವನು ಅತ್ತ ಹೋದ. ಎಲ್ಲರೂ ತಿಂಡಿ ತಿಂದು ಸಿದ್ಧರಾಗಿ ಮನೆಯಿಂದ ಹೊರಟರು. ತಂದೆ ಆಗಾಗ್ಗೆ ನವವಧುವನ್ನು ನೋಡುತ್ತಿರುವುದು ಹೆಂಗಸರ ಗಮನಕ್ಕೆ ಬಂದಿತ್ತು. ತಮ್ಮ ತಮ್ಮಲ್ಲೇ ಮಾತನಾಡಿಕೊಂಡರು. ಹಿರಿಯ ಮಗಳು ತಂದೆಯ ಬಳಿಗೆ ಬಂದಳು.

"ಅಪ್ಪಾ.... ಹೊಸ ಸೊಸೆಯನ್ನು ಹಾಗ್ಯಾಕೆ ಪದೇ ಪದೇ ನೋಡ್ತಿದೀರಿ! ...ಎಲ್ಲರೂ ಏನಂದ್ಕೊಳ್ತಾರೆ...?" ಸ್ವಲ್ಪ ಒರಟಾಗಿಯೇ ಕೇಳಿದಳು.

"ಅವಳು ನಿಮ್ಮಮ್ಮನ ಓಲೆಯನ್ನು ಹಾಕ್ಕೊಂಡಿದಾಳಲ್ಲ.. ಅದನ್ನೇ ನೋಡ್ತಿದ್ದೆ.... ಅವಳಿಗೆ ಚೆನ್ನಾಗಿ ಒಪ್ಪುತ್ತೆ ಅಲ್ವಾ...?"

"ಹೌದೇನಪ್ಪಾ? ನಮಗ್ಯಾರಿಗೂ ಹೇಳಲೇ ಇಲ್ಲ. ಯಾವಾಗ ಕೊಟ್ರೀ? .... ಪಾಲಿಷ್‌ನಾದ್ರೂ ಮಾಡಿಸಬಹುದಾಗಿತ್ತು... ಹಳೇ ವಾಲೆ ಏನಂದ್ಕೊಳ್ತಾಳೆ ಅವಳು?"

"ಹಳೇ ವಾಲೆಗಳಾದ್ರೇನು! ಬೆಲೆ ಬಾಳುವಂಥದ್ದು... ಅವಳ ಅದೃಷ್ಟ..." ಮತ್ತೆ ಸೊಸೆಯ ಕಡೆ ನೋಡಿದರು.

"ಅಮ್ಮನ್ನು ಕೂಡಾ ನೀವು ಇಷ್ಟು ಆಸಕ್ತಿಯಿಂದ ನೋಡಿರ್ಲಿಲ್ಲವೇನೋ.... ಎಲ್ರೂ ನಗ್ತಾರೆ ಅಷ್ಟೇ... ಸಾಕು ಮಾಡಿ ಈ ಮುಚ್ಚಟೇನ...." ಗದರಿದಳು.

"ನನ್ನ ಸೊಸೇನ ನಾನು ನೋಡಿದ್ರೆ ಯಾರ‍್ಯಾಕೆ ನಗ್ತಾರೆ? ನಿಮ್ಮಮ್ಮ ಹೆಚ್ಚಿಗೆ ಹಾಕ್ಕೊಳ್ತಾನೇ ಇರ್ಲಿಲ್ಲ... ಬಾಣಂತನದ ಸಮಯದಲ್ಲಂತೂ, ಎಣ್ಣೆ ಕೂತ್ಕೊಳ್ಳುತ್ತೆ ಅಂತ ತೆಗೆದೇ ಇಟ್ಟಿರುತ್ತಿದ್ಲು.... ಅದಕ್ಕೇ ನೋಡು ಹೊಳಪು ಮಾಸಿಲ್ಲ... ಫಳ ಫಳ ಅಂತಿದೆ...."

"ಅಮ್ಮಂಗಂತೂ ಸದಾ ಮಕ್ಕಳ ಗೋಳು ಅಲಂಕಾರ ಮಾಡ್ಕೊಳ್ಳೋಕೆ ಸಮಯವೇ ಇರ್ತಿರ್ಲಿಲ್ಲ.... ಬಸಿರು, ಬಾಣಂತನ, ಲಾಲನೆ, ಪಾಲನೆ ಅಂತ ಜೊತೆಗೆ ಅಡಿಗೆ ಮನೆ ಕೆಲಸ ಇದಿಷ್ಟೇ ಅವಳ ಜೀವನವಾಯ್ತು.... ಇವಳ ಜೀವನವೂ ಹಾಗಾಗಬಾರದು. ಅಮ್ಮನ ವಾಲೆಗಳನ್ನು ಹಾಕಿಕೊಂಡ ತಪ್ಪಿಗೆ...." ಗೊಣಗಿದಳು.

"ಹಾಗ್ಯಾಕೆ ಅಂತೀಯ ಅನುಸೂಯ.... ಮನೆ ತುಂಬಾ ಮಕ್ಕಳಿರಬೇಕು. ಮನೆ ನಂದಗೋಕುಲವಾಗಿರಬೇಕು ಅದೇ ಚೆನ್ನ...."

"ಏನು ಚೆನ್ನ ಅಪ್ಪಾ.... ಈಗ ಕಾಲ ಬದಲಾಗಿದೆ.... ನಿಮ್ಮ ಕಾಲವಲ್ಲ....

ಆ ಆಸೆ ಇಟ್ಕೋಬೇಡಿ. ಶೇಷೂಗೆ ಏನು ಆದಾಯವಿದೆ? ಅವನ ಹೆಂಡತಿಯ ತವರಿನವರು ಯಾವ ಶ್ರೀಮಂತರು? ಮನೆ ತುಂಬಾ ಮಕ್ಕಳು ಹುಟ್ಟಿದರೆ ಕಷ್ಟವಾಗುಲ್ವಾ? ....ಒಂದೋ ಎರಡೋ, ಅಬ್ಬಬ್ಬಾ ಅಂದರೆ ಮೂರು ಮಕ್ಕಳು ಸಾಕು. ನಾವು ಹದಿನಾರು ಜನ ಮಕ್ಕಳು, ನಾಚಿಕೆಗೇಡು!

"ಏನೋ ಆಗಿ ಹೋಯ್ತು... ನಿಮ್ಮಮ್ಮ ಒಂದು ದಿನವೂ ಬೇಸರ ಗೊಂಡವಳಲ್ಲ...."

"ಮೇಲೆ ಮೇಲೆ ಮಕ್ಕಳಾಗಿದ್ದಕ್ಕೇ ಅಮ್ಮನ ಆರೋಗ್ಯ ಕೆಟ್ಟಿದ್ದು, ಬೇಗ ಸತ್ತು ಹೋದದ್ದು.... ಇಲ್ಲದಿದ್ದರೆ ಇನ್ನೂ ಕೆಲವು ವರ್ಷಗಳು ಬದುಕಿರುತ್ತಿದ್ದಳು..."

"ಸುಮ್ಮನೇ ಬರಬಾರ್ದಾ ಅನುಸೂಯ.... ಎಲ್ರೂ ನಿಮ್ಮಿಬ್ಬರನ್ನೇ ನೋಡ್ತಿದಾರೆ. ಅಪ್ಪನ್ನ ಯಾಕೆ ಗದರ್‍ತಿದೀಯ?" ಅವಳ ತಮ್ಮ ಕೇಳಿದ.

"ಏನೂ ಇಲ್ಲ, ಅಮ್ಮನ ನೆನಪಾಯ್ತು, ಬೇಜಾರಾಯ್ತು...." ಅವಳು ಅಪ್ಪನನ್ನು ಹಿಂದೆ ಬಿಟ್ಟು, ಮುಂದೆ ಮುಂದೆ ನಡೆದಳು.

"ಅಪ್ಪಾ ನೀವು ಬೇಜಾರ್ಮಾಡ್ಕೋಬೇಡಿ. ಅವಳು ಹಾಗೇನೇ... ಈ ಸಾರಿ ನಾಲ್ಕು ದಿನ ನಮ್ಮ ಮನೇಲಿ ಬಂದಿರಿ. ಹೇಗೂ ಶೇಷೂನ ನೋಡ್ಕೊಳ್ಳೋಕೆ ಅವನ ಹೆಂಡತಿ ಬಂದಿದಾಳಲ್ಲ. ನಾಲ್ಕು ದಿನ ಅವರಿಬ್ಬರೇ ಹಾಯಾಗಿ ಕಾಲ ಕಳೀಲಿ...." ಮಗನೆಂದ.

"ಹಾಯಾಗಿರ್‍ಲಿ... ನಾನೆಲ್ಲಿ ಬೇಡ ಅಂದೆ! ನನ್ನಿಂದ ತೊಂದರೆ ಏನು?"

"ಹೊಸದಾಗಿ ಮದುವೆಯಾದವರು.... ಅವರ ಲೋಕವೇ ಬೇರೆ ಇರುತ್ತೆ..... ಅವರಿಗೆ ಮುಜುಗರವಾಗುತ್ತೆ...."

"ಇಲ್ಲ, ನಾನು ಯಾವ ಮುಜುಗರವನ್ನೂ ಮಾಡುವುದಿಲ್ಲ. ನನ್ನ ಪಾಡಿಗೆ ನಾನು ಇರ್ತೀನಿ. ನಾನು ಎಲ್ಲಿಗೂ ಬರುಲ್ಲ...."

"ಸರಿ.... ಈಗ ನೀವಿಬ್ರೂ ಮಾತಿಗೆ ಶುರು ಮಾಡ್ಕೊಂಡ್ರಾ?"

"ಅಪ್ಪನ್ನ ನಾಲ್ಕು ದಿನ ನಮ್ಮ ಮನೇಲಿ ಬಂದಿರಿ ಅಂತ ಹೇಳ್ದೇ.... ಶೇಷೂಗೆ ಅವನ ಹೆಂಡತಿಗೆ ಪ್ರೈವೆಸಿ ಬೇಡ್ವಾ? ...ಅಪ್ಪಂಗೆ ಅರ್ಥವಾಗುಲ್ಲ..."

"ಹೌದು ಮಾವ, ಈಗ್ಲಾದ್ರೂ ನಾಲ್ಕು ನಾಲ್ಕು ದಿನ ಎಲ್ರ ಮನೇಲೂ ಇರೋರಂತೆ... ಇನ್ನಾದ್ರೂ ಶೇಷೂನ ಚಿಂತೇನ ಬಿಡಿ..."

"ಆಗ್ಲೀ ಯೋಚ್ನೆ ಮಾಡ್ತೀನಿ. ಮೊದಲು ಈ ಹೊಸ ಹುಡುಗಿ ಮನೆಗೆ ಹೊಂದಿಕೊಳ್ಳಲಿ. ಹೊಸ ಜಾಗ.... ಹೊಸ ಮನೆ... ಎಲ್ಲಾ ಹೇಗೆ ಗೊತ್ತಾಗುತ್ತೆ? ನಾನು ಇರ್‍ಲೇ ಬೇಕು..." ಅವರ ಮಾತನ್ನು ಕೇಳಿಸಿಕೊಂಡವರು ಜೋರಾಗಿ ನಕ್ಕರು.... ನಾಗವೇಣಿ ಸರ್‍ರನೆ ತಿರುಗಿದಳು. ಸೂರ್ಯನ ಕಿರಣಗಳು ಓಲೆಗಳ ಮೇಲೆ ಬಿದ್ದು, ಫಳ ಫಳನೆ ಮಿನುಗಿದವು. ಆತ ನಿಸ್ಸಂಕೋಚವಾಗಿ ಅವಳನ್ನು,

ಒಲೆಗಳನ್ನು ನೋಡಿದರು.

"ನಿಮ್ಮಪ್ಪ ಯಾಕೆ ಹಾಗೆ ಅವಳನ್ನೇ ನೋಡ್ತಿದಾರೆ? ಅವಳೇನು ತಪ್ಪು ಮಾಡಿದಾಳೆ...? ವಡವೆ, ವಸ್ತ್ರ, ವರೋಪಚಾರ ಯಾವುದೂ ಬೇಡ ಅಂದೋರು ಇವರೇ ಅಲ್ವಾ?" ಶೇಷಾದ್ರಿಯ ಅತ್ತಿಗೆ, ಅವಳ ಪತಿಯನ್ನು ಕೇಳಿದಳು.

"ಯಾರಿಗೆ ಗೊತ್ತು? ....ಶೇಷೂನ ಚೆನ್ನಾಗಿ ನೋಡ್ಕೋತಾಳೋ ಇಲ್ವೋ ಅನ್ನುವ ಅನುಮಾನ ಈಗ ಕಾಡ್ತಿರಬಹುದು...."

"ನೋಡ್ಕೊಳ್ದೇ ಏನ್ಮಾಡ್ತಾಳೆ...? ಶೇಷು ನೋಡೋಕೆ ಗಟ್ಟಿ ಮುಟ್ಟಾಗಿ ಚೆನ್ನಾಗಿದಾನೆ. ತಿನ್ನುಕ್ಕೆ ಉಣ್ಣುಕ್ಕೆ ಈ ಮನೇಲಿ ಕೊರತೆ ಇಲ್ಲ.... ನಿಮ್ಮಪ್ಪನ ಹತ್ತಿರ ಇರೋ ಹಣವೆಲ್ಲಾ ಇವಳ ಪಾಲಿಗೇ.... ಇನ್ನೇನಂತೆ ಚಿಂತೆ....?"

"ಏನೋ ನಮಗ್ಯಾಕೆ ಬಿಡು.... ಅವರುಂಟು.... ಅವರ ಮುದ್ದಿನ ಸೊಸೆ ಉಂಟು... ಆದರೆ, ಒಂದು ರಾತ್ರೀಲಿ ಅವಳಿಗೆ ಎಂಥಾ ವಿಶೇಷ ಕಳೆ ಬಂದು ಬಿಟ್ಟಿದೆ ಅಲ್ವಾ? ರಾತ್ರಿ, ಶೇಷು, ಚೆನ್ನಾಗಿಯೇ ನೋಡ್ಕೊಂಡಿದಾನೆ...." ಹೆಂಡತಿಯ ಭುಜವನ್ನು ಒತ್ತಿದ.

"ಥೂ.... ನೀವೊಬ್ರೂ.... ಹೀಗೆಲ್ಲಾ ಮಾತಾಡ್ತಾರಾ...? ಯಾರಿಗಾದ್ರೂ ಕೇಳಿಸಿದ್ರೆ...?"

"ಕೇಳಿಸ್ಲಿ ಬಿಡು... ತಪ್ಪೇನು ಹೇಳಿದೆ? ...ಮೊದಲ ರಾತ್ರಿ, ನಾನೂ ನಿನ್ನನ್ನು ಚೆನ್ನಾಗಿ ನೋಡ್ಕೊಂಡಿದ್ದೆ.... ನೀನೇ ಹೇಳಿದ್ದೆ... ಒಂದೇ ರಾತ್ರೀಲಿ ನಿನಗೆ ವಿಶೇಷ ಕಳೆ ಬಂದಿದೆ ಅಂತ ನಿನ್ನಕ್ಕ ಹೇಳಿದ್ರು ಅಂತ...."

"ಆ ವಿಶೇಷ ಕಳೆಯ ಜೊತೆಗೆ, ಈ ವಿಶೇಷ ರೂಪವೂ ಬಂದಿದೆಯಲ್ಲ" ತನ್ನ ಉಬ್ಬಿದ ಹೊಟ್ಟೆಯ ಕಡೆ ನೋಡಿ ಹೇಳಿದಳು.

"ಸರಿ ಬಿಡು, ಇನ್ನು ಕೆಲವೇ ತಿಂಗಳುಗಳಲ್ಲಿ ನಿನ್ನ ತಂಗಿಗೂ ಈ ವಿಶೇಷ ರೂಪ ಬರುತ್ತೆ.... ಶೇಷು ತಂದೆ ಆಗ್ತಾನೆ...."

"ಶೇಷುಗೆ ಬುದ್ಧಿ ಹೇಳಿ.... ಈಗ್ಲೇ ಮಕ್ಕಳು ಮರಿ ಬೇಡ ಅಂತ.... ಯಾವ ಶ್ರೀಮಂತಿಕೆ ಕೊಳ್ಳೆ ಹೋಗ್ತಿದೆ....? ನಿಮ್ಮಪ್ಪನೇ ಎಲ್ಲಾದಕ್ಕೂ ಖರ್ಚು ಮಾಡಿ ಬರೀ ಕೈ ಮಾಡ್ಕೋತಾರೆ ಅಷ್ಟೇ...."

"ಅದನ್ನೆಲ್ಲ ಹೇಳುಕ್ಕಾಗುತ್ತಾ ಸುಶೀ.... ಅದು ಅವರ ಪರ್ಸನಲ್ ವಿಷಯ. ಅಲ್ಲದೇ ಅವನಿಗೆ ಏನಾದ್ರೂ ಹೇಳಿದ್ರೆ ಅಪ್ಪನಿಗೇ ಇಷ್ಟವಾಗುಲ್ಲ. ನಮಗ್ಯಾಕೆ ಬಿಡು...."

"ಸರಿ ಬಿಡಿ... ನಿಮ್ಮಮ್ಮನಂತೇ ನಾಗೂನೂ ಹದಿನಾರು ಮಕ್ಕಳನ್ನು ಹೆರಲಿ...." ಇಬ್ಬರೂ ಕಿಸಕ್ಕನೆ ನಕ್ಕಾಗ, ಪಕ್ಕದಲ್ಲಿದ್ದ ತಂಗಿ, ಅಣ್ಣನನ್ನು ಚುಡಾಯಿಸಿದಳು.

"ಏನಣ್ಣಾ... ಅತ್ತಿಗೆ ಏನೋ ರೇಗಿಸ್ತಾ ಇದಾರೆ.... ಏನ್ಮಾಡ್ದೇ?"

"ನಾನು ಚೆನ್ನಾಗಿ ನೋಡ್ಕೊಳ್ತಿಲ್ವಂತೆ... ಆಕ್ಷೇಪಣೆ ಮಾಡ್ತಿದಾಳೆ...."

"ಹೌದಾ ಅತ್ತಿಗೇ... ನೋಡಿದ್ರೆ ಹಾಗೆನ್ನಿಸುಲ್ಲ..." ತಂಗಿ ಮೆಚ್ಚುಗೆಯಿಂದ ಅಣ್ಣನನ್ನೂ ಅತ್ತಿಗೆಯನ್ನೂ ನೋಡಿದಳು.

"ಇಲ್ಲ ನಿಮ್ಮೀ.... ಆಗ್ಲಿಂದ ನಿಮ್ಮಣ್ಣ ಶೇಷೂ ಹೆಂಡ್ತೀನ ಹೊಗಳ್ತಿದಾರೆ. ನಂಗೆ ಕೋಪ ಬರುಲ್ವಾ ಮತ್ತೆ?"

"ಹೌದಾ ಕಿಟ್ಟೀ...? ವೆರಿ ಬ್ಯಾಡ್..." ಅವಳೂ ಬೆರಳು ತೋರಿ ಗದರಿದಳು. ಎಲ್ಲರೂ ತಮ ತಮಗೆ ತೋಚಿದಂತೆ ಹರಟುತ್ತಾ ದೇವಸ್ಥಾನವನ್ನು ಸೇರಿದರು. ಅಲ್ಲಿ ಪೂಜೆ ಮಂಗಳಾರತಿಯ ನಂತರ, ತೀರ್ಥ ಪ್ರಸಾದವನ್ನು ಸ್ವೀಕರಿಸಿ, ನಾಗವೇಣಿಯ ತಂದೆಯ ಮನೆಗೆ ಬಂದರು.

ನಾಗವೇಣಿಯನ್ನು ಅವಳ ಮನೆಯವರು ಸುತ್ತುವರೆದರು. ತಮಾಷೆ ಮಾಡುತ್ತಾ ಹಲವಾರು ಪ್ರಶ್ನೆಗಳನ್ನು ಕೇಳಿದರು. ಅತ್ತಿಗೆ ಹತ್ತಿರ ಬಂದು, ಕಿವಿಯ ಓಲೆಗಳನ್ನು ಮುಟ್ಟಿದಳು. "ನಾಗೂ, ಇದ್ಯಾವುದೇ ಹಳೇ ವಾಲೆ...?" ಎಂದು ನಾಗವೇಣಿಯನ್ನು ಪ್ರಶ್ನಿಸಿದಳು. ನಾಗವೇಣಿ ವಿಷಯವನ್ನು ತಿಳಿಸಿದಳು. ವಾಲೆ ಗಳೇನೋ ಮಜಬೂತಾಗಿವೆ ಆದರೆ ಹೊಳಪೇ ಇಲ್ಲ, ಪಾಲಿಷ್‌ನಾದರೂ ಮಾಡಿಸ ಬಾರದಾಗಿತ್ತಾ?" ಎಂದು ಕೇಳಿದಳು.

"ನಾನೇನು ಹೇಳ್ಲೀ ಅತ್ಗೇ.... ಈಗ್ಲೇ ಹಾಕ್ಕೋ ಅಂತ ಬಲವಂತ ಮಾಡಿದರು, ಹಾಕ್ಕೊಂಡೆ... ಇಲ್ಲದಿದ್ರೆ ಕೋಪಿಸ್ಕೊಳ್ತಿದ್ರು...."

"ಚೆನ್ನಾಗಿದೆ, ಯಾವ ಗಂಡನೂ ಮೊದಲ ರಾತ್ರಿ ಕೋಪಿಸಿಕೊಳ್ಳುವುದು ಸಾಧ್ಯವೇ ಇಲ್ಲ. ಹೋಗ್ಲಿ ಬಿಡು.... ಏನು ಮಾಡುಕ್ಕಾಗುತ್ತೆ? ನಿನ್ನ ಅತ್ತೆ ಹತ್ರ ಇನ್ನೂ ಏನೇನು ಒಡವೆಗಳಿದ್ವೋ.... ಎಲ್ಲವನ್ನೂ ಅವರುಗಳೇ ಹಂಚಿಕೊಂಡಿರ ಬಹುದು. ಯಾರೂ ಬೇಡ ಅಂತ ಇದನ್ನು ಬಿಟ್ಟಿರಬಹುದು. ನಿನ್ನ ಪಾಲಿಗೆ ಇದು ಸಿಕ್ಕಿದೆ.... ಇನ್ನೂ ಏನಾದ್ರೂ ಒಡವೆಗಳಿವೆಯಾ ಅಂತ ನಿನ್ನ ಗಂಡನ್ನ ಕೇಳು...." ಅತ್ತಿಗೆ ಹೇಳಿ ಕೊಟ್ಟಳು. ನಾಗವೇಣಿ ತಲೆಯಾಡಿಸಿದಳು. "ಹೋಗ್ಲೀ ನಿನ್ನ ಗಂಡ ನಿನ್ಹತ್ರ ಚೆನ್ನಾಗಿ ನಡ್ಕೊಂಡ್ನಾ? ...ಏನು ಮಾತಾಡಿದ್ರಿ?" ಮತ್ತೆ ವಿಚಾರಿಸಿದಳು.

"ಅತ್ತೆ ಬಗ್ಗೆ, ಮಾವನ ಬಗ್ಗೆ ಒಂದಿಷ್ಟು ಹೇಳಿದ್ರು. ಈ ವಾಲೆಗಳನ್ನು ಮೂಗು ಬೊಟ್ಟನ್ನೂ ಕೊಟ್ರು. ವಾಲೇನ ಹಾಕ್ಕೊಂಡೆ... ಈ ಮೂಗುಬೊಟ್ಟನ್ನು ತೆಗೆಯೋಕೇ ಆಗ್ಲಿಲ್ಲ... ತುಂಬಾ ನೋವಾಯ್ತು...."

"ಅದೆಂಥಾ ಗಂಡನೇ? ಪ್ರೀತಿ ಪ್ರೇಮ ಅಂತ ಮೊದಲ ರಾತ್ರಿ ಮಾತನ್ನಾ ಡೋದನ್ನು ಬಿಟ್ಟು, ಯಾವುದೋ ಹಳೇ ವಾಲೆ ಮೂಗುಬೊಟ್ಟನ್ನು ಕೊಟ್ಟು,

ಹಾಕ್ಕೋ ಅಂತ ಬಲವಂತ ಮಾಡುಕ್ಕೆ.... ರಸಿಕತೆಯೇ ಗೊತ್ತಿಲ್ಲ ಆ ವಡ್ಡಂಗೆ..." ಅಕ್ಕ ತೆಗಳಿದಳು.

"ಇಲ್ಲ ಅಕ್ಕಾ.... ಅವರು ತುಂಬಾ ಒಳ್ಳೆಯವರು... ಆಮೇಲೆ ತುಂಬಾ ಪ್ರೀತಿ ಮಾಡಿದ್ರು..." ನಾಚುತ್ತಾ ನುಡಿದಳು.

"ಆಹಹಾ... ಕಳ್ಳೀ... ಈಗ ಬಾಯಿ ಬಿಡ್ತಿದಾಳೆ. ಹೇಗೆ ಪ್ರೀತಿ ಮಾಡಿದ್ರು?"

"ಹೋಗಕ್ಕಾ...." ಅವಳು ಕೈಗಳಿಂದ ಮುಖವನ್ನು ಮುಚ್ಚಿಕೊಂಡಳು.

"ಇದು ಮುಖ್ಯ ನಾಗವೇಣಿ.... ಗಂಡನ ಪ್ರೀತಿ ಒಂದು ಶಾಶ್ವತವಾಗಿರ ಬೇಕು. ಅದೇ ಮುಖ್ಯ... ಯಾವ ಒಡವೆ ವಸ್ತುವೂ ಅದರ ಸಮಕ್ಕೆ ಬರುಲ್ಲ.... ನಿನ್ನ ಗಂಡ ಹೇಳಿದ ಹಾಗೆ ಕೇಳ್ಕೊಂಡು, ನಿನ್ನ ಮಾವನ ಸೇವೆ ಮಾಡ್ಕೊಂಡು ಇರು. ನಿನಗೆ ಎಲ್ಲಾ ಒಳ್ಳೇದಾಗುತ್ತೆ...." ತಾಯಿ ಹರಸಿದಳು.

ಭರ್ಜರಿ ಔತಣದ ಊಟದ ನಂತರ, ಉಡುಗೊರೆಗಳನ್ನು ತೆಗೆದು ಕೊಂಡು, ಎಲ್ಲರೂ ಮನೆಗೆ ಹಿಂತಿರುಗಿದರು. ಮದುವೆಗಾಗಿ ಬಂದಿದ್ದ ಹೆಣ್ಣು ಮಕ್ಕಳು, ಗಂಡು ಮಕ್ಕಳು, ಅಳಿಯಂದಿರು, ಸೊಸೆಯರು, ಮೊಮ್ಮಕ್ಕಳು ರಾತ್ರಿಯ ವರೆಗೆ ಇದ್ದು, ರಾತ್ರಿಯ ಊಟದ ನಂತರ ತಮ್ಮ ತಮ್ಮ ಊರಿಗೆ ಪ್ರಯಾಣ ಬೆಳೆಸಿದರು. ಈಗ ಮತ್ತೆ ಮನೆಯಲ್ಲಿ ಇವರು ಮೂವರೇ....

ತಂದೆಯ ಗೊರಕೆಯ ಸದ್ದು ಕೇಳಲಾರಂಭಿಸಿತ್ತು. ಶೇಷಾದ್ರಿ ನಾಗವೇಣಿ ಯೊಂದಿಗೆ ತನ್ನ ರೂಮನ್ನು ಸೇರಿಕೊಂಡ.... "ನಾಗೂ, ನೆನ್ನೆಗಿಂತ ಇವತ್ತು ಇನ್ನೂ ಚೆನ್ನಾಗಿ ಕಾಣ್ತಿದೀಯ ನೀನು...." ಹೆಂಡತಿಯನ್ನು ಹೊಗಳಿದ.

"ಹೀಗೆ ಹೊಗಳ್ಬೇಕು ಅಂತ ಯಾರು ಹೇಳ್ಕೊಟ್ರು?" ಪ್ರಶ್ನಿಸಿದಳು.

"ನನ್ನ ಹೆಂಡ್ತೀನ ನಾನು ಹೊಗಳುಕ್ಕೆ ಯಾರ್‍ಯಾಕೆ ಹೇಳಿಕೊಡ್ತಾರೆ? ಹೋಗಲಿ ನಿಮ್ಮ ಮನೆಯವರು ನಿನ್ನ ಹತ್ರ ಏನು ಮಾತಾಡಿದ್ರು?"

"ಏನೇನೋ ಕೇಳಿದ್ರು? ನೆನ್ನೆ ರಾತ್ರಿ ನಮ್ಮಿಬ್ಬರ ಮಧ್ಯೆ ಏನು ನಡೀತು ಅಂತ ಕೇಳಿದ್ರು...."

"ಹೇಳ್ಬಿಟ್ಯಾ?" ಗೊಂದಲದಿಂದ ಕೇಳಿದ.

"ಹೂಂ ಹೇಳ್ದೇ... ಈ ವಾಲೆ ಕೊಟ್ಟಿದ್ದನ್ನು ಹೇಳ್ದೇ... ಮೂಗು ಬೊಟ್ಟನ್ನು ತೆಗೆಯುಕ್ಕೆ ಆಗ್ಲಿಲ್ಲ ಅಂತ ಹೇಳ್ದೆ...."

"ಇಷ್ಟೇ ತಾನೇ ಹೇಳಿದ್ದು.... ವಾಲೇನ ನೋಡಿ ಏನಂದ್ರು....?"

"ತುಂಬಾ ಚೆನ್ನಾಗಿದೆ, ನಿನಗೆ ಚೆನ್ನಾಗಿ ಒಪ್ಪುತ್ತೆ ಅಂತಂದ್ರು.... ಹಳೇದಾದ್ರೂ ಹೊಳಪು ಮಾಸಿಲ್ಲ, ಸೊಗಸಾಗಿದೆ ಅಂತಂದ್ರು...." ತಮಾಷೆ ಮಾಡಿದಳು.

"ತಮಾಷೆ ಮಾಡ್ಬೇಡ ನಾಗು... ನಿಜ ಹೇಳು..."

"ಯಾಕೆ? ಈ ವಾಲೆ ಚೆನ್ನಾಗಿಲ್ವಾ? ....ನನಗೆ ಚೆನ್ನಾಗಿ ಒಪ್ಪುತ್ತೆ ಅಂತ

ನೀವೇ ಹೇಳಿದ್ರಿ.. ಹಾಗಾದ್ರೆ ನೀವೂ ತಮಾಷೆ ಮಾಡಿದ್ರಾ?" ಪ್ರತಿ ಸವಾಲೆಸೆದಳು.

"ನಾನ್ಯಾಕೆ ತಮಾಷೆ ಮಾಡ್ಲೀ? ನಿಜವನ್ನೇ ಹೇಳಿದೆ. ನೀನು ನನ್ನ ಕಣ್ಣಿಗೆ ಯಾವಾಗಲೂ ಅಂದವಾಗಿಯೇ ಕಾಣ್ತೀಯ...." ಎನ್ನುತ್ತಾ ಅವಳನ್ನು ತಬ್ಬಿಕೊಂಡ. ಅವಳು ಗಂಡನ ಪ್ರೀತಿಯಲ್ಲಿ ಕರಗಿ ಹೋದಳು.

* * *

ದಿನಗಳು ಬೇಗ ಬೇಗ ಕಳೆದವು. ನಾಗು ನಾಲ್ಕು ತಿಂಗಳ ಗರ್ಭಿಣಿ... ಬಯಕೆಗಳು ಕಾಡಿದವು... ಆಸೆಗಳು ಪುಟಿದಿದ್ದವು... ಮನೆಯಲ್ಲಿ ತಿನ್ನಲು ಉಣ್ಣಲು ಕೊರತೆ ಇರಲಿಲ್ಲ. ಕಾಟ ಕೊಡುವ ಅತ್ತೆ ಇರಲಿಲ್ಲ. ಮುಚ್ಚಟೆ ಮಾಡುವ ಗಂಡ, ಹಾಗೂ ಮಾವ... ಅವಳು ಸುಖಿಯೋ ಸುಖಿ. ಆದರೂ ಆ ಸುಖದಲ್ಲಿ ಏನೋ ಕೊರತೆ... ಕನ್ನಡಿಯ ಮುಂದೆ ನಿಂತು ತನ್ನ ಮುಖವನ್ನು ತಾನೇ ನೋಡಿಕೊಳ್ಳುವಾಗ, ಪಿಚ್ಚೆನ್ನಿಸುತ್ತಿತ್ತು.... ಬಳಲಿದ ಮುಖ, ಇಳಿದು ಹೋದ ಕಣ್ಣುಗಳು.... ಬತ್ತಿ ಹೋದ ಕೆನ್ನೆಗಳು... ಎತ್ತಿ ಕಾಣುವ ಕಿವಿಗಳು, ಎದ್ದು ಕಾಣುವ ಮೂಗು.... ಅವಳಿಗೇ ಅಸಹ್ಯವೆನಿಸುತ್ತಿತ್ತು.... ಥೂ ಮದುವೆಗೆ ಮುಂಚೆ ನಾನು ಇಷ್ಟು ಕೆಟ್ಟದಾಗಿರಲಿಲ್ಲ.... ಬಸಿರಿಯಾಗಿದ್ರೂ, ನಾನೇಕೆ ಲಕ್ಷಣವಾಗಿ ಕಾಣುತ್ತಿಲ್ಲ...? ಅದಕ್ಕೆ ಕಾರಣ, ಈ ಓಲೆ, ಈ ಮೂಗುಬೊಟ್ಟು... ತಮಗೇ ಹೊಳಪಿಲ್ಲ... ಇನ್ನು ನನಗೇನು ಹೊಳಪನ್ನು ಕೊಡುತ್ತವೆ....? ಇಷ್ಟು ದಿನ ಹಾಕಿಕೊಂಡಿದ್ದಾಯಿತು. ಇನ್ನಾದರೂ ತೆಗೆದು ಬಿಡಬೇಕು. ಹೊಳೆಯುವ ಚಿನ್ನದ ಓಲೆಗಳನ್ನು ಹಾಕಿಕೊಳ್ಳ ಬೇಕು. ಮುತ್ತಿನ ಮೂಗುಬೊಟ್ಟನ್ನು ಹಾಕಿ ಕೊಳ್ಳಬೇಕು.... ಆಸೆಯ ಅಲೆಗಳನ್ನು ಎಬ್ಬಿಸಿಕೊಂಡಳು. ಇದ್ದಕ್ಕಿದ್ದಂತೆ ಅವಳಲ್ಲಿ ಒಂದು ದೂರಾಲೋಚನೆ ಹುಟ್ಟಿತು... ಗಂಡನಿಗೆ ಮಾವನಿಗೆ ತಿಳಿಯದಂತೆ ಈ ಓಲೆ ಮೂಗುಬೊಟ್ಟನ್ನು ಮಾರಿ ಬಿಡ ಬೇಕು... ಹಗುರವಾಗಿರುವ, ಆಧುನಿಕ ಡಿಸೈನಿನ ಓಲೆಗಳನ್ನು ತೆಗೆದುಕೊಂಡು ಹಾಕಿಕೊಳ್ಳಬೇಕು.... ಹೇಗೂ ಗಂಡ ತನ್ನ ಪ್ರೀತಿಯಲ್ಲಿ ಬೇರೆಲ್ಲವನ್ನೂ ಮರೆತಿದ್ದಾನೆ.... ಮಾವನಿಗೆ ವಯಸ್ಸಾಗಿದೆ. ಕಣ್ಣುಗಳೂ ಸರಿಯಾಗಿ ಕಾಣುವುದಿಲ್ಲ. ಅಲ್ಲದೇ ಈಗ ಈ ಒಡವೆಗಳ ಮೇಲೆ ನನ್ನ ಅಧಿಕಾರವಿದೆ. ನನಗೆ ಕೊಟ್ಟ ಮೇಲೆ ನನ್ನವು. ನಾನು ನನಗೆ ಅನ್ನಿಸಿದಂತೆ ಮಾಡುತ್ತೀನಿ ಎಂದುಕೊಂಡು, ತನ್ನ ಅನಿಸಿಕೆಯನ್ನು ಅತ್ತಿಗೆಯೊಡನೆ ಹೇಳಿದಳು. ಅತ್ತಿಗೆ ಒಪ್ಪಿಗೆಯನ್ನು ಕೊಟ್ಟಳು. ಒಂದು ದಿನ ಇಬ್ಬರೂ ತಮ್ಮ ಪರಿಚಯದ ಅಕ್ಕಸಾಲಿಯವನ ಬಳಿಗೆ ಬಂದರು.

ಅಕ್ಕಸಾಲಿ ತನ್ನ ಅಂಗೈಯಲ್ಲಿದ್ದ ಒಡವೆಗಳನ್ನು ದಿಟ್ಟಿಸಿ ನೋಡಿದ. ಅನುಭವದ ನೋಟ ಅದರ ಬೆಲೆಯನ್ನು ಗುರುತಿಸಿತು. ತನ್ನೆದುರಿಗೆ ಕುಳಿತ ಹೆಂಗಸರ ಕಡೆ ನೋಡಿದ. ಅವರಿಬ್ಬರೂ ಸಿಕ್ಕಿ ಬಿದ್ದ ಕಳ್ಳರಂತೆ ಪೆಚ್ಚಾಗಿದ್ದರು.

ತನ್ನ ಮುಂದಿದ್ದ ಟ್ರೇಯೊಳಗೆ ಅದನ್ನು ಇಟ್ಟು, ತನ್ನ ಕಣ್ಣಿಗೆ, ಬೂದುಗಾಜನ್ನು ಸಿಕ್ಕಿಸಿಕೊಂಡು ಮತ್ತೆ ನೋಡಿದ. ತನ್ನ ಬಗ್ಗೆಯೇ ಹೆಮ್ಮೆ ಎನಿಸಿತ್ತು. ಮುಖ ಅರಳಿತ್ತು.

"ಏನಾಯ್ತು ಆಚಾರರೇ.... ವಾಲೆ ಸ್ವಲ್ಪ ಹಳೆಯದು ನಿಜ.... ಆದರೆ ಅಪ್ಪಣ ಚಿನ್ನದ್ದೇ.... ಹೊಳಪು ಮಾಸಿದೆ ಅಷ್ಟೇ..." ಅತ್ತಿಗೆ ನುಡಿದಳು.

"ಈ ವಾಲೆ ಯಾರದ್ದು? ನಿಮ್ಮ ತಾಯೀದಾ? ಅಜ್ಜೀದಾ?" ಅವನು ಪ್ರಶ್ನಿಸಿದ.

"ನಮ್ಮ ಅತ್ತೆಯದು.... ಸಾಕಷ್ಟು ವರ್ಷ ಹಾಕ್ಕೊಂಡಿದ್ದಾರೆ... ಚಿನ್ನ ಸವೆದು ಹೋಗಿದೆ. ಇದನ್ನು ಕೊಟ್ಟು, ಹೊಸ ಓಲೆಗಳನ್ನು ತಗೊಳ್ಳೋಣ ಅಂತ.... ಮೇಲೆ ಎಷ್ಟಾಗಬಹುದು?..." ಅವರ ಮೂಢತನಕ್ಕೆ ಅವನಿಗೆ ನಗು ಬಂದಿತ್ತು....

"ಯಾಕೆ ನಗ್ತೀರಾ ಆಚಾರ್ರೇ.... ಏನೂ ಬೆಲೆ ಸಿಗುಲ್ವಾ?" ಅತ್ತಿಗೆ ಕೇಳಿದಳು.

"ಬೆಲೆ ಇಲ್ಲದೇ ಏನು ತಾಯೀ... ಮೊದಲು ಸರಿಯಾಗಿ ಪರೀಕ್ಷಿಸಿ ನೋಡ್ಬೇಕು. ನೀವು ನಾಳೆ ಬನ್ನಿ. ನಾನು ಸರಿಯಾಗಿ ಬೆಲೆ ಕಟ್ಟಿ ಹೇಳ್ತೀನಿ...."

"ನಾಳೆ ಯಾಕೆ? ಇವತ್ತೇ ಯಾಕೆ ಹೇಳ್ಬಾರ್ದು...? ಚಿನ್ನದ ಬೆಲೆ ಇವತ್ತಿಗೆ ಏನಿದೆಯೋ... ಅದಕ್ಕಿಂದ ಕಮ್ಮಿನೇ ತಾನೇ ನೀವು ಕೊಡೋದು... ಎಷ್ಟಾಗುತ್ತೆ ಹೇಳಿ...."

"ಹಾಗೆ ಸುಲಭವಾಗಿ ಹೇಳುಕ್ಕೆ ಆಗುಲ್ಲ.... ನನಗೆ ಒಂದು ದಿನ ಸಮಯ ಬೇಕೇ ಬೇಕು..."

"ಸರಿ, ಹಾಗಾದ್ರೆ ನಾವು ನಾಳೆ ಮತ್ತೆ ಬರ್ತೀವಿ... ಓಲೆಗಳನ್ನು ಇತ್ತ ಕೊಡಿ..." ಅತ್ತಿಗೆ ಕೈ ಚಾಚಿದಳು.

"ಆಯ್ತು ತಾಯೀ... ನಿಮ್ಮ ಓಲೆಗಳನ್ನು ನೀವು ಜೋಪಾನವಾಗಿ ತಗೊಂಡು ಹೋಗಿ. ನನ್ನ ಅಭ್ಯಂತರ ಏನೂ ಇಲ್ಲ... ಈ ಕಾಲದಲ್ಲಿ ಯಾರನ್ನೂ ನಂಬೋದು ಕಷ್ಟ...."

"ಹೌದು ಆಚಾರ್ರೇ... ಅಕ್ಕಸಾಲಿ ಅಕ್ಕನ ಚಿನ್ನವನ್ನೂ ಬಿಡ ಅನ್ನೋ ಗಾದೆ ಇದೆ. ನಮ್ಮ ಹತ್ರ ಇರೋದು ಇಷ್ಟೇ ಒಡವೆ... ಹಳೆಯದಾಗಿದೆ ಅಂತ ಮಾರಿ ಬಿಟ್ಟು ಹೊಸದನ್ನು ತಗೊಳ್ಳೋಣ ಅಂತ.... ಹೋಗ್ಲೀ ರೆಡಿ ಮೇಡ್ ಒಡವೆಗಳನ್ನು ತೋರಿಸಿ...ಸುಮಾರು ಎಷ್ಟಾಗಬಹುದು ಅಂತ ಹೇಳಿ... ಮೇಲೆ ಬೇಕಾದ್ರೆ ಹಣವನ್ನು ಕೊಡ್ತೀನಿ..."

"ಆಯ್ತು, ನಾಳೆ ನೀವು ಮತ್ತೆ ಬರುವ ಕಷ್ಟವನ್ನು ಯಾಕೆ ತಗೋತೀರಿ... ಈ ಹುಡುಗಿ ಗರ್ಭಿಣಿ ಅಂತ ತೋರುತ್ತೆ. ಬಿಸಿಲ್ನಲ್ಲಿ ಯಾಕೆ ಬರ್ತೀರಿ? ...ನಾಳೆ ದಿನ ನಾನೇ ರೆಡಿಮೇಡ್ ಓಲೆಗಳನ್ನು ಹಾಗೇ ಹಣವನ್ನೂ, ತರ್ತೀನಿ....

ನಿಮ್ಮ ಮನೆ ಎಲ್ಲಿ ಬರುತ್ತೆ? ಸ್ವಲ್ಪ ಅಡ್ರೆಸ್ ಹೇಳ್ತೀರಾ?" ಅವನು ಓರೆಗಣ್ಣಿನಿಂದ ನೋಡಿದ.

ಇಬ್ಬರೂ ಬೆಚ್ಚಿದವರಂತೆ ಪರಸ್ಪರ ಮುಖವನ್ನು ನೋಡಿಕೊಂಡರು... "ಅಡ್ರೆಸ್ಸಾ...? ....ಯಾಕೆ...? ...ನಾವೇ ಆಟೋದಲ್ಲಿ ಬರ್ತೀವಿ, ಪರವಾಗಿಲ್ಲ ಬಿಡಿ..." ತಡವರಿಸುತ್ತಾ ಅವನ ಕಣ್ಣು ತಪ್ಪಿಸಿ ನುಡಿದಾಗ ಅವನು ವಿಚಿತ್ರ ನಗೆಯನ್ನು ನಕ್ಕ...

"ನಿಜ ಹೇಳಿ ತಾಯೀ... ಅಡ್ರೆಸ್ ಕೊಡುಕ್ಕೆ ನಿಮಗೆ ಇಷ್ಟವಿಲ್ಲ... ಅಂದರೆ ಮನೆಯ ಗಂಡಸರಿಗೆ ತಿಳಿಯದಂತೆ ಈ ಒಡವೆಗಳನ್ನು ಮಾರೋಕೆ ತಂದಿದೀರಿ ಹೌದಲ್ವಾ?"

"ಹಾಗೇನಿಲ್ಲ, ಗಂಡಸರಿಗೆ ಗೊತ್ತಿದೆ... ಆದರೆ, ಹೆಂಗಸರ ಒಡವೆ ನೋಡಿ ಅದಕ್ಕೆ ನಾವೇ ಬಂದೆವು ಅಷ್ಟೇ...."

"ನೀವು ನಿಜ ಹೇಳ್ತಿಲ್ಲ ಅಂತ ನಿಮ್ಮ ಮುಖವೇ ಹೇಳ್ತಿದೆ... ನಿಮ್ಮ ಜತೆ ಒಬ್ಬ ಗಂಡಸರನ್ನು ಕರ್ಕೊಂಡು ಬನ್ನಿ.... ನಾನು ಈಗಲೇ ಹಣಕೊಟ್ಟು ಕೊಂಡ್ಕೊಳ್ತೀನಿ..."

"ಯಾಕೆ ಆಚಾರ್ರೇ... ನಾವು ಸುಳ್ಳು ಹೇಳ್ತೀವಾ? ....ನಮ್ಮ ಮೇಲೇ ನಿಮಗೆ ಅನುಮಾನಾನಾ? ...ಏನೋ ಪರಿಚಯದವರು ಅಂತ ನಿಮ್ಮ ಅಂಗಡಿಗೆ ಬಂದೆವು, ಇಲ್ದಿದ್ರೆ ಬೇಕಾದಷ್ಟು ಒಡವೆ ಅಂಗಡಿಗಳಿವೆ. ಯಾರಾದ್ರೂ ಕೊಂಡ್ಕೊಳ್ತಾರೆ... ಅದನ್ನು ಇತ್ಲಾಗೆ ಕೊಡಿ...." ಅತ್ತಿಗೆ ಜಬರ್ದಸ್ತಿನಿಂದ ನುಡಿದಾಗ ನಾಗವೇಣಿ ಬೆವೆತಳು.

"ಮನೆಗೆ ಹೋಗೋಣ ನಡೀರಿ ಅತ್ತಿಗೆ. ನಾವು ಇಲ್ಲಿಗೆ ಬರಲೇ ಬಾರದಾಗಿತ್ತು." ಎಂದಳು.

"ಇಲ್ಲಿಗೆ ಬಂದಿದ್ದರಿಂದ ನಿಮಗೆ ಯಾವ ನಷ್ಟವೂ ಆಗಿಲ್ಲಮ್ಮ... ಬೇರೆ ಎಲ್ಲೇ ಹೋಗಿದ್ದರೂ, ನೀವು ಮೋಸ ಹೋಗ್ತಿದ್ರಿ... ಅಲ್ಲದೇ ಹೆಂಗಸರು, ಅನುಮಾನಾಸ್ಪದವಾದ ರೀತಿಯಲ್ಲಿ ಒಡವೆಗಳನ್ನು ಮಾರೋಕೆ ತಂದ್ರೆ, ವ್ಯಾಪಾರಿಗಳು ಹೆದರ್ತಾರೆ... ಪೋಲೀಸರನ್ನು ಕರೆಸ್ತಾರೆ... ಆಗ ಸಿಕ್ಕಿ ಬೀಳೋರು ನೀವೇ...."

"ಇದು ಕದ್ದ ಒಡವೆಗಳಲ್ಲ. ನಮ್ಮವೇ... ನನ್ನ ಮಾವ, ನನಗೆ ಮದುವೆಯಲ್ಲಿ ಕೊಟ್ಟದ್ದು.... ಏನೋ ಇದರ ಡಿಸೈನ್ ಇಷ್ಟವಾಗಲಿಲ್ಲ...ಅದಕ್ಕೆ ಹೊಸ ತರಹದ ವಾಲೆ ನೋಡೋಣ ಅಂತ ಬಂದೆವು. ಅದೇ ತಪ್ಪಾಯಿತು. ನಡೀರಿ ಅತ್ಗೇ... ಎಂದು ಹೇಳಿ ಆ ಡಬ್ಬಿಯನ್ನೆತ್ತಿಕೊಂಡು ತನ್ನ ಹ್ಯಾಂಡ್ ಬ್ಯಾಗಿನೊಳಗೆ ಇಟ್ಟುಕೊಂಡಳು...

"ಕ್ಷಮಿಸಿ ತಾಯೀ... ನಿಮಗೆ ನಿರಾಸೆ ಮಾಡಿದೆ. ಏನೋ ಹಿರಿಯವನು ಅಂತ ತಿಳುವಳಿಕೆ ಹೇಳಿದೆ... ನಾನೇ ಕೊಂಡ್ಕೊಳ್ತೀನಿ... ಎಷ್ಟು ಕೊಡ್ಬೇಕು ಹೇಳಿ.... ನೀವು ಕೇಳಿದಷ್ಟನ್ನು ಕೊಟ್ಟು ಬಿಡ್ತೀನಿ...."

"ಹಾಗಾದ್ರೆ, ಒಂದು ಜೊತೆ ಚಿನ್ನದ ಓಲೆ, ಒಂದು ಚಿನ್ನದ ಮೂಗು ಬೊಟ್ಟನ್ನು ಇದರ ಬದಲಿಗೆ ಕೊಟ್ಟು ಬಿಡಿ... ನಮಗೆ ಹಣ ಏನೂ ಬೇಡ..."

"ಸರಿ.... ಈ ಓಲೆಗಳನ್ನು ನೋಡಿ.... ಇದರಲ್ಲಿ ಯಾವುದೂ ಇಷ್ಟವಾಗ ದಿದ್ದರೆ, ನಾಳೆ ಇನ್ನೊಂದಿಷ್ಟನ್ನು ತರಿಸಿ ಇಡ್ತೀನಿ..." ಅವನು ಓಲೆಗಳಿದ್ದ ಟ್ರೇ ತೆಗೆದಿಟ್ಟ....

"ಪರವಾಗಿಲ್ಲ ಇದರಲ್ಲೇ ಆರಿಸಿಕೊಳ್ತೀವಿ... ಇಷ್ಟವಾಗದಿದ್ದರೆ ಬದಲಾಯಿಸಿ ತಗೊಳ್ತೀವಿ, ಒಪ್ಪಿಗೆ ತಾನೇ...."

"ಹಾಗೇ ಮಾಡಿ, ನೀವು ಹಳೇ ಕಸ್ಟಮರ್ಸ್...." ಎಂದು ಹೇಳಿ ಓಲೆಗಳ ಮೂಗು ಬೊಟ್ಟುಗಳ ಬೆಲೆಯನ್ನು ಹೇಳ ತೊಡಗಿದ... ಯಾಕೋ ಏನೋ ಆ ಓಲೆಗಳಲ್ಲಿ ಯಾವುದೂ ನಾಗವೇಣಿಗೆ ಇಷ್ಟವಾಗಲಿಲ್ಲ.... ಇಷ್ಟವಾಗದೇ ಇದ್ದರೆ, ನಿಮಗೆ ಬೇಕಾದ ಡಿಸೈನ್ ಕೊಟ್ಟು ಆರ್ಡರ್ ಮಾಡಿ.... ಒಂದೇ ವಾರದಲ್ಲಿ ಕೊಟ್ಟು ಬಿಡ್ತೀನಿ..." ಎಂದ.

"ಯಾಕೋ ಈ ವಾಲೆಗಳಿಗೆ ತೂಕವೇ ಇಲ್ಲ... ಚಿನ್ನದ್ದೇ ಹೌದೋ ಅಲ್ಲವೋ ಎನ್ನುವಷ್ಟು ಹಗುರವಾಗಿವೆ" ಅತ್ತಿಗೆ ಓಲೆಗಳನ್ನು ಕೈಯಲ್ಲಿ ಹಿಡಿದು ತೂಗುತ್ತಾ ನೋಡಿದಳು.

ಅವನು ವ್ಯಂಗ್ಯ ನಗೆಯನ್ನು ನಕ್ಕ.... ಹೌದು ತಾಯೀ, ನಿಮಗೆ ಅಪ್ಪಟ ಚಿನ್ನ ಯಾವುದು ಅಂತ, ಗಿಲೀಟ್ ಚಿನ್ನ ಯಾವುದು ಅಂತ ವ್ಯತ್ಯಾಸವೇ ಗೊತ್ತಾಗುಲ್ಲ. ನಮಗಾದ್ರೆ ನೋಡಿದ ಕೂಡಲೇ ಗೊತ್ತಾಗಿ ಬಿಡುತ್ತೆ.... ಯಾಕೆ ಅಂತಂದ್ರೆ, ನಮಗೆ ಅನುಭವವಿದೆ.... ನಾವು ಮೋಸ ಹೋಗುಲ್ಲ. ನೀವು ಮೋಸ ಹೋಗ್ತೀರಿ...."

"ಹಾಗಾದ್ರೆ, ರೆಡಿಮೇಡ್ ಒಡವೆಗಳೆಲ್ಲ ಒಳ್ಳೆಯ ಚಿನ್ನ ಅಲ್ಲ ಅಂತೀರಾ....?"

"ಹಾಗೆಲ್ಲಿ ಹೇಳ್ದೇ... ನಾನು ಗ್ಯಾರಂಟಿ ಕೊಡ್ತೀನಿ.... ಬರೆದುಕೊಡ್ತೀನಿ... ಇದುವರೆಗೆ ಎಷ್ಟೋ ವ್ಯಾಪಾರ ಮಾಡಿದೀರಿ... ಎಂದಾದ್ರೂ ಮೋಸ ಮಾಡಿದೀನಾ?"

"ಮತ್ತೆ? ಇವತ್ಯಾಕೆ ಹೀಗೆ ಮಾತಾಡ್ತಿದೀರಿ ಆಚಾರ್ರೇ...."

"ಯಾಕೋ ಇವತ್ತು ನನ್ನ ಮನಸ್ಸೇ ಸರಿಯಿಲ್ಲ... ಅಂಗಡಿ ಮುಚ್ಚಿ ಮನೆಗೆ ಹೋಗೋಣ ಅಂತ ಅನ್ನಿಸ್ತಿದೆ...."

"ಸರಿ ಹಾಗಾದ್ರೆ, ನಾವು ನಾಳೆ ಮತ್ತೆ ಬರ್ತೀವಿ... ಇನ್ನೊಂದಿಷ್ಟು

ಓಲೆಗಳನ್ನು ತರಿಸಿಡಿ...."

"ಹಾಗೇ ಮಾಡಿ. ಆದರೆ ನೀವು ಮಾತ್ರ ಬೇರೆ ಯಾರಿಗೂ ಮಾರುಕ್ಕೆ ಹೋಗಬೇಡಿ... ನಾನೇ ತಗೋತೀನಿ.... ಕೇಳಿದ್ದಕ್ಕಿಂತ ಹೆಚ್ಗೇನೇ ಕೊಡ್ತೀನಿ..."

"ಯಾಕೆ ಆಚಾರ್ರೇ! ನಿಮಗೆ ಆ ಹಳೇ ವಾಲೆ ಅಷ್ಟು ಇಷ್ಟ ಆಯ್ತಾ...?"

"ಇಂಥಾ ಬೆಲೆ ಬಾಳುವ ಓಲೆ ಯಾರಿಗೆ ಬೇಡ? ....ನಿಮಗೆ ಚಿನ್ನಕ್ಕೆ ಗಿಲೀಟ್ ಚಿನ್ನಕ್ಕೆ ಹೇಗೆ ವ್ಯತ್ಯಾಸ ಗೊತ್ತಾಗುಲ್ವೋ, ಹಾಗೇ, ಹರಳಿಗೂ ವಜ್ರಕ್ಕೂ ಕೂಡಾ ವ್ಯತ್ಯಾಸ ಗೊತ್ತಾಗುಲ್ಲ.... ಅದು ಬರೀ ಬಿಳಿ ಹರಳಿನ ಓಲೆಗಳಲ್ಲ. ಅಪ್ಪಟ ವಜ್ರದ ಓಲೆಗಳು! ಅಪ್ಪಟ ವಜ್ರಗಳು!!

"ಏನು ಹೇಳ್ತಿದೀರಿ? ವಜ್ರಗಳಾ...? ತಮಾಷೆ ಮಾಡ್ಬೇಡಿ ಆಚಾರ್ರೇ...."

"ನಾನ್ಯಾಕೆ ತಮಾಷೆ ಮಾಡ್ಲೀ...? ವ್ಯತ್ಯಾಸ ಗೊತ್ತಿಲ್ಲದ ನಿಮಗೆ, ನನ್ನ ಮಾತಿನಿಂದ ನಂಬಿಕೆ ಬರ್ತಿಲ್ಲ... ಈಗಲೇ, ನನ್ನ ಪರಿಚಯದ ವಜ್ರದ ವ್ಯಾಪಾರಿಯನ್ನು ಕರೆಸ್ತೀನಿ. ಅವನು ಇದನ್ನು ವಜ್ರ ಅಲ್ಲ ಅಂತ ಹೇಳಿ ಬಿಡ್ಲೀ.... ಅಂಗಡಿ ಮುಚ್ಚಿ ಹಿಮಾಲಯಕ್ಕೆ ಹೊರಟು ಹೋಗ್ತೀನಿ...."

ನಂಬದವರಂತೆ ಇಬ್ಬರೂ ಬಾಯಿ ಬಿಟ್ಟು ಕೊಂಡು ಕುಳಿತಿದ್ದರು.... "ಅದಕ್ಕೇ ನಾನು ಅಷ್ಟು ಕೇಳಿದ್ದು... ಈಗ್ಲಾದ್ರೂ ನಿಜ ಹೇಳಿ.... ಮನೇಲಿ ಗಂಡಸ್ರಿಗೆ ಹೇಳಿ ಬಂದಿದ್ದೀರಾ...?"

"ಇಲ್ಲ ಆಚಾರ್ರೇ...." ಅತ್ತಿಗೆ ಪೆಚ್ಚು ದನಿಯಲ್ಲಿ ಹೇಳಿದಳು.

"ಇವಿಷ್ಟನ್ನೂ ಒಟ್ಟು ಹನ್ನೆರಡು ಸಾವಿರ ರೂಪಾಯಿ ಕೊಡ್ತೀನಿ..."

"ಅಷ್ಟು ಬೆಲೆ ಬಾಳುತ್ತಾ....?"

"ಇನ್ನೂ ಬಾಳುತ್ತೆ. ಆದರೆ ನನಗೆ ಲಾಭ ಬೇಡ್ವಾ...? ಹೋಗಲಿ ನಿಮಗೆ ಅಂತ ಹದಿನೈದು ಸಾವಿರ ರೂಪಾಯಿ ಕೊಡ್ತೀನಿ... ಬೇರೆ ಯಾರ್ಗೂ ಹೇಳ್ಬೇಡಿ..."

"ಬೇರೆಯವರು ಇನ್ನೂ ಹೆಚ್ಗೇ ಕೊಡಬಹುದು...."

"ಇದು ತಮಿಳು ನಾಡಿನ, ರಾಜ ಮಹಾರಾಜರ ವಂಶದ ಕಾಲದ ವಜ್ರಗಳು. ಈಗ ಇಂಥವು ನೋಡುಕ್ಕೆ ಕೂಡಾ ಅಪರೂಪ.... ನೀವು ಮೋಸ ಹೋಗ್ತೀರಿ... ಅಷ್ಟೇ..."

"ನೀವು ಮೋಸ ಮಾಡ್ತಿಲ್ಲ ಅಂತ ಹೇಗೆ ನಂಬೋದು...?"

"ನಾನು ಮೋಸ ಮಾಡೋನೇ ಆಗಿದ್ದಿದ್ರೆ, ಇಷ್ಟು ಮಾತನ್ನಾಡಬೇಕಾಗಿರ್ಲಿಲ್ಲ... ಕೈ ಮೇಲೆ ಅಷ್ಟೋ ಇಷ್ಟೋ ಹಣ ಕೊಟ್ಟಿದ್ರೂ ಸುಮ್ಮನಿರ್ತಿದ್ರಿ... ಇಂಥಾ ಒಡವೆಗಳನ್ನು ತಲತಲಾಂತರದವರೆಗೆ, ಕಾಪಾಡಿಕೊಂಡು ಬರ್ತಾರೆ.... ಅದು ಬಿಟ್ಟು ಮಾರೋಕೆ ಅಂತ ಬಂದಿರುವಾಗಲೇ, ನಿಮಗೆ ಇದರ ಬಗ್ಗೆ ಜ್ಞಾನ ಇಲ್ಲ ಅಂತ ತಿಳೀತು. ಈಗಲೂ ನೀವು ಇದನ್ನು ಮಾರಲಿ ಅನ್ನುವ

ಆಸೆ ನನಗಿಲ್ಲ. ಜೋಪಾನವಾಗಿ ಕಾಪಾಡಿಕೊಳ್ಳಿ... ಬೇರೆ ಯಾರಿಗೂ ಹೇಳ್ಬೇಡಿ... ಮೋಸ ಮಾಡ್ತಾರೆ."

"ನನ್ನ ಗಂಡನ ಮನೆಯವರ್ಯಾರಿಗೂ ಇದು ವಜ್ರ ಅಂತ ಗೊತ್ತೇ ಇಲ್ಲ ಅಂತ ಕಾಣುತ್ತೆ... ಹಾಗೆ ಹೇಳಿದ ನೆನಪಿಲ್ಲ..."

"ಬಹುಶಃ ಅವರಿಗೂ ಗೊತ್ತಿರಲಾರದು... ಈಗ ಏನ್ಮಾಡ್ತೀರಿ ಹೇಳಿ. ಅಂಗಡಿ ಬಾಗಿಲು ಹಾಕಿ ಊಟಕ್ಕೆ ಹೋಗುವ ಹೊತ್ತಾಯ್ತು...."

"ನಮಗೂ ಏನ್ಮಾಡ್ಬೇಕು ಅಂತ ಗೊತ್ತಾಗ್ತಿಲ್ಲ ಆಚಾರ್ರೇ.... ನೀವು ಹೇಗೆ ಹೇಳ್ತೀರೋ ಹಾಗೆ...."

"ಹಾಗಾದ್ರೆ ನನ್ನ ಮಾತನ್ನು ಕೇಳಿ. ಈ ಅಮೂಲ್ಯವಾದ ಓಲೆಗಳನ್ನು ತೆಗೆದುಕೊಂಡು ಹೋಗಿ ಎಂದಿಗೂ ಮಾರಬೇಡಿ.... ನಾನು ಅದನ್ನು ಕ್ಲೀನ್ ಮಾಡಿಸಿ ಕೊಡ್ತೀನಿ.... ಆಗ ಅದರ ಹೊಳಪು ನಿಮ್ಮ ಕಣ್ಣುಗಳನ್ನು ಕೋರೈಸುತ್ತೆ.... ಎಷ್ಟೋ ವರ್ಷಗಳಿಂದ ಒರೆಸಿಲ್ಲ.... ವಾಷಿಂಗ್ ಸೋಡಾದಲ್ಲಿ ತೊಳೆದರೆ ಸಾಕು.... ಹಾಗೇ ಚಿನ್ನಕ್ಕೆ ಪಾಲಿಷ್ ಮಾಡಿಸಿ ಕೊಡ್ತೀನಿ... ಪಾಲಿಷ್ ಕೂಡಾ ಮಾಡಿಸಿಲ್ಲ ಅಂತ ಕಾಣ್ಸುತ್ತೆ...."

"ಹೌದು ಮದುವೇಲಿ ಕೊಟ್ಟಾಗ ಸಹ ಹೀಗೇ ಇತ್ತು. ಅದಕ್ಕೇ ನಾವು ಬಿಳೀ ಹರಳಿನ ಎಣ್ಣೆ ಕೂತಿರುವ ವಾಲೆಗಳು ಅಂತ ಅಂದ್ಕೊಂಡ್ವು.... ಈಗ್ಲೂ ನಮಗೆ ನಿಮ್ಮ ಮಾತಿನ ಮೇಲೆ ನಂಬಿಕೆ ಬರ್ತಿಲ್ಲ..."

"ನಮ್ಮ ಮನೇ ದೇವರ ಮೇಲೆ ಆಣೆ ಮಾಡಿ ಹೇಳ್ತೀನಿ. ಇದು ವಜ್ರಾನೇ.... ಎಲ್ಲಿ, ಯಾರ ಹತ್ರ ಯಾವಾಗ ತಗೊಂಡಿದ್ದು ಅಂತ ತಿಳ್ಕೊಳ್ಳಿ.... ನಾನು ಇದರ ಈಗಿನ ಬೆಲೆಯನ್ನು ಸಹ ಹೇಳ್ತೀನಿ.... ನೀವಿನ್ನು ಹೊರಡಿ ಹೊತ್ತಾಯ್ತು...."

"ನಾವು ಇಲ್ಲಿಗೆ ಇವುಗಳನ್ನು ಮಾರೋಕೆ ಬಂದ ವಿಷಯವನ್ನು ದಯವಿಟ್ಟು ಯಾರಿಗೂ ಹೇಳ್ಬೇಡಿ...."

"ಯಾರಿಗೂ ಹೇಳುಲ್ಲ. ಇದನ್ನು ಮಾರುವ ಪ್ರಸಂಗ, ಆಸೆ ಎಂದೂ ನಿಮಗೆ ಬರದಿರಲಿ.... ನನ್ನ ಸಲಹೆಯನ್ನು ನೆನಪಿನಲ್ಲಿಟ್ಟುಕೊಳ್ಳೀ...."

"ಮತ್ತೆ ಬರ್ತೀವಿ, ನಮಸ್ಕಾರ" ಎಂದು ಹೇಳಿ ಇಬ್ಬರೂ ಅಂಗಡಿಯಿಂದ ಹೊರಬಿದ್ದರು.

"ಎಂಥಾ ಕೆಲಸ ಆಗಿ ಹೋಗ್ತಿತ್ತಲ್ಲೇ ನಾಗೂ.... ಕುರುಬ ಬಲ್ಲನೆ ಮರುಗದ ಘಮಾನ ಅಂತಾರಲ್ಲ ಹಾಗಾಯ್ತು.... ಬಿಳೀ ಕಲ್ಲಿನ ವಾಲೆ ಅಂತ ಅಂದ್ಕೊಂಡಿದ್ದು ಬೆಲೆ ಬಾಳುವ ವಜ್ರ ಅಂತ ಅಂತಾನಲ್ಲೇ ಈ ಆಚಾರಿ, ಈಗೇನ್ಮಾಡ್ತೀಯ?"

"ಇದೇ ಚಿನ್ನದ ವಾಲೆಗಳಿಗೆ ಪಾಲಿಷ್ ಹಾಕಿಸ್ಕೊಡಿ ಅತ್ತಿಗೆ.... ಈ

ವಾಲೆಗಳ ಸಹವಾಸವೇ ಬೇಡ.... ನನ್ನಂಥೋಳಿಗೆ ಯಾಕೆ ಇವೆಲ್ಲಾ...." ಅವಳ ಕಣ್ಣುಗಳಲ್ಲಿ ನೀರು ತುಂಬಿಕೊಂಡಿತ್ತು.

"ಅಳ್ಬೇಡ ನಾಗೂ... ನಿನ್ನ ಪಾಲಿಗೆ ಈ ವಜ್ರಗಳು ಸಿಕ್ಕಿವೆ ಅಂತಂದ್ರೆ ಯಾವುದೋ ಯೋಗವೇ ಸರಿ.... ಮೊದಲಿನಂತೆ ಸುಮ್ಮನಿದ್ದು ಬಿಡು....ನಿನ್ನ ಗಂಡನಿಗೆ ಹೇಳಲೇ ಬೇಡ...."

ಅತ್ತಿಗೆ ಹಾಗೆ ಹೇಳಿದರೂ ನಾಗವೇಣಿಯ ಮನಸ್ಸು ಒಪ್ಪಲಿಲ್ಲ. ಗಂಡನೂ ದಡ್ಡನೇ... ಮಾವನೂ ದಡ್ಡರೇ... ಬಹುಶಃ ನಾವೆಲ್ಲರೂ ದಡ್ಡರೇ.... ಈ ಅಕ್ಕ ಸಾಲಿ ಹೇಳದೇ ಇದ್ದಿದ್ದರೆ, ನನಗೂ ತಿಳಿಯುತಿರಲಿಲ್ಲ. ಗಂಡನಿಂದ ಈ ವಿಷಯವನ್ನು ಮುಚ್ಚಿಡುವುದು ಸರಿಯಲ್ಲ. ತಿಳಿಸಲೇ ಬೇಕು ಅಂತಂದು ಕೊಂಡಳು. ಆ ಸಮಯ ಕ್ಕಾಗಿ ಕಾದಳು.

* * *

"ನಾಗೂ, ಯಾಕೆ ಬರೀ ಕಿವೀಲಿ ಇದೀಯ? ....ಎಣ್ಣೆ ಸ್ನಾನ ಮಾಡಿದ್ಯಾ?" ಶೇಷಾದ್ರಿ ಕೇಳಿದ.

"ಇಲ್ಲ, ಓಲೆಗಳು ಯಾಕೋ ಭಾರ ಅಂತ ಅನ್ನಿಸ್ತು... ನಿಮಗೇ ಗೊತ್ತಲ್ಲ ನನಗೆ ಈಗ ಏನೇನೋ ಅನ್ನಿಸುತ್ತೆ...."

"ನಿನ್ನ ಹತ್ರ ಇತ್ತಲ್ಲ ಅದನ್ನಾದ್ರೂ ಹಾಕ್ಕೋ.... ಬೋಳು ಕಿವಿ ಚೆನ್ನಾಗಿ ಕಾಣುಲ್ಲ..."

"ಅದನ್ನು ಪಾಲಿಷ್ ಹಾಕಿಸುಕ್ಕೆ ಕೊಟ್ಟಿದೀನಿ.. ಕಿಲುಬು ಎದ್ದು ಹೋಗಿತ್ತು..."

"ಚಿನ್ನಕ್ಕೆ ಕಿಲುಬು ಹತ್ತುಲ್ಲ.... ಒಳ್ಳೇ ಚಿನ್ನವೇ ತಾನೇ...?"

"ಯಾರಿಗೆ ಗೊತ್ತು? ....ನಮಗೆ ಯಾವ ತಿಳುವಳಿಕೆ ಇದೆ? ...ಚಿನ್ನ, ವಜ್ರ, ಬೆಳ್ಳಿಯ ಬಗ್ಗೆ ಏನು ಅರಿವಿದೆ?"

"ಯಾಕೆ ಹೀಗೆ ಮಾತಾಡ್ತೀಯ? ....ನಾನೇನಾದ್ರೂ ಹಾಗೆ ಮಾತಾಡಿ ದೀನಾ?"

"ಇಲ್ಲಾರೀ ನೀವು ತುಂಬಾ ಒಳ್ಳೆಯವರು, ನಾನೇ ಸರಿಯಿಲ್ಲ. ನನ್ನನ್ನು ಕ್ಷಮಿಸಿ ಬಿಡಿ...." ಎನ್ನುತ್ತಾ ಅವನ ಕಾಲುಗಳನ್ನು ಹಿಡಿದಳು. ಅವನು ಸರ್ರನೆ ಅವಳನ್ನು ಎತ್ತಿ ನಿಲ್ಲಿಸಿದ.

"ಛೇ... ಹೀಗೆಲ್ಲಾ ಯಾಕೆ ಮಾಡ್ತಿದೀಯಾ? ನೀನೀಗ ಹೀಗೆಲ್ಲಾ ಎದ್ದು ಬಗ್ಗಿ ಮಾಡಬಾರದು.... ಅಲ್ಲದೇ ಅಂಥಾ ತಪ್ಪು ನೀನ್ಯಾಕೆ ಮಾಡ್ತೀಯ....?"

"ನಾನೇನು ತಪ್ಪು ಮಾಡುಕ್ಕೆ ಹೊರಟಿದ್ದೆ ಅಂತ ನಿಮಗೆ ಗೊತ್ತಿಲ್ಲ...."

"ಏನು ತಪ್ಪು? ...ನನಗೆ ತಿಳಿಯದಂತೆ ಏನಾದ್ರೂ ಔಷಧಿ ತಗೊಂಡ್ಯಾ? ಹಾಗೆ ಮಾತ್ರ ಮಾಡ್ಬೇಡ.... ಹುಟ್ಟಲಿರುವ ಮಗು ನಮ್ಮಿಬ್ಬರ ಪ್ರೀತಿಯ

ಕುರುಹು. ಇದನ್ನು ನಾನು ಸಹಿಸುವುದಿಲ್ಲ."

"ಇಲ್ಲ ರೀ... ಈ ಮಗುವಿನ ಮೇಲೆ ನನಗೂ ಅಕ್ಕರೆ ಇದೆ.... ಎಂದಿಗೆ ಈ ಮಗುವಿನ ಮುಖವನ್ನು ನೋಡ್ತೀನೋ ಅಂತ ಕಾಯ್ತಾ ಇದೀನಿ...."

"ನನ್ನಿಂದ ನಿನಗೆ ಎಷ್ಟು ಕಷ್ಟ ಅಲ್ವಾ? ...ನನ್ನ ಮಗು ನಿನಗೆ ಸಾಕಷ್ಟು ತೊಂದರೆ ಕೊಡುತ್ತಿರಬಹುದು.... ಹೆರಿಗೆ ನೋವು ಇನ್ನೂ ಕಷ್ಟ ಅಂತ ಅಂತಾರೆ.... ಆದರೆ, ತಾಯಿಯಾಗೋದು ಸುಲಭ ಅಲ್ಲ.... ಅದು ಶಾಪವೋ, ವರವೋ ಹೆಂಗಸರಿಗೆ ಮಾತ್ರ ಗೊತ್ತು. ಆ ಅನುಭವ ಗಂಡಸರಿಗೆ ಇಲ್ಲವಲ್ಲ... ನಿನಗೆ ಬೇಸರಾನಾ?"

"ನನಗೆ ಯಾವ ಬೇಸರವೂ ಇಲ್ಲ.... ಬಯಕೆ ತೀರಿಸ್ಕೊಳ್ಳುಕ್ಕೆ ಹೋಗಿ ನನ್ನಿಂದ ಒಂದು ಅವಿವೇಕ ನಡೆದು ಹೋಗಿದೆ.... ದಯವಿಟ್ಟು ಬೈಯಬೇಡಿ...." ಕೈ ಮುಗಿದಳು.

"ಬೈಯ್ಯಬಹುದು ಅನ್ನೋ ಅಂಜಿಕೆ ಇದ್ದರೆ ಅಂಥಾ ಕೆಲಸ ಮಾಡುಕ್ಕೆ ಯಾಕೆ ಹೋದೆ ನಾಗೂ? ....ಹೋಗ್ಲೀ ಏನಾಯ್ತು ಅಂತ ಹೇಳು ನಾನು ಬೈಯುಲ್ಲ...."

"ನಿಮ್ಮಮ್ಮನ ವಾಲೆ.... ಅದೇ ನಾನು ಹಾಕಿಕೊಳ್ತಿನಲ್ಲ.... ಅದು ನನಗೆ ಬೇಡ... ನನಗೆ ಅಪ್ಪನ ಮನೆಯ ಚಿನ್ನದ ಓಲೆಯೇ ಸಾಕು..."

"ಯಾಕೆ? ಯಾರಾದ್ರೂ ಏನಾದ್ರೂ ಅಂದ್ರಾ? ....ಅಪ್ಪನೇ ತಾನೇ ಕೊಟ್ಟಿರೋದು. ಎಲ್ರಿಗೂ ಗೊತ್ತಲ್ಲ. ಯಾರಿಗೂ ಕೇರ್ ಮಾಡ್ಬೇಡ ನೀನು...."

"ಅದಲ್ಲ... ಆ ವಾಲೆಗಳನ್ನು ಹಾಕಿಕೊಳ್ಳುವ ಅರ್ಹತೆ ನನಗಿಲ್ಲ..."

"ಅದ್ಯಾಕೆ ಹಾಗಂದ್ಕೊಳ್ತೀಯ. ಅದು ನಿನಗೆ ಸೇರಿತು ಎಂದ ಮೇಲೆ ನಿನಗೆ ಅರ್ಹತೆ ಇದೆ ಅಂತಲೇ ಅರ್ಥ... ಇದ್ದಕ್ಕಿದ್ದಂತೆ ಅದರ ಬಗ್ಗೆ ತಾತ್ಸಾರ ಯಾಕೆ?"

"ತಾತ್ಸಾರ ಅಲ್ಲ ರೀ.... ಭಯ.... ಅದು ಬರೀ ಬಿಳಿ ಹರಳಿನ ಓಲೆಗಳಲ್ಲ.... ವಜ್ರದ ಓಲೆಗಳು!...ಎಲ್ಲರಿಗೂ ವಜ್ರ ಆಗಿ ಬರುಲ್ಲ ಅಂತಾರೆ...."

ಅವನು ಗೊಳ್ಳನೆ ನಕ್ಕ... "ವಜ್ರ ಓಲೆಗಳಾ? ಹಾಗಂತ ಅಪ್ಪ ಹೇಳಿದ್ರಾ...? ಅವರು ತಮಾಷೆ ಮಾಡಿರಬಹುದು.... ಅಥವಾ ನೀನೇ ಕತೆ ಕಟ್ಟಿರಬಹುದು...."

"ನಾನ್ಯಾಕೆ ಕತೆ ಕಟ್ಟಲಿ? ನನ್ನ ಮಾತಿನ ಮೇಲೆ ನಿಮಗೆ ನಂಬಿಕೆ ಇಲ್ಲದಿದ್ರೆ, ಯಾವುದೇ ಅಕ್ಕಸಾಲೀನ ಹೋಗಿ ಕೇಳಿ.... ನಿಮಗೇ ಗೊತ್ತಾಗುತ್ತೆ..."

"ಹಾಗಂತ ಯಾವ ಅಕ್ಕಸಾಲಿಗ ಹೇಳ್ದ...?"

"ನಮ್ಮ ತಂದೆ ಮನೆಯಲ್ಲಿ ಸಣ್ಣ ಪುಟ್ಟ ಚಿನ್ನದ ಆಭರಣಗಳನ್ನು ಮಾಡಿಕೊಡುವ ಅಕ್ಕಸಾಲಿಗ ಹೇಳಿದ...."

"ಅವನಿಗೆ ಯಾಕೆ ತೋರಿಸ್ದೆ? ನಿನ್ನ ತಲೆ ಕೆಟ್ಟಿದೆಯಾ?" ...ರೇಗಿದ.

"ಬೈಯುಲ್ಲ ಅಂತ ಹೇಳಿದೀರಿ. ಬೈಯಬೇಡಿ... ಪೂರ್ತಿ ನನ್ನ ಮಾತನ್ನು ಕೇಳಿಸ್ಕೊಳ್ಳಿ... ಅತ್ತಿಗೆ ಹೇಳಿದ್ರು ಅಂತ, ಪಾಲಿಷ್ ಹಾಕಿಸುಕ್ಕೆ ಅಂತ ತಗೊಂಡು ಅತ್ತಿಗೆಯ ಜತೇಲಿ ಹೋಗಿದ್ದೆ.... ಆಗ ತಿಳೀತು..."

"ನಿಜ ಹೇಳು... ಆ ಹರಳುಗಳನ್ನು ಮಬ್ಬಾಗಿದೆ ಅಂತ ತೆಗೆಸಿದ್ಯಾ?"

"ಇಲ್ಲ, ಬೇಕಾದ್ರೆ ನೋಡಿ ಹಾಗೇ ಇದೆ..." ಎನ್ನುತ್ತಾ ತನ್ನ ಹ್ಯಾಂಡ್ ಬ್ಯಾಗ್‌ನಲ್ಲಿದ್ದ ಓಲೆಗಳನ್ನು ತೆಗೆದು ಗಂಡನ ಕೈಗೆ ಕೊಟ್ಟಳು. ಅವನು ಅವುಗಳನ್ನೇ ದಿಟ್ಟಿಸಿ ನೋಡಿದ. ಅವನಿಗೂ ಗೊಂದಲವುಂಟಾಗಿತ್ತು.

"ಅಪ್ಪನ್ನ ಕೇಳೋಣ.... ಅವರಿಗೆ ಗೊತ್ತಿರುತ್ತೆ...." ಎಂದ

"ಬೇಡ, ಅವರನ್ನು ಏನೂ ಕೇಳ್ಬೇಡಿ... ನಮ್ಮ ಬಗ್ಗೆ ತಪ್ಪು ತಿಳಿದುಕೊಳ್ತಾರೆ..."

"ಒಂದು ವೇಳೆ ಅಪ್ಪನಿಗೂ ಗೊತ್ತಿಲ್ಲದೇ ಇದ್ದರೆ, ಅವರಿಗೂ ಇದರ ಬೆಲೆ ತಿಳಿಯುತ್ತೆ ನಾಗೂ..."

"ಅವರಿಗೆ ಗೊತ್ತಿಲ್ಲದೇ ಇರುತ್ತಾ? ಅವರೇ ತೆಗೆಸಿಕೊಟ್ಟಿದ್ದು ಅಂತ ಹೇಳಿದ್ರಿ.... ಯಾವಾಗ ತೆಗೆದುಕೊಂಡಿದ್ದು, ಎಷ್ಟಾಯಿತು ಅಂತ ಅವರಿಗೆ ಖಂಡಿತಾ ಗೊತ್ತಿರುತ್ತೆ. ಅವರನ್ನು ಏನೂ ಕೇಳೋದು ಬೇಡ...."

"ಸರಿ ನಿನ್ನಿಷ್ಟ... ಆದರೆ ಬೇರೆ ಯಾರಿಗೂ ನೀನು ಈ ವಿಷಯವನ್ನು ಹೇಳಬಾರದು. ಎಲ್ಲರೂ ತಲಾತಟ್ಟೆ ಮಾತಾಡ್ತಾರೆ. ಅಪ್ಪನಿಗೆ ಬೇಸರವಾಗುತ್ತೆ. ಹಾಗೇ ನಿನ್ನ ಅತ್ತಿಗೆಗೂ ಹೇಳಿ ಬಿಡು"

"ಅತ್ತಿಗೆ ತುಂಬಾ ಹೆದರಿ ಬಿಟ್ಟಿದ್ದಾರೆ.... ಅವರಿಗೆ ಅಕ್ಕಸಾಲಿಗನ ಮೇಲೂ ಪೂರ್ಣ ನಂಬಿಕೆ ಇಲ್ಲ..."

"ಎಲ್ಲವನ್ನೂ ಇಲ್ಲಿಗೇ ಮರೆತು ಬಿಡು ಅಂತ ಹೇಳು... ಮುಂದೆಂದೂ ಈ ಬಗ್ಗೆ ಯಾರೂ ಚರ್ಚೆ ಮಾಡುವುದು ನನಗಿಷ್ಟವಿಲ್ಲ...."

"ಆದರೆ ಈ ಕಾರಣದಿಂದ ನಿಜ ಏನೂಂತ ತಿಳೀತಲ್ಲ... ಬೇರೆಯವರಿಗೆ ತಿಳಿದ್ರೆ ನಮ್ಮಿಂದ ಕಸಿದುಕೊಳ್ತಾರೆ ಅನ್ನೋ ಭಯಾನ?"

"ಭಯ ಏನಲ್ಲ, ಆದರೆ, ನಮಗೆ, ಅಪರೂಪದ, ಅಮೂಲ್ಯವಾದ ಉಡುಗೊರೆ ಸಿಕ್ಕಿದೆ ಅಂತ ತಿಳಿದ್ರೆ ಅಸೂಯೆ ಪಡಬಹುದು. ಹಿಂದೆ ಆಡಿಕೊಳ್ಳ ಬಹುದು. ಅದೆಲ್ಲಾ ಯಾಕೆ ಅಂತ... ಅದಕ್ಕೇ ಅಪ್ಪ ಕೂಡಾ ಇದರ ಬಗ್ಗೆ ಹೇಳಿಲ್ಲದೇ ಇರಬಹುದು...."

"ಇರಬಹುದು... ಆದರೆ ಇಷ್ಟು ಬೆಲೆ ಬಾಳುವ ಉಡುಗೊರೆಗೆ ನಾನು ಅರ್ಹಳಾ? ನನಗೆ ಭಯವಾಗುತ್ತೆ ರೀ...."

"ಭಯ ಯಾಕೆ ನಾಗು? ....ಕದ್ದಿದ್ದಲ್ಲ ಕಿತ್ಕೊಂಡಿದ್ದಲ್ಲ... ಪ್ರೀತಿಯಿಂದ

ಆಶೀರ್ವಾದ ಪೂರ್ವಕವಾಗಿ ಕೊಟ್ಟಿರೋದು.... ಮುಂಚಿನಂತೆಯೇ ಏನೂ ಗೊತ್ತಿಲ್ಲದವಳಂತೆ ಇದ್ದು ಬಿಡು.... ಅಂಜಿಕೆಯೂ ಬೇಡ: ಅಹಂಕಾರವೂ ಬೇಡ:" ಎಂದು ಹೇಳಿ ಹೆಂಡತಿಯನ್ನು ಸಮಾಧಾನಗೊಳಿಸಿದನು. ಹೆಂಡತಿಗೆ ಹಾಗೆ ಹೇಳಿದರೂ ಅವನ ಮನಸ್ಸು ಅಲ್ಲೋಲ ಕಲ್ಲೋಲವಾಗಿತ್ತು. ಅಪ್ಪ ತನಗ್ಯಾಕೆ ಈ ವಿಷಯವನ್ನು ಹೇಳಲಿಲ್ಲ? ಈ ಓಲೆಗಳನ್ನು ತನ್ನ ಹೆಂಡತಿಗೇ ಕೊಡಲು ಪ್ರಬಲವಾದ ಕಾರಣವೇನು? ತಿಳಿದುಕೊಳ್ಳಬೇಕೆಂದೆನಿಸಿತ್ತು.

ತಂದೆ ರಾತ್ರಿಯ ಊಟ ಮುಗಿಸಿ, ಮುಂಬಾಗಿಲ ಬಳಿ, ಕುರ್ಚಿಯನ್ನು ಹಾಕಿಕೊಂಡು ತಂಗಾಳಿಗೆ ಮೈಯೊಡ್ಡಿ ಕುಳಿತಿದ್ದರು. ನಾಗು, ಅಡಿಗೆ ಮನೆಯ ಉಳಿದ ಕೆಲಸಗಳನ್ನು ಮುಗಿಸುವುದರಲ್ಲಿದ್ದಳು. ಶೇಷಾದ್ರಿ ತಂದೆಯ ಎದುರಿಗೆ ಬಂದು ಕೈ ಕಟ್ಟಿ ನಿಂತ. ಆತ ಅವನ ಕಡೆ ತಿರುಗಿದರು.

"ಏನಾದ್ರೂ ಹೇಳ್ಬೇಕಾಗಿತ್ತಾ ಶೇಷು? ನಿನ್ನ ಹೆಂಡ್ತಿ ಆರೋಗ್ಯವಾಗಿದಾಳಾ? ಡಾಕ್ಟರ ಹತ್ರ ಹೋಗಿದ್ಲಾ?"

"ಹೂಂ ನಪ್ಪಾ.... ಹುಶಾರಾಗಿದಾಳೆ...."

"ದುಡ್ಡು ಕಾಸು ಏನಾದ್ರೂ ಬೇಕಾಗಿತ್ತಾ? ಸಂಕೋಚ ಪಟ್ಕೋಬೇಡ, ಎಷ್ಟು ಬೇಕು ಕೇಳು...."

"ನಾಗೂಗೆ ಒಂದು ಜೊತೆ ಬಳೆ ಬೇಕಂತೆ, ಆಸೆ ಪಡ್ತಿದಾಳೆ... ಅಮ್ಮನ ಹಳೆಯ ವಾಲೆಗಳು ಮೂಗುಬೊಟ್ಟಿನ ಹೊರತು ನಾವು ಬೇರೆ ಯಾವ ಒಡವೆಯನ್ನೂ ಕೊಟ್ಟಿಲ್ಲ...."

"ಹಾಗಂತ ಅವಳು ಹೇಳಿದ್ಲಾ? ನೀನೇ ಹೇಳ್ತಿದೀಯೋ? ..ನಿಜ ಹೇಳು...."

"ನಾನೇ ಹೇಳ್ತಿದೀನಿ.... ಅತ್ತಿಗೇರು, ಅಕ್ಕಂದಿರು, ಎಲ್ರೂ ಎಷ್ಟೆಷ್ಟು ಒಡವೆಗಳನ್ನಿಟ್ಟುಕೊಂಡಿದ್ದಾರೆ.... ಇವಳ ಹತ್ರ ಏನೂ ಇಲ್ಲ... ಅವಳ ಅಪ್ಪನ ಮನೆಯಿಂದ್ಲೂ ಏನನ್ನೂ ತಂದಿಲ್ಲ...."

"ಓ.... ಅವಳಿಗಿಂತ ನಿನಗೇ ಹೆಚ್ಚಿನ ಆಸೆ ಇರುವಂತಿದೆ. ಹೆಂಡತಿಯ ಬಯಕೆಯನ್ನು ತೀರಿಸುವ ಆಸೆ... ಮಾಡಿಸ್ಕೊಡು.... ನಾನು ಹಣ ಕೊಡ್ತೀನಿ..."

"ತಪ್ಪು ತಿಳ್ಕೋಬೇಡಿ ಅಪ್ಪಾ.... ಅಮ್ಮ ಆಸೆ ಪಟ್ಟಾಗ ನೀವೂ ಮಾಡಿಸಿ ಕೊಟ್ಟಿದೀರಿ ಅಲ್ವಾ? ...ಅಮ್ಮನ ಹತ್ರ ಎಷ್ಟೊಂದು ಒಡವೆಗಳಿದ್ದವು...."

"ಹೌದು... ಅವಳು ಬಸಿರಿಯಾಗಿದ್ದಾಗ, ಅವಳು ಕೇಳಿದ್ದ ಒಡವೆಗಳನ್ನೆಲ್ಲ ಮಾಡಿಸಿ ಕೊಟ್ಟೆ.... ನನ್ನ ಸಂಪಾದನೆ ಚೆನ್ನಾಗಿತ್ತು...." ಶೇಷಾದ್ರಿ ಪೆಚ್ಚಾದ.

"ನನಗೆ ಸಂಪಾದನೆಯಿಲ್ಲ ಅಂತ ಹಂಗಿಸಿ ಅಂತಿದೀರೇನಪ್ಪಾ?"

"ನಾನು ಏನೂ ಅಂದಿಲ್ಲ.... ನಿನ್ನ ಹೆಂಡ್ತಿ ಆಸೆ ಪಡುವುದೂ ತಪ್ಪಲ್ಲ.... ನಿನ್ನ ಅಮ್ಮನ ಒಡವೆಗಳಲ್ಲಿ ಕೆಲವನ್ನಾದರೂ, ನಿನ್ನ ಹೆಂಡತಿಗೆ, ಮಂಜುಗೆ

ಕೊಡಬೇಕಾಗಿತ್ತು ಅಂತ ಈಗ ಅನ್ನಿಸ್ತಿದೆ.... ನಾಗವೇಣಿಗೆ, ನಾನು ಯಾರಿಗೂ ತಿಳಿಸದೇ ತೆಗೆದಿಟ್ಟುಕೊಂಡಿದ್ದ ಓಲೆ, ಮೂಗು ಬೊಟ್ಟನ್ನು ಕೊಟ್ಟೆ.... ಪಾಪ ಮಂಜೂಗೆ ಎಂಥದೂ ಇಲ್ಲ...." ತಂದೆ ಪೇಚಾಡಿದರು. ಅವಳೂ ಈಗ ಗರ್ಭಿಣಿಯಾಗಿದಾಳೆ, ತವರು ಮನೆಯಿಂದ ಏನಾದರೂ ಒಡವೆ ಮಾಡಿಸಿ ಕೊಡಬೇಕು.... ಎರಡು ಜೊತೆ ಬಳೆಗಳಿಗೆ ಆರ್ಡರ್ ಕೊಟ್ಟು ಮಾಡಿಸಿದರಾಯ್ತು... ನಾನೇ ನಿನಗೆ ಹೇಳೋಣ ಅಂತ ಅಂದುಕೊಂಡಿದ್ದೆ... ಅಂದ ಹಾಗೇ ಈ ನಡುವೆ, ನಿನ್ನ ಹೆಂಡ್ತಿ ಬರೀ ಕಿವೀಲಿ ಓಡಾಡ್ತಾಳೆ.... ಏನಂತೆ ಸಮಸ್ಯೆ?"

"ವಾಲೆ ಸ್ವಲ್ಪ ಭಾರ.... ಕಿವಿ ಕಡಿತ ಆಗುತ್ತೆ ಅಂತಿದ್ದಳು... ಆಗ ಈಗ ತೆಗೆದಿದ್ದಾಳೆ ಅಷ್ಟೇ.... ಅಮ್ಮ ಕೂಡಾ ತೆಗೆದಿಟ್ಟಿರುತ್ತಿದ್ಲು ಅಂತ ಹೇಳಿದ್ರಿ...."

"ನಿನ್ನಮ್ಮ ಮಾಡಿದ ಹಾಗೆಯೇ ನಿನ್ನ ಹೆಂಡತಿಯೂ ಮಾಡ್ಬೇಕು ಅಂತ ಏನೂ ಇಲ್ಲ.... ಅವಳು ಸಾಲಾಗಿ ಹದಿನಾರು ಮಕ್ಕಳನ್ನು ಹೆತ್ತಳು.... ನಿನ್ನ ಹೆಂಡ್ತಿ ನಾಜೂಕು.... ವಾಲೆ ಭಾರಾನೇ ತಡಕೊಳ್ಳೋಕೆ ಆಗದೋಳು.... ಇನ್ನು ಮೈಭಾರವನ್ನು ಹೇಗೆ ತಡೆದುಕೊಂಡಾಳು....?" ತಮಾಷೆಯ ನಗುವನ್ನು ನಕ್ಕಾಗ ಅವನು ಕೆಂಪಾದ. "ನಾಚ್ಕೋಬೇಡ್ವೋ ಶೇಷೂ. ನಂಗೂ ಗೊತ್ತು ಈಗ ಕಾಲ ಬದಲಾಗಿದೆ. ನಾಲ್ಕು ಮಕ್ಕಳು ಸಾಕು. ಎರಡು ಗಂಡು, ಎರಡು ಹೆಣ್ಣು. ಅಷ್ಟನ್ನು ಹೆತ್ತು ಬಿಡಲಿ."

"ನಾಲ್ಕು ಮಕ್ಕಳು ಜಾಸ್ತಿ ಅಲ್ವೇನಪ್ಪಾ...ಅಷ್ಟು ಆಸೆ ಇಟ್ಕೋಬೇಡಿ..."

"ನಿನ್ನ ತಮ್ಮ ಮನೆ ಬಿಟ್ಟು ಸನ್ಯಾಸಿಯಾಗ್ದೇ ಹೋಗಿದ್ದಿದ್ರೆ.... ಅವನಿಗೂ ಮದುವೆ ಮಾಡಿ, ಅವನ ಹೆಂಡತಿಗೂ ಮಕ್ಕಳಾಗಲಿ ಎಂದು ಆಸೆ ಪಡ್ತಿದ್ದೆ.... ಈಗೇನು ಮಾಡ್ಲೀ... ಆ ಆಸೆನೂ ನೀನೇ ತೀರಿಸ್ಬೇಕಾಗಿದೆ...."

"ಅಪ್ಪಾ.... ಅವನ್ಯಾಕೆ ಮನೆ ಬಿಟ್ಟು ಹೋದ?"

"ಅವನ ಹಣೇಲಿ ನಮ್ಮಗಳ ಜೊತೆ ಇರುವ ಯೋಗ ಬರೆದಿರಲಿಲ್ಲ. ಮನೆ ಬಿಟ್ಟು ಹೋದ ಸನ್ಯಾಸಿಯಾದ. ಈಗ ಅದು ಮುಗಿದು ಹೋದ ಕತೆ... ಇನ್ನು ಅವನು ಈ ಸಂಸಾರಕ್ಕೆ ಬರುವುದೂ ಇಲ್ಲ. ನಾನು ನನ್ನ ಮಗ ಅಂತ ಹೇಳಿಕೊಳ್ಳುವಂತೆಯೂ ಇಲ್ಲ"

"ಈಗ ಅವನು ಎಲ್ಲಿದ್ದಾನಪ್ಪಾ? ನಾನು ನೋಡ್ಕೊಂಡು, ಮಾತಾಡಿಸ್ಕೊಂಡು ಬರ್ತೀನಿ..."

"ಈ ಬಂಧನವೆಲ್ಲಾ ಬೇಡ ಅಂತ ಕಳಚ್ಕೊಂಡು ಹೋದೋನನ್ನು ಹೋಗಿ ನೋಡೋದೇನು? ನಿಮ್ಮಮ್ಮ ಸತ್ತಾಗ ಬರ್ಲಿಲ್ಲ... ಅವನ ಸಂಬಂಧ ನಮಗ್ಯಾಕೆ? ....ಈಗ ಆ ಮಾತುಗಳು ಸಾಕು. ಏನು ತಿಂಡಿ ಮಾಡಿದಾಳೆ ನಿನ್ನ ಹೆಂಡ್ತಿ ಅಂಥ ನೋಡು ಹೋಗು... ಅವಳಿಗೆ ಸ್ವಲ್ಪ ಸಹಾಯ ಮಾಡು...

ಅವಳೊಬ್ಬಳಿಗೇ ಆಯಾಸ ಆಗುತ್ತೆ...."

"ಅಪ್ಪಾ.... ನಾನೊಂದ್ಮಾತು ಕೇಳ್ಲಾ....?"

"ಹೂಂ... ಕೇಳು.... ದುಡ್ಡೇನಾದ್ರೂ ಬೇಕಾಗಿತ್ತಾ?"

"ಸಧ್ಯಕ್ಕೆ ಬೇಕಿಲ್ಲ... ಆ ವಿಷಯ ಅಲ್ಲ... ವಜ್ರದ ಓಲೆ ಎಲ್ಲರ ನಕ್ಷತ್ರ, ರಾಶಿಗೆ ಆಗಿ ಬರುಲ್ಲ ಅಂತಾರೆ, ಹೌದೇನಪ್ಪಾ...?"

"ಏನೋ ಗೊತ್ತಿಲ್ಲ? ...ಈಗ ಯಾರ ಬಗ್ಗೆ ಕೇಳ್ತಿದೀಯ? ವಜ್ರದ ಓಲೆಗಳನ್ನು ಯಾರು ತಗೋತಿದಾರೆ? ಶಾಸ್ತ್ರ ಕೇಳಿಸಿಕೊಳ್ಳಲಿ...."

"ಹಾಗಾದ್ರೆ ನಾನು ಹೋಗಿ, ನಾಗು ನಕ್ಷತ್ರಕ್ಕೆ ವಜ್ರದ ಒಡವೆ ಆಗಿ ಬರುತ್ತಾ ಅಂತ ಕೇಳ್ಕೊಂಡು ಬರ್ತೀನಿ..." ಆತ ತಟ್ಟನೆ ಅವನ ಕಡೆ ನೋಡಿ, ತಕ್ಷಣವೇ ಎಚ್ಚೆತ್ತರು. ಹಗುರವಾಗಿ ನಕ್ಕರು.

"ಚಿನ್ನದ ಒಡವೆ ಮಾಡಿಸುಕ್ಕೆ ನಿನ್ಹತ್ರ ದುಡ್ಡಿಲ್ಲ. ಇನ್ನು ವಜ್ರದ ಒಡವೆಗೆ ಹಣಾನ ಎಲ್ಲಿಂದ ಒದಗಿಸ್ತೀಯ...?"

"ಇನ್ನು ಮುಚ್ಚು ಮರೆ ಸಾಕು ಅಪ್ಪಾ...ನೀವು ಕೊಟ್ಟಿರುವ ವಾಲೆಗಳು ವಜ್ರದ್ದು ಅಂತ ನಿಮಗೆ ಗೊತ್ತಿಲ್ವಾ?" ಆತನ ಮುಖದ ಬಣ್ಣ ಬದಲಾಯಿತು.

"ಹಾಗಂತ ನಿಂಗೆ ಯಾರು ಹೇಳಿದ್ರು...ಯಾರೋ ತಮಾಷೆ ಮಾಡಿದಾರೆ..."

"ಅಕ್ಕಸಾಲಿಗ ಹೇಳಿದಾನೆ... ಅವನ್ಯಾಕೆ ತಮಾಷೆ ಮಾಡ್ತಾನೆ?"

"ಅಂದ್ರೇ... ನಿನ್ನ ಹೆಂಡ್ತಿ ವಾಲೇನ ಪರೀಕ್ಷೆ ಮಾಡಿಸುಕ್ಕೆ ಅಕ್ಕಸಾಲಿಗನ ಬಳಿಗೆ ಹೋಗಿದ್ಲಾ? ಅವಳನ್ನು ಕರಿ..." ಗುಡುಗಿದರು.

"ಪರೀಕ್ಷೆ ಮಾಡಿಸುಕ್ಕೆ ಅಲ್ಲ... ಪಾಲಿಷ್ ಮಾಡಿಸುಕ್ಕೆ ಅಂತ, ಇವಳ ಅತ್ತಿಗೆ ಇವಳನ್ನು ಕರ್ಕೊಂಡು ಹೋಗಿದ್ಲಂತೆ.... ಅವನು ಬೆಲೆ ಬಾಳುವ ವಜ್ರ ಅಂತಂದ್ನಂತೆ... ನಿಜ ತಾನೇ?" ಅವರು ದನಿಯನ್ನು ತಗ್ಗಿಸಿದರು.

"ಮೆಲ್ಲಗೆ ಮಾತಾಡು. ಯಾರಿಗಾದ್ರೂ ಕೇಳಿಸೀತು... ನಾನು ಇದುವರೆಗೂ ಯಾರಿಗೂ ಹೇಳಿಲ್ಲ... ಗುಟ್ಟಾಗಿ ಇಟ್ಟಿದೇನೆ..."

"ಯಾಕೆ? ಏನು ಭಯ?"

"ಭಯ ಅಲ್ಲ. ಸುಮ್ಮನೇ ಎಲ್ರಿಗೂ ಯಾಕೆ ತಿಳಿಯೋದು ಅಂತ ಅಷ್ಟೇ... ನಿಮ್ಮಮ್ಮನಿಗೂ ಸಹ ಗೊತ್ತಿರ್ಲಿಲ್ಲ..."

"ಅಮ್ಮಂಗೆ ಯಾಕೆ ಹೇಳ್ಲಿಲ್ಲ?...ಇದು ತಪ್ಪಲ್ವಾ?"

"ಅದಕ್ಕೆ ಕಾರಣ ಇದೆ. ನನ್ನ ಆಪ್ತ ಸ್ನೇಹಿತ ಒಬ್ಬ ಇದ್ದ. ಐಯಂಗಾರ್ ಪಂಗಡಕ್ಕೆ ಸೇರಿದವನು. ಅವನ ಹೆಂಡತಿ ತಮಿಳ್ನಾಡಿನವಳು. ಅವರಿಗೆ ಮಕ್ಕಳಾ ಗಿರಲಿಲ್ಲ. ವ್ರತ ಕತೆ, ತೀರ್ಥ ಯಾತ್ರೆ ಎಲ್ಲಾ ಮಾಡಿದ್ದರು. ಆದರೂ ಮಕ್ಕಳ ಭಾಗ್ಯ ಅವರಿಗಿರಲಿಲ್ಲ. ಆ ದಂಪತಿಗಳು ಆಗ ಈಗ ನಮ್ಮ ಮನೆಗೆ

ಬರುತ್ತಿದ್ದರು. ನಮ್ಮ ಮನೆ ತುಂಬಾ ಇದ್ದ ಮಕ್ಕಳನ್ನು ಕಂಡು ಆನಂದಿಸುತ್ತಿದ್ದರು. ಮನೆಗೆಂದೂ ಬರಿಗೈಯಲ್ಲಿ ಬರುತ್ತಿರಲಿಲ್ಲ. ಏನಾದರೂ ತಂದು ಕೊಡುತ್ತಿದ್ದರು. ಯಥೇಚ್ಛವಾಗಿ ದಾನ ಧರ್ಮ ಮಾಡುತ್ತಿದ್ದರು. ಬಡ ಬಗ್ಗರಿಗೆ ಸಹಾಯ ಮಾಡುತ್ತಿದ್ದರು. ಇದ್ದಕ್ಕಿದ್ದಂತೆ ಆಕೆಗೆ ಅದೇನಾಯ್ತೋ... ತನ್ನ ಬಳಿ ಇದ್ದ ಒಡವೆಗಳನ್ನೆಲ್ಲಾ ಮಾರಿ ಬಿಟ್ಟು, ಯಾವುದಾದರೂ ಆಶ್ರಮಕ್ಕೆ ಹೋಗಿ ಸೇರಿಕೊಳ್ಳಬೇಕೆಂಬ ಹಂಬಲ ಶುರುವಾಯ್ತಂತೆ. ಆ ಸಮಯದಲ್ಲಿ ಗಂಡನ ಮತುಗಳಿಗೂ ಆಕೆ ಬೆಲೆ ಕೊಡದೇ ಹಠ ಹಿಡಿದಳಂತೆ. ಆಗ ಆ ಐಯ್ಯಂಗಾರರು ನನ್ನ ಹತ್ತಿರ ತಮ್ಮ ಅಳಲನ್ನು ತೋಡಿಕೊಂಡರು. ನನ್ನ ಹತ್ತಿರ ಇರುವ ಬೆಳ್ಳಿ ಬಂಗಾರವನ್ನೆಲ್ಲ ಯಾರ್‍ಯಾರಿಗೋ ಮಾರುವ ಮನಸ್ಸಿಲ್ಲ. ಅಕ್ಕಸಾಲಿಗರು ತಕ್ಷಣವೇ ಕರಗಿಸಿ ಬಿಡುತ್ತಾರೆ... ಆದ್ದರಿಂದ ಇದನ್ನೆಲ್ಲ ಸಧ್ಯಕ್ಕೆ ನಿಮ್ಮ ಮನೆಯಲ್ಲಿಟ್ಟುಕೊಂಡಿರಿ. ನನ್ನ ಹೆಂಡತಿಯ ಮನಸ್ಸು ಮತ್ತೆ ಬದಲಾಯಿಸ ಬಹುದು. ಆಗ ನಾನು ಇವುಗಳನ್ನು ವಾಪಸ್ಸು ತೆಗೆದುಕೊಂಡು ಹೋಗ್ತೀನಿ... ಎಂದರು. ನಾನು ಒಪ್ಪಲಿಲ್ಲ... ನನಗೆ ಭಯವೂ ಆಗಿತ್ತು."

"ಇವೆಲ್ಲಾ ಬೆಲೆಬಾಳುವ ಒಡವೆಗಳು. ಏನಾದರೂ ಹೆಚ್ಚು ಕಡಿಮೆ ಆದರೆ... ಪರಸ್ಪರ ನಂಬಿಕೆ ಹೊರಟು ಹೋಗುತ್ತದೆ. ಅಲ್ಲದೇ ಜವಾಬ್ದಾರಿಯ ಕೆಲಸ.... ನಾನು ಹೇಗೆ ಒಪ್ಪಿಕೊಳ್ಳಲಿ?" ಎಂದು ಕೇಳಿದೆ.

"ನನಗೆ ನಿಮ್ಮ ಮೇಲೆ ನಂಬಿಕೆ ಇದೆ.... ನಾನೆಂದೂ ನಿಮ್ಮ ಮೇಲೆ ಅನುಮಾನ ಪಡುವುದಿಲ್ಲ. ಎಂದು ಒತ್ತಿ ಹೇಳಿದರು. ನಾನು ಒಂದು ಷರತ್ತು ಹಾಕಿದೆ. ಏನೇನು ಒಡವೆಗಳಿವೆ.... ಎಷ್ಟು ಬೆಲೆ ಬಾಳುತ್ತವೆ ಎಂದು ಪಟ್ಟಿ ಹಾಕಿಕೊಡಿ. ಅಷ್ಟು ಹಣವನ್ನೂ ನಾನು ಕೊಟ್ಟಿರುತ್ತೇನೆ.... ಆದರೂ ಇದು ನಿಮ್ಮ ಸ್ವತ್ತು... ನೀವು ಮತ್ತೆ ವಾಪಸ್ಸು ತೆಗೆದುಕೊಂಡು ಹೋಗುವವರೆಗೂ ನಾನು ಇದನ್ನು ಜೋಪಾನವಾಗಿ ಕಾಪಾಡಿಕೊಂಡು ನೋಡಿಕೊಳ್ಳುತ್ತೇನೆ...."

"ಸರಿ... ಅದೇ ಒಪ್ಪಂದದ ಪ್ರಕಾರ, ಅವರು ಕಟ್ಟಿಸಿದ ಬೆಲೆಯಷ್ಟು ಹಣವನ್ನು ಅವರಿಗೆ ಕೊಟ್ಟು, ಪತ್ರವನ್ನು ಬರೆಸಿ, ಸಹಿ ಹಾಕಿ ಇಬ್ಬರೂ ಒಂದೊಂದು ಪ್ರತಿಯನ್ನು ಇಟ್ಟುಕೊಂಡೆವು.

"ಇದಾದ ಮೇಲೆ ಗಂಡ ಹೆಂಡತಿ, ಮನೆ ಮಠವನ್ನು ಬಿಟ್ಟು ಎಲ್ಲಿಗೋ ಹೊರಟೇ ಹೋದರು. ಎಲ್ಲಿದಾರೆ, ಹೇಗಿದಾರೆ.... ಒಂದೂ ತಿಳಿಯಲಿಲ್ಲ.... ಅವರಿವರಲ್ಲಿ ವಿಚಾರಿಸಿದರೂ ಅವರ ಬಗ್ಗೆ ಪತ್ತೆಯಾಗಲಿಲ್ಲ. ಆದರೂ ಕೆಲವು ವರ್ಷಗಳು ಅವರು ಹಿಂತಿರುಗಿ ಬರುವರೋ ಏನೋ ಎಂದು ಕಾದೆ... ಒಡವೆಗಳು ನನ್ನ ತಿಜೋರಿಯಲ್ಲಿ ಭದ್ರವಾಗಿದ್ದವು.... ಆಗ ಇದ್ದಕ್ಕಿದ್ದಂತೆ ಈ ಒಡವೆಗಳು ನಕಲಿ ಇರಬಹುದೇ ಎಂಬ ಅನುಮಾನ ಸಹ ಕಾಡಿತು.

ಅವುಗಳನ್ನು ಕೆಲವು ಒಡವೆಗಳನ್ನು ತೆಗೆದು ಅಕ್ಕಸಾಲಿಗನಲ್ಲಿ ಪರೀಕ್ಷೆ ಮಾಡಿಸಿದೆ. ಎಲ್ಲವೂ ಅಪ್ಪಟ ಚಿನ್ನದೆಂದು ತಿಳಿಯಿತು. ಬೆಲೆಯನ್ನೂ ಸಹ ವಿಚಾರಿಸಿದೆ.... ನಾನು ಕೊಟ್ಟಿದ್ದಕ್ಕೂ, ಅವನು ಹೇಳಿದ್ದಕ್ಕೂ ಸರಿಯಾಗಿತ್ತು.... ನಾನು ಕೊಟ್ಟ ಹಣ ಸಾಲದ ರೂಪ ದಲ್ಲಿದ್ದುದರಿಂದ ಬಡ್ಡಿಯಿಂದಾಗಿ ಅದೂ ಬೆಳೆದಿತ್ತು... ಈಗ ನಾನು ಇಷ್ಟೂ ಒಡವೆಗಳನ್ನು ಮಾರುವಂತಿರಲಿಲ್ಲ... ಅಥವಾ ನಾನು ಕೊಟ್ಟ ಹಣ ಹಿಂದಕ್ಕೆ ಬರುತ್ತದೆಂಬ ನಂಬಿಕೆಯೂ ಕಡಿಮೆ ಆಗುತ್ತಿತ್ತು.... ಇದೇ ಆಲೋಚನೆಯಲ್ಲಿದ್ದವನಿಗೆ ಒಂದು ರಾತ್ರಿ ಕನಸಿನಲ್ಲಿ ಆ ಮನುಷ್ಯ ಕಾಣಿಸಿಕೊಂಡ... ಆ ಒಡವೆಗಳೆಲ್ಲವೂ, ನಿಮಗೆ ಸೇರಬೇಕಾದದ್ದು... ಎಲ್ಲವನ್ನೂ ನಿಮ್ಮ ಪತ್ನಿಗೆ ಕೊಡಿ ಎಂದು ನಿಚ್ಚಳವಾಗಿ ಹೇಳಿದಂತೆ ಕೇಳಿಸಿತು. ಇದು ನನ್ನ ಮನದ ಪ್ರತಿಧ್ವನಿಯೇ ಇರಬಹುದು. ಆದರೆ ಬೇರೆ ವಿಧಿ ಇರಲಿಲ್ಲ.

ಒಂದು ದಿನ ನನ್ನ ಹೆಂಡತಿಯೊಡನೆ ಅಷ್ಟೂ ವಿಷಯವನ್ನು ತಿಳಿಸಿದೆ. ಈ ಒಡವೆಗಳಿಗೆ ದುಡ್ಡು ಕೊಟ್ಟಿದ್ದೇನೆ. ಈಗ ಎಲ್ಲವೂ ನಮ್ಮದು. ನಿನಗೆ ಇಷ್ಟವಿದ್ದರೆ ನೀನು ಧರಿಸಿಕೊಳ್ಳಬಹುದು. ಅನುಮಾನ ಪಡಬೇಕಾಗಿಲ್ಲ ಅಂತಂದೆ. ಆ ವೇಳೆ ಗಾಗಲೇ ನಮಗೆ ಹತ್ತು ಮಕ್ಕಳು ಹುಟ್ಟಿದ್ದವು. ಮೊದಲಿಗೆ ಅವಳು ಅನುಮಾನಿಸಿ ದರೂ ನಂತರ ನುಡಿದಳು.

"ಮನೆ ತುಂಬಾ ಹೆಣ್ಣು ಮಕ್ಕಳಿವೆ. ಮುಂದೆ ಅವರುಗಳ ಮದುವೆಯ ಸಮಯಕ್ಕೆ ಆಗುತ್ತದೆ, ಇಟ್ಟುಕೊಳ್ಳೋಣ..." ಎಂದಳು. ನನಗೂ ಸಮಾಧಾನ ವಾಗಿತ್ತು. ಎಷ್ಟಾಗಲೀ ಹೆಂಗಸು, ಆಸೆ ಸಹಜ. ಒಂದೊಂದೇ ಒಡವೆಗಳನ್ನು ತೆಗೆದುಕೊಂಡು ಧರಿಸುತ್ತಿದ್ದಳು. ಹೆಣ್ಣು ಮಕ್ಕಳಿಗೂ ತೊಡಿಸುತ್ತಿದ್ದಳು. ಇನ್ನೂ ಒಂದು ಹೆಚ್ಚುಗಾರಿಕೆಯ ವಿಷಯ ಅಂತಂದರೆ, ನನಗೆ ಬಡ್ತಿ ಸಿಕ್ಕಿತು... ಸಂಪಾದನೆ ದ್ವಿಗುಣಗೊಂಡಿತ್ತು.... ಈ ಮನೆಯನ್ನು ಕಟ್ಟಿಸುವ ಸುಯೋಗ ಒದಗಿತು. ಮನೆ ತುಂಬಾ ಮಕ್ಕಳಿದ್ದರೂ, ನನಗೆ ತೊಂದರೆ ಎನಿಸಲಿಲ್ಲ. ತಿನ್ನುಕ್ಕೆ ಉಣ್ಣುಕ್ಕೆ ಕೊರತೆ ಇರಲಿಲ್ಲ...ಸಮೃದ್ಧಿಯ ಜೀವನವನ್ನು ಸಾಗಿಸಿದೆ. ನಿಮ್ಮಮ್ಮನ ಸಹಕಾರ ನನಗಿತ್ತು. ನಮ್ಮಿಬ್ಬರ ಅನ್ಯೋನತೆ ಇನ್ನೂ ಹೆಚ್ಚಿತ್ತು. ಕುತೂಹಲದಿಂದ ಜ್ಯೋತಿಷಿಗಳ ಬಳಿಗೆ ಹೋಗಿ ಮಾತಾಡಿದೆ... ಯಾವುದೋ ದೈವಾನುಗ್ರಹ ನಿಮ್ಮ ಮೇಲಿದೆ ಎಂದರು. ನಾನೂ ಆ ದಂಪತಿಗಳಂತೆ ಇರಬೇಕೆಂದುಕೊಂಡು, ದಾನ, ದರ್ಮ, ಪೂಜೆ, ಪುನಸ್ಕಾರ ಎಲ್ಲವನ್ನೂ ನಡೆಸಿದೆ. ನಾನು ನೆಮ್ಮದಿ ಯಿಂದಲೇ ಇದ್ದೆ.

ಇಷ್ಟು ವರ್ಷಗಳ ಅನುಭವದಲ್ಲಿ ನನಗೆ ಆಘಾತವಾದದ್ದು, ನಿನ್ನ ತಮ್ಮ ಮನೆ ಬಿಟ್ಟು ಹೋಗಿ ಮಠಕ್ಕೆ ಸೇರಿದಾಗ.... ಅವನ ಹಣೆಯಲ್ಲಿ ಸನ್ಯಾಸಯೋಗ ಬರೆದಿರುವಾಗ ತಪ್ಪಿಸಲು ಆಗುವುದಿಲ್ಲ.... ಅದರಲ್ಲೇ ಅವನು

ನೆಮ್ಮದಿಯಿಂದ ಇದಾನಲ್ಲ ಎಂದುಕೊಂಡು ಸಮಧಾನ ಮಾಡಿಕೊಂಡೆವು. ನಿನ್ನ ಅಮ್ಮ ನೆಮ್ಮದಿಯ ಜೀವನವನ್ನು ಬಾಳಿದಳು. ಯಾವುದಕ್ಕೂ ಕೊರತೆ ಇರಲಿಲ್ಲ. ನನಗಿಂತ ಮುಂಚೆಯೇ ಅವಳು ಹೋದದ್ದು ಅವಳ ಸೌಭಾಗ್ಯವೇ ಸರಿ...ಇಷ್ಟಕ್ಕೆಲ್ಲಾ ಕಾರಣ ಈ ಒಡವೆಗಳು. ಅದರಲ್ಲೂ ಈ ಓಲೆಗಳು ಹಾಗೂ ಮೂಗುಬೊಟ್ಟು ಅಂತ ನನ್ನ ನಂಬಿಕೆ. ಆಗಲೇ ಅದು ವಜ್ರದ ಒಡವೆಗಳು ಅಂತ ನನಗೆ ತಿಳಿದಿತ್ತು. ಆದರೆ ವಜ್ರದ ಶೋಭೆ ಇರಲಿಲ್ಲ. ಅಕ್ಕಸಾಲಿಗನ ಕೈಯಲ್ಲಿ ತೊಳೆಸಿದ್ದರೆ ಕ್ಲೀನ್ ಆಗಿರುತ್ತಿತ್ತು.... ಯಾಕೋ ಏನೋ ನಾವಿಬ್ಬರೂ ಅದಕ್ಕೆ ಗಮನ ಕೊಡಲಿಲ್ಲ. ಹಾಗಾಗಿ ಯಾರಿಗೂ ಅದು ಬೆಲೆ ಬಾಳುವ ವಜ್ರದ ಓಲೆ ಎಂಬ ಅನುಮಾನವೇ ಬರಲಿಲ್ಲ.... ನಿಮ್ಮಮ್ಮ ಅದನ್ನು ಧರಿಸುತ್ತಿದ್ದುದೇ ಕಡಿಮೆ. ದಿಂಬಿನ ಕೆಳಗೋ, ಮೆತ್ತೆಯ ಕೆಳಗೋ ಇಟ್ಟಿರುತ್ತಿದ್ದಳು... ಆ ಐಯಂಗಾರರ ಪತ್ನಿ ಧರಿಸುತ್ತಿದ್ದಾಗಲೇ ಅದು ಸಾಕಷ್ಟು ಹಳೆಯದಾಗಿತ್ತು. ಆಗಲೂ ನಾವು ಯಾವ ಜ್ಯೋತಿಷಿಯನ್ನೂ ನಮ್ಮ ರಾಶಿಗೆ ವಜ್ರ ಆಗಿ ಬರುತ್ತೋ ಇಲ್ಲವೋ ಅಂತ ಕೇಳಲಿಲ್ಲ. ವಜ್ರಕ್ಕೂ ಅವರವರ ಹಣೆಯ ಬರಹಕ್ಕೂ ಏನು ಸಂಬಂಧ ಅಂತ ಅನ್ನಿಸಿತ್ತು. ಆ ದಂಪತಿಗಳಿಗೆ ಮಕ್ಕಳಿರಲಿಲ್ಲ, ವೈರಾಗ್ಯ ಬಂದು ದೇಶಾಂತರ ಹೊರಟು ಹೋದರು. ನಮಗೆ ಮನೆ ತುಂಬಾ ಮಕ್ಕಳು. ಯಾವುದಕ್ಕೂ ಕೊರತೆ ಇರಲಿಲ್ಲ... ಅಲ್ವಾ?...."

"ಆದರೂ ನನ್ನ ತಮ್ಮ ಮನೆ ಬಿಟ್ಟು ಹೋದದ್ದಕ್ಕೆ ಇದು ಕಾರಣ ವಾಗಿದ್ದರೆ?"

'ಹಾಗೆ ಯಾಕೆ ಹೇಳ್ತೀಯಾ? ಹಾಗೇನಾದ್ರೂ ಇದ್ದಿದ್ದರೆ, ಎಲ್ಲರೂ ಸನ್ಯಾಸಿ ಗಳಾಗಿ ಮನೆ ಬಿಟ್ಟು ಹೋಗಿರಬಹುದಾಗಿತ್ತಲ್ಲ... ಹೆಚ್ಚು ಯೋಚಿಸ್ಬೇಡ, ಸುಮ್ನಿರು."

ಅಡಿಗೆ ಮನೆಯ ಬಾಗಿಲ ಹಿಂದೆ ನಿಂತು ನಾಗವೇಣಿ ಇವರಿಬ್ಬರ ಮಾತುಗಳನ್ನು ಕೇಳಿಸಿಕೊಂಡಿದ್ದಳು. ಏನೋ ಒಂದು ರೀತಿಯ ಭಯ ಹುಟ್ಟಿತು. ಜೊತೆಗೇ ಮಾವನ ಮೇಲಿನ ಗೌರವ ಹೆಚ್ಚಿತು. ಆದರೂ ಮುಂದೆ ಏನೇನಾಗು ವುದೋ.... ಈ ಗೊಂದಲಗಳಿಗೆ ತಾನೇ ಏಕೆ ಸಿಕ್ಕಿ ಬೀಳಬೇಕಾಗಿತ್ತು ಎಂದು ಕೊಂಡು, ಹೊರಗೆ ಬಂದಳು.

"ತಿಂಡಿ ಆಯ್ತೇನಮ್ಮಾ... ಕೊಟ್ಬಿಡು... ಸ್ವಲ್ಪ ಹೊರಗೆ ಹೋಗ್ಬೇಕು" ಎಂದರು. ಅವಳು ವೇಗವಾಗಿ ಬಂದು ಮಾವನ ಕಾಲುಗಳನ್ನು ಹಿಡಿದಳು.

"ನನ್ನನ್ನು ಕ್ಷಮಿಸಿ ಬಿಡಿ ಮಾವ.... ನನ್ನಿಂದಾಗಿ ನೀವು ಇಷ್ಟೆಲ್ಲಾ ಹೇಳ್ಬೇಕಾಯ್ತು..."

"ಪರವಾಗಿಲ್ಲ ಬಿಡು, ಎಂದಾದರೂ ಈ ಮುಂಚೆಯೇ ತಿಳಿಸಿದ್ದರೆ, ಚೆನ್ನಾಗಿರ್ತಿತ್ತೇನೋ.... ಆದರೆ ಯಾರಿಗೂ ಹೇಳುವ ಇಚ್ಛೆ ನನಗಿರಲಿಲ್ಲ.

ಯಾರ್‍ಯಾರ ಅನಿಸಿಕೆ ಹೇಗ್ಹೇಗೆ ಇರುತ್ತೋ ಅಂತ.... ನಿಮ್ಮಿಬ್ಬರಿಗೂ ನನ್ನ ಮಾತಿನಲ್ಲಿ ವಿಶ್ವಾಸ ವಿದ್ದರೆ, ಮುಂದೆಂದೂ ಇದರ ಬಗ್ಗೆ ಪ್ರಶ್ನೆಗಳನ್ನು ಕೇಳ್ಬೇಡಿ.... ನಿನಗೆ ಹಾಕಿಕೊಳ್ಳುವ ಮನಸ್ಸಿದ್ದರೆ ಹಾಕ್ಕೋ... ಇಲ್ಲದಿದ್ದರೆ ನಾನು ಬಲವಂತ ಮಾಡುವುದಿಲ್ಲ... ಏನೋ, ನೀವಿಬ್ಬರೂ ತಕ್ಕ ಮಟ್ಟಿಗೆ ಚೆನ್ನಾಗಿರಲಿ ಅಂತ ನನಗೂ ಆಸೆ.... ಇವನ ತಮ್ಮ ಮನೆ ಬಿಟ್ಟು ಹೋಗದೇ ಇದ್ದಿದ್ದರೆ ಇವನನ್ನು ಚೆನ್ನಾಗಿ ಓದಿಸಿ, ಪರವೂರಿಗೆ ಒಳ್ಳೆಯ ಕೆಲಸಕ್ಕೆ ಕಳಿಸಿಕೊಡುತ್ತಿದ್ದೆನೋ ಏನೋ, ನಾನು ಸ್ವಾರ್ಥಿಯಾಗಿಬಿಟ್ಟೆನೋ ಏನೋ..." ಅವಳ ತಲೆಯ ಮೇಲೆ ಕೈ ಇಟ್ಟರು.

"ಇಲ್ಲ ಅಪ್ಪಾ.... ಹಾಗಂದ್ಕೋಬೇಡಿ...." ಶೇಷಾದ್ರಿ ಅಪ್ಪನ ಮಗ್ಗುಲಿಗೆ ಬಂದು ನಿಂತ.

"ಆಯ್ತು... ನೀವಿಬ್ಬರೂ ನನಗೆ ಪ್ರಿಯರಾದವರು. ಅದಕ್ಕೇ ಎಲ್ಲವನ್ನೂ ಹೇಳಿ ಬಿಟ್ಟೆ.... ನೀವು ಮಾತ್ರ ಯಾರಿಗೂ ಹೇಳಬಾರದು. ಹಾಗಂತ ಮಾತು ಕೊಡಿ" ಇಬ್ಬರೂ ಪೆಚ್ಚಾಗಿದ್ದರು. ಯಾರಿಗೂ ಹೇಳುವುದಿಲ್ಲವೆಂದು ಮಾತನ್ನು ಕೊಟ್ಟರು. ಆ ಓಲೆಗಳನ್ನು ಮೂಗುಬೊಟ್ಟನ್ನೂ ಇತ್ತ ತತ್ತಾ... ನಾನೇ ಕ್ಲೀನ್ ಮಾಡಿಸಿ, ಪಾಲಿಷ್ ಹಾಕಿಸಿಕೊಂಡು ಬರ್ತೀನಿ...."

ನಾಗವೇಣಿ ಇಬ್ಬರಿಗೂ ತಿಂಡಿಯನ್ನು ತಂದುಕೊಟ್ಟು, ವಾಲೆ ಮೂಗು ಬೊಟ್ಟಿನ ಡಬ್ಬಿಯನ್ನು ತಂದಿತ್ತಳು. ಆ ದಿನವೆಲ್ಲಾ ನಾಗವೇಣಿ ಉದಾಸೀನವಾಗಿಯೇ ಇದ್ದಳು. ತಾನು ಮಾಡಿದ್ದು ಸರಿಯೋ ತಪ್ಪೋ ಎನ್ನುವ ಗೊಂದಲದಲ್ಲಿದ್ದಳು.

ಕೆಲವು ದಿನಗಳ ನಂತರ, ನಾಗವೇಣಿಗೆ ಬಳೆ ತೊಡಿಸುವ ಶಾಸ್ತ್ರವನ್ನು ಮಾಡಿದರು. ಅವಳ ಬಯಕೆಯನ್ನು ಪೂರೈಸುವ ಸಲುವಾಗಿ ಅವಳಿಗೆ ಒಂದು ಜೊತೆ ಚಿನ್ನದ ಬಳೆಗಳನ್ನು ಮಾಡಿಸಿ ಕೊಟ್ಟರು. ಉಳಿದವರಿಗೆ ಸ್ವಲ್ಪ ಮಟ್ಟಿಗೆ ಅಸಮಾಧಾನವೂ ಆಗಿತ್ತು. "ನಮಗ್ಯಾರಿಗೂ, ನಿನ್ನ ಬಯಕೆ ಏನು ಅಂತ ಕೇಳ್ಲಿಲ್ಲ... ಚಿನ್ನದ ಒಂದು ಕಾಸನ್ನೂ ಸಹ ತರಲಿಲ್ಲ... ನಾಗವೇಣಿಗೆ ಮಾತ್ರ ಮುಚ್ಚಟೆ" ಕೆಲವರು ಕೇಳಿಸುವಂತೆ ಆಡಿದರು. ಕೆಲವರು ಹಿಂದೆ ಆಡಿ ಕೊಂಡರು. ಆದರೆ ತಂದೆ ಈ ಮಾತಿಗೆ ಉಭ ಶುಭ ಎನ್ನಲಿಲ್ಲ. ಹಾಗೆಯೇ ಅವಳ ಹೊಳೆ ಹೊಳೆಯುವ ಓಲೆ ಮೂಗು ಬೊಟ್ಟನ್ನು ನೋಡಿದರು. ಒಂದಿಬ್ಬರು ಕೇಳಿದರು.

"ನಾಗೂ ಬೇರೆ ಕಲ್ಲು ಹಾಕಿಸಿದ್ಯಾ? ...ಮಾವನವರು ಏನೂ ಅನ್ನಲಿಲ್ವಾ?"

"ಅವರೇ ಹಾಕಿಸಿದ್ದು... ಹಾಗೇ ಇಟ್ಟು ಬಿಟ್ಟಿದ್ದೆನಲ್ಲ... ಅವರಿಗೆ ಬೇಸರವಾಗಿತ್ತು...."

"ಏನು ಅಕರಾಸ್ತೆಯೋ... ಹೋಗಲಿ ಬಿಡು... ಮತ್ತೆ ಇದರ ಹಣೇ ಬರಹ ಅಷ್ಟೇ.... ಬಿಳಿ ಹರಳಿನ ಓಲೆಗೆ ಬಹಳ ಬೇಗ ಎಣ್ಣೆ ಇಳಿದುಕೊಳ್ಳುತ್ತೆ, ಕೆಂಪೋ, ಹಸಿರೋ ಹರಳನ್ನಾದ್ರೂ ಹಾಕಿಸಿಕೊಳ್ಳಬೇಕಾಗಿತ್ತು...."

"ಯಾವುದೋ ಒಂದು ಬಿಡಿ ಅಕ್ಕಾ, ಅವರು ಏನು ಹೇಳ್ತಾರೋ ಏನು ಮಾಡ್ತಾರೋ ಅದು ನನಗೆ ಒಪ್ಪಿಗೆ" ಎಂದುಬಿಟ್ಟಳು. ಅವರುಗಳು ಸುಮ್ಮನಾಗಿಬಿಟ್ಟರು.

"ಪರವಾಗಿಲ್ವೇ ನಾಗೂ... ಶೇಷಾದ್ರಿ ನಿನ್ನನ್ನು ಬಹಳ ಹದ್ದು ಬಸ್ತಿನಲ್ಲಿಟ್ಟು ಕೊಂಡಿದಾನೆ... ಅವರುಗಳ ಇಷ್ಟದಂತೆ ನಡೆದುಕೊಳ್ತೀಯಲ್ಲ. ನಿನಗೆ ಸ್ವಂತ ಬುದ್ಧಿ ಅನ್ನೋದೇ ಇಲ್ವಾ?"

"ಇಬ್ಬರೂ ನನ್ನನ್ನು ಚೆನ್ನಾಗಿ ನೋಡ್ಕೊಳ್ತಾರೆ... ಇನ್ನೇನು ಬೇಕು ನಂಗೆ?"

"ಹೋಗ್ಲಿ ಬಿಡು... ಮನೆ ಖರ್ಚಿಗೆ ಅಂತ ಮಾವ ಏನಾದ್ರೂ ಕೊಡ್ತಾರೋ ... ಅಥವಾ ನಿನ್ನ ಗಂಡನೇ ಖರ್ಚು ಮಾಡ್ತಾನೋ..."

"ಏನೋ ನಂಗೊತ್ತಿಲ್ಲ... ನಾನೆಂದೂ ಕೇಳಿಲ್ಲ..."

"ಪೆದ್ದಿ ಕಣೇ ನೀನು... ತಾಯಿಯಾಗ್ತಿದೀಯ... ಮುಂದೆ ಇನ್ನೂ ಒಂದೆರಡು ಮಕ್ಕಳುಗಳಾಗಬಹುದು. ಅಲ್ಪ ಸ್ವಲ್ಪ ಹಣ ಕೂಡಿಸದೇ ಇದ್ದರೆ ಮುಂದೆ ನಿಮಗೇ ಕಷ್ಟ... ಅವರು ಇಟ್ಕೊಂಡು ಏನ್ಮಾಡ್ತಾರೆ? ....ಮನೆ ಖರ್ಚಿ ಗಾದರೂ ಕೊಡ್ಲಿ..."

"ನಾಗೂ ಇಲ್ಲಿದೀಯ.... ಅಪ್ಪ ನಿನ್ನನ್ನು ಕೇಳ್ತಾ ಇದ್ದರು..." ಎನ್ನುತ್ತಾ ಶೇಷು ಒಳಗೆ ಬಂದಾಗ ಅತ್ತಿಗೆ ಮಾತನ್ನು ನಿಲ್ಲಿಸಿದಳು. ಶೇಷಾದ್ರಿಯೊಡನೆ ಅವಳು ಹೊರಕ್ಕೆ ಹೊರಟು ಹೋಗಿದ್ದಳು.

* * *

ದಿನ ತುಂಬುವ ಮೊದಲೇ. ನಾಗು ಹೆಣ್ಣು ಮಗುವನ್ನು ಹೆತ್ತಳು. ಮಗುವಿಗೆ ರಕ್ಷಿತಾ ಎಂದು ಹೆಸರನ್ನಿಟ್ಟರು. ಶೇಷಾದ್ರಿಯ ತಂದೆ, ಮಗುವಿಗೆ ಒಂದೆಳೆ ಸರವನ್ನು ಮಾಡಿಸಿಕೊಟ್ಟರು. "ನಮಗೆ ಇಷ್ಟೆಲ್ಲಾ ಒಡವೆ ಕೊಡಬೇಡಿ ಎಂದು ನಿಮ್ಮ ತಂದೆಗೆ ಹೇಳಿ. ಉಳಿದವರಿಗೆ ಬೇಸರವಾಗುತ್ತೆ..." ನಾಗೂ ಗಂಡನೊಡನೆ ಹೇಳಿದ್ದಳು.

"ಅಪ್ಪನಿಗೆ ಆಸೆ, ಮಾಡಿಸಿಕೊಡ್ತಾರೆ. ನಾವೇನು ಕೇಳಿದ್ವಾ? ನೀನು ಸುಮ್ನಿರು" ಎಂದ.

"ಯಾಕೋ ಭಯವಾಗುತ್ತೆ ಕಣ್ರೀ.... ಬೆಲೆಬಾಳುವ ಓಲೆಗಳನ್ನು ಕೊಟ್ಟು ನಮ್ಮನ್ನು ತಮ್ಮ ಕಡೆಗೆ ಮಾಡ್ಕೊಂಡುಬಿಟ್ಟಿದ್ದಾರೆ. ಅವರು ಹೇಳಿದ ಹಾಗೆ ಕೇಳಬೇಕಾಗಿದೆ. ನಮಗೆ ಹೇಗೆ ಬೇಕೋ ಹಾಗೆ ಇರುವ ಆಸೆ ನಮಗಿಲ್ವಾ?

ಈಗ ನಾವೂ ತಂದೆ ತಾಯಿಯರಾಗಿದೇವೆ... ನಮ್ಮ ಮಕ್ಕಳನ್ನು ನಮಗೆ ಹೇಗೆ ಬೇಕೋ ಹಾಗೆ ಬೆಳೆಸೋಣ...."

"ಹೀಗೆಲ್ಲಾ ಮಾತಾಡ್ಬೇಡ ನಾಗೂ, ಅಪ್ಪಂಗೆ ನಮ್ಮಿಬ್ಬರನ್ನು ಕಂಡರೆ ಇಷ್ಟ. ಅದಕ್ಕೇ ನಮ್ಮ ಜತೇಲಿದಾರೆ. ಅವರಿಗೂ ವಯಸ್ಸಾಗಿದೆ. ಅವರನ್ನು ನಾವು ನೋಡಿಕೊಳ್ಳಬೇಕಾದುದು ನಮ್ಮ ಕರ್ತವ್ಯ. ನಾವೂ ಬೇರೆ ಹೊರಟು ಹೋದ್ರೆ, ಅವರು ಒಬ್ಬರೇ ಹೇಗಿರ್ತಾರೆ? ಈ ಯೋಚನೇನ ನಿನ್ನ ತಲೇಲಿ ತುಂಬಿದೋರು ಯಾರು? ನಿನ್ನ ಅತ್ತಿಗೇನೋ? ನನ್ನ ಅತ್ತಿಗೆಯರೋ?"

"ಯಾರೂ ಇಲ್ಲ. ನನಗೇ ಏನೇನೋ ಅನ್ನಿಸುತ್ತೆ. ಮುಂಚೆ ನನ್ನ ಮನಃಸ್ಥಿತಿ ಹೀಗಿರ್ಲಿಲ್ಲ. ಈಗ ಈ ಓಲೆ ಮೂಗುಬೊಟ್ಟು ವಜ್ರದ್ದು, ಅದೂ ಬೇರೆ ಯಾರದ್ದೋ ಅಂತ ತಿಳಿದಾಗ್ನಿಂದ ಹೀಗೆ ಅನ್ನಿಸ್ತಿದೆ..."

"ಹಾಗಾದ್ರೆ ಅಪ್ಪನ ಹತ್ರ ಮಾತನಾಡಿ, ಅವರಿಗೆ ವಾಪಸ್ಸು ಕೊಟ್ಟು ಬಿಡೋಣ. ಅವರು ಏನು ಬೇಕಾದ್ರೂ ಮಾಡ್ಕೊಳ್ಳಲಿ..."

"ಬೇಡ, ಯಾರಾದ್ರೂ ಜ್ಯೋತಿಷಿ ಹತ್ರ ಹೋಗಿ ಕೇಳೋಣ. ಏನೂ ತೊಂದರೆ ಇಲ್ಲ ಅಂತಂದ್ರೆ ಇಟ್ಟುಕೊಳ್ಳೋಣ. ಇಲ್ಲದಿದ್ರೆ ಕೊಟ್ಟುಬಿಡೋಣ...."

"ಸರಿ ನಿನ್ನಿಷ್ಟ" ಎಂದ. ಅವನ ಧ್ವನಿ ದಪ್ಪಗಾಗಿತ್ತು. ಗಂಡನಿಗೆ ಇಷ್ಟ ಇಲ್ಲ ಎನ್ನುವುದನ್ನು ಅರಿತಳು. ಆದರೆ ಜ್ಯೋತಿಷಿಗಳ ಬಳಿಗೆ ಹೋಗಲು ಆಗಲೇ ಇಲ್ಲ. ಒಂದು ದಿನ ಇದ್ದಕ್ಕಿದ್ದಂತೆ ತಂದೆ ಅಪಘಾತದಲ್ಲಿ ತೀರಿ ಹೋದರು. ಸ್ನೇಹಿತನ ಮನೆಗೆ ಊಟಕ್ಕೆ ಎಂದು ಹೋಗಿದ್ದವರು, ವಾಪಸ್ಸು ಬರುತ್ತಿರುವಾಗ, ಅಪಘಾತವಾಗಿತ್ತು. ನಾಗವೇಣಿಗೆ ಬಹಳ ವ್ಯಥೆಯಾಗಿತ್ತು. ಅವರ ಬಗ್ಗೆ ತನಗೆ ಕೆಟ್ಟ ಅಭಿಪ್ರಾಯಗಳು ಬಂದವೆಂದು ವ್ಯಸನಪಟ್ಟಳು.

ಈಗ ಎಲ್ಲರೂ ಅವರವರ ಪಾಡಿಗೆ ಅವರವರು. ತಂದೆಯನ್ನು ನೋಡಲೆಂದು ಆಗ ಈಗ ಬರುತ್ತಿದ್ದವರು ಈಗ ಅಪರೂಪವಾದರು. "ಅಪ್ಪ ಇದ್ದಾಗ ಎಷ್ಟು ಚೆನ್ನಾಗಿತ್ತು.... ಈಗ ಮನೆಯಲ್ಲಿ ಮಂಕು ಬಡಿದಂತಾಗಿದೆ...." ಶೇಷಾದ್ರಿ ಎಂದಿದ್ದ. ಅವಳಿಗೂ ಹಾಗೇ ಅನ್ನಿಸಿತ್ತು. ಅವರ ಅಕೌಂಟ್‌ನಲ್ಲಿದ್ದ ಹಣವನ್ನು ಗಂಡು ಮಕ್ಕಳೆಲ್ಲರೂ ಸಮನಾಗಿ ಹಂಚಿಕೊಂಡಿದ್ದರು. ಎಲ್ಲರೂ ಕೆಲವೇ ದಿನಗಳಲ್ಲಿ ಹಳೆಯದನ್ನು ಮರೆತು ತಮ್ಮ ತಮ್ಮ ಸಂಸಾರದಲ್ಲಿ ತಲ್ಲೀನರಾಗಿದ್ದರು. ಆದರೆ, ಶೇಷಾದ್ರಿಗೆ, ನಾಗವೇಣಿಗೆ ಅವರ ನೆನಪು ಆಗ ಈಗ ಬಾಧಿಸುತ್ತಿತ್ತು. ಅಪ್ಪ ಆಗಾಗ ಕನಸಿನಲ್ಲಿ ಬರುತ್ತಾರೆಂದು ಶೇಷಾದ್ರಿ ಹೆಂಡತಿಯೊಡನೆ ಹೇಳುತ್ತಿದ್ದ.... ಆ ದಿನಗಳಲ್ಲಿ ಓಲೆ ಹಾಗೂ ಮೂಗುಬೊಟ್ಟು ನೆನಪಿಗೆ ಬರುತ್ತಿತ್ತು.... ಆಗಾಗ್ಗೆ ಅದನ್ನು ತೆಗೆದು ನೋಡಿ, ಹಿಂದಿನದೆಲ್ಲವನ್ನೂ ನೆನೆಸಿಕೊಂಡು, ಮತ್ತೆ ಹಿಂದಕ್ಕೆ ತೆಗೆದಿಡುತ್ತಿದ್ದ. ಒಮ್ಮೊಮ್ಮೆ ನಾಗವೇಣಿ ತಮಾಷೆ ಮಾಡುತ್ತಿದ್ದಳು.

ನಿಮ್ಮಪ್ಪನ್ನ ಉಳಿದವರೆಲ್ಲ ಮರತೇ ಬಿಟ್ಟಿದ್ದಾರೆ. ನೀವು ಮಾತ್ರ ಆಗಾಗ್ಗೆ ನೆನೆಪಿಸಿ ಕೊಂಡು, ಈ ಒಡವೆಗಳನ್ನು ನೋಡ್ತಿರಿ...."

"ಏನ್ಮಾಡ್ಲೀ ನಾಗೂ, ಅಪ್ಪ ನನ್ನನ್ನು ಚೆನ್ನಾಗಿ ನೋಡ್ಕೊಂಡ್ರು.... ನಾನು ಅವರನ್ನು ಚೆನ್ನಾಗಿ ನೋಡ್ಕೊಳ್ಳಲಿಲ್ಲವೇನೋ ಅನ್ನುವ ಭಾದೆ ನನ್ನನ್ನು ಕಾಡುತ್ತೆ...."

"ಈ ಬಾರಿ ಗಂಡು ಮಗು ಹುಟ್ಟಿದರೆ, ನಿಮ್ಮ ತಂದೆಯ ಹೆಸರನ್ನೇ ಇಡೋಣ...ದಿನಾ ನೆನೆಸಿಕೊಳ್ಳಬಹುದು..."

"ಬೇಡ ನಾಗೂ... ಮಗನನ್ನು ಏನಾದ್ರೂ ನೆವದಲ್ಲಿ ಅಂದು, ಆಡಿ, ಶಿಕ್ಷೆ ಮಾಡಬೇಕಾಗುತ್ತೆ.... ಅಪ್ಪನ ಹೆಸರನ್ನಿಟ್ಟು ಅವರಿಗೆ ಅವಮಾನ ಮಾಡುವ ಇಷ್ಟ ನನಗಿಲ್ಲ... ಅದ್ಸರಿ ಏನು ವಿಷಯ....?" ಹೆಂಡತಿಯನ್ನೇ ಮೇಲಿನಿಂದ ಕೆಳಗೆ ನೋಡಿದ. ಅವಳು ನಾಚಿ ನುಡಿದಳು.

"ಈ ನಡುವೆ ನಿಮಗೆ ನನ್ನ ಮೇಲೆ ಗಮನವೇ ಇಲ್ಲ. ಕೆಲವೇ ತಿಂಗಳು ಗಳಲ್ಲಿ ನಾನು ಮತ್ತೊಮ್ಮೆ ತಾಯಿಯಾಗ್ತಿದೀನಿ...."

"ಹೌದಾ ನಾಗೂ... ನನಗೆ ಮಂಕು ಬಡಿದಂತಾಗಿದೆ.... ನಿಂಗೆ ಏನು ಬೇಕು ಅಂತ ಹೇಳು.... ನಿನ್ನ ಆಸೇನ ಪೂರೈಸ್ತೀನಿ...."

"ಈ ಸರಿ ಗಂಡು ಮಗು ಹುಟ್ಟಿದರೆ, ನಾನು ಆಪರೇಷನ್ ಮಾಡಿಸ್ಕೊಂಡು ಬಿಡ್ತೀನಿ. ನಮಗೆ ಎರಡು ಮಕ್ಕಳು ಸಾಕು...."

"ಅಪ್ಪಂಗೆ, ನಂಗೆ ನಾಲ್ಕು ಮಕ್ಕಳಾದ್ರೂ ಆಗಲಿ ಅನ್ನೋ ಆಸೆ ಇತ್ತು ನಾಗೂ...."

"ಅಪ್ಪಾ... ಅಪ್ಪಾ... ಸದಾ ಅಪ್ಪನ ಚಿಂತೆ.... ಇದು ನಮ್ಮ ಸ್ವಂತ ವಿಷಯ.... ಸಾಕಿ ಬೆಳೆಸೋರು ನಾವು.... ನಮಗೆ ಕಷ್ಟ ಆಗುಲ್ವಾ? ....ಅವರ ಹತ್ರ ಇದ್ದ ಹಣವನ್ನು ಸಹ ನಮಗೆ ಬಿಡಲಿಲ್ಲ. ಅವರುಗಳಿಗೇನು ಕಡಿಮೆ ಆಗಿತ್ತು? ....ಈ ಬೆಲೆ ಬಾಳುವ ವಜ್ರಗಳನ್ನು ಸುಮ್ಮನೇ ಮುಚ್ಚಿಟ್ಟಿರುವುದೇ ಆಗಿದೆ.... ಮಾರುವ ಹಾಗಿಲ್ಲ. ಹಾಕಿಕೊಳ್ಳುವ ಹಾಗಿಲ್ಲ... ಹೊಟ್ಟೆಗೆ ಹಿಟ್ಟಿಲ್ಲ, ಜುಟ್ಟಿಗೆ ಮಲ್ಲಿಗೆ ಹೂವು ಅನ್ನೋ ತರಹ ಕಾಣ್ಸುತ್ತೆ. ನಮಗೆ ಅಂತ ಬೇರೆ ಆಸ್ತಿ ಏನಿದೆ?"

"ಯಾಕೆ ಹೀಗೆ ಕೂಗಾಡ್ತೀಯಾ? ಕಾಲ ಬಂದಾಗ, ನಾವೂ ಸೈಟು ಮನೆ ಅಂತ ಮಾಡಿಕೊಳ್ಳೋಣ, ಚಿಂತೆ ಯಾಕೆ ಮಾಡ್ತೀಯ?"

"ಚಿಂತೆ ಆಗದೇ ಇರುತ್ತಾ? ಮನೆ ತುಂಬಾ ಮಕ್ಕಳು ಬೇಕು... ಸಾಕಿ ಸಲಹುವ ಯೋಗ್ಯತೆ ನಮಗಿಲ್ಲ..." ಅವಳು ಅತ್ತಳು. ಅವನು ಸಮಾಧಾನ ಮಾಡಿದ.

"ಸರಿ ನಿನ್ನ ಇಷ್ಟದಂತೆಯೇ ಆಗಲಿ. ಈ ಬಾರಿ ಹೆಣ್ಣು ಮಗು ಹುಟ್ಟಿದರೆ, ಆ ಮಗೂನ ಯಾರಿಗಾದ್ರೂ ಕೊಟ್ಟು ಬಿಡೋಣ... ಮಕ್ಕಳಿಲ್ಲದ ಶ್ರೀಮಂತರು ಚೆನ್ನಾಗಿ ನೋಡಿಕೊಳ್ತಾರೆ. ನಮ್ಮ ಮಗು ಚೆನ್ನಾಗಿ ಬೆಳೆಯುತ್ತೆ, ಸುಖವಾಗಿರುತ್ತೆ...."

"ನೋಡೋಣ..." ಎಂದಳು. ಅವಳಿಗೆ ಸಮಾಧಾನವಾಗಿರಲಿಲ್ಲ.... ಈ ಬಾರಿ ಅವಳಿಗೆ ಅವಳಿ ಮಕ್ಕಳು ಹುಟ್ಟಿದವು. ಒಂದು ಗಂಡು, ಒಂದು ಹೆಣ್ಣು. ಯಾರಿಗೂ ಈ ಮನೆಯಲ್ಲಿ ಅವಳಿ ಮಕ್ಕಳು ಹುಟ್ಟಿರಲಿಲ್ಲ. ತನಗೇ ಮೊದಲು, ಒಂದು ತರಹ ವಿಶೇಷ ಅಂತ ಅನ್ನಿಸಿದರೂ, ಎರಡೆರಡು ಮಕ್ಕಳನ್ನು ಒಟ್ಟಿಗೇ ಹೇಗೆ ಬೆಳೆಸುವುದು ಅಂತ ಚಿಂತೆಯಾಗಿತ್ತು. ಆದರೂ, ಹೆಣ್ಣು ಮಗುವನ್ನು ಯಾರಿಗಾದರೂ ಕೊಟ್ಟು ಬಿಡುವ ಮಾತನ್ನು ಗಂಡ ಆಡದಿರಲಿ ಎಂದು ಬಯಸಿ ದಳು. ಇನ್ನು ಮಕ್ಕಳು ಸಾಕು ಗಂಡನಿಗೆ ಹೇಳಿ ತಾನು ಆಪರೇಷನ್ ಮಾಡಿಸಿ ಕೊಂಡು ಬಿಡಬೇಕೆಂದುಕೊಂಡಳು.

ಎರಡು ಮಕ್ಕಳು ಒಟ್ಟಿಗೇ ಹುಟ್ಟಿದವು ಅಂತ ಶೇಷಾದ್ರಿ ಒಂದು ತರಹ ಸಂತಸಗೊಂಡಿದ್ದ. "ಇನ್ನೊಂದು ಮಗುವಾಗಲಿ ಬಿಡು ನಾಗೂ, ಆಮೇಲೆ ನಾನೇ ಆಪರೇಷನ್ ಮಾಡಿಸಿಕೊಂಡು ಬಿಡ್ತೀನಿ. ನಿಂಗ್ಯಾಕೆ ತೊಂದರೆ ಎಂದಿದ್ದ. ಆ ತಕ್ಷಣದಲ್ಲಿ ನಾಗು ಏನೂ ಮಾತಾಡಲಿಲ್ಲ. ಮಕ್ಕಳನ್ನು ಬೆಳೆಸುವುದು ಸುಲಭವಾಗಿರಲಿಲ್ಲ. ಅವರಿವರ ಸಹಕಾರದಿಂದ ದಿನನಿತ್ಯದ ಕೆಲಸಗಳು ನೆರವೇರುತ್ತಿದ್ದವು.

"ಗಂಡು ಮಗು ಹುಟ್ಟಿದೆ. ಅದ್ಧೂರಿಯಾಗಿ ನಾಮಕರಣ ಸಮಾರಂಭ ವನ್ನು ಮಾಡೋಣ" ಶೇಷಾದ್ರಿ ಸಂಭ್ರಮದಿಂದ ಹೇಳಿದ.

"ಅದೆಲ್ಲಾ ಏನೂ ಬೇಡ, ನಮಗೆ ಸಹಾಯಕರ್‍ಯಾರಿದಾರೆ? ಯಾವುದಾ ದರೂ ದೇವಸ್ಥಾನದಲ್ಲಿ ಪೂಜೆ ಮಾಡಿಸಿ, ಹೆಸರನ್ನಿಡೋಣ...." ಅವಳು ದನಿ ಎತ್ತಿದಳು. ಮಕ್ಕಳ ಲಾಲನೆ ಪಾಲನೆಯ ಕೆಲಸದಲ್ಲಿ, ಅವಳಿಗೆ ವಿಶ್ರಾಂತಿ ಯೂ ಇರುತ್ತಿರಲಿಲ್ಲ. ಮನೆಕೆಲಸವೂ ಜಾಸ್ತಿ ಆಗಿತ್ತು. ಆಗಾಗ್ಗೆ ಆರೋಗ್ಯದಲ್ಲಿ ಏರು ಪೇರು ಆಗಲಾರಂಭಿಸಿತು. ಮನೆ ಕೆಲಸಕ್ಕೆ ಸಹಾಯಕಳಾಗಿರಲಿ ಎಂದು, ಅತ್ತಿಗೆಯ ದೂರದ ಸಂಬಂಧಿ ಒಬ್ಬಳನ್ನು ಕರೆ ತಂದು ಇಟ್ಟುಕೊಂಡರು.

ಅವಳಿಗೆ ಮದುವೆಯಾಗಿತ್ತು. ಆದರೆ ಗಂಡ ಬಿಟ್ಟು ಬಿಟ್ಟಿದ್ದ. ಮಕ್ಕಳಿರಲಿಲ್ಲ. ಕಟ್ಟು ಮಸ್ತಾಗಿದ್ದ ಅವಳು ಮನೆಯ ಕೆಲಸಗಳನ್ನು ನಿರಾಯಾಸವಾಗಿ ಮಾಡುತ್ತಿದ್ದಳು. ನಾಗವೇಣಿಯ ಆರೋಗ್ಯವೂ ತಕ್ಕ ಮಟ್ಟಿಗೆ ಸುಧಾರಿಸಿತು. ಮಕ್ಕಳೂ ಚೆನ್ನಾಗಿ ಬೆಳೆದವು. ಹೆಣ್ಣು ಮಗುವಿಗೆ ದೀಕ್ಷಾ ಎಂತಲೂ, ಗಂಡು ಮಗುವಿಗೆ ಸಮರ್ಥ ಎಂತಲೂ ಹೆಸರನ್ನಿಟ್ಟರು.

ಒಂದು ದಿನ ನಾಗವೇಣಿಗೆ, ಮನೆ ಕೆಲಸಕ್ಕೆ ಸಹಾಯಕಳಾಗಿ ಬಂದು ಸೇರಿಕೊಂಡಿದ್ದ, ಮಂಜುಳಳ ಮೇಲೆ ಅನುಮಾನ ಬಂದಿತು. ಅವಳು ಗರ್ಭಿಣಿ ಯಾಗಿರುವಳೆಂದು ಖಚಿತವಾಗಿತ್ತು.... ಅವಳಿಗೆ ತಕ್ಷಣಕ್ಕೆ ಅನುಮಾನ ಬಂದುದು ಗಂಡ ಶೇಷಾದ್ರಿಯ ಮೇಲೇನೇ... ಮುನಿಸಿಕೊಂಡು ಕೆಟ್ಟ ಮುಖ ಹಾಕಿಕೊಂಡು ಕುಳಿತಿದ್ದ ಹೆಂಡತಿಯನ್ನು ರಮಿಸಲು ಬಂದವನ ಮೇಲೆ ಹರಿಹಾಯ್ದಳು. "ನಿಮಗೆ ನಾಚಿಕೆ ಆಗುಲ್ವಾ? ನಿಮಗೆ ಮೂರು ಮಕ್ಕಳನ್ನು ಹೆತ್ತು ಕೊಟ್ಟಿದ್ದೀನಿ. ಅಷ್ಟಾದರೂ ನಿಮ್ಮ ಆಸೆ ತೀರಿಲ್ವಾ? ಮಂಜುಳನ ಜತೇಲಿ... ಚಕ್ಕಂದ ಛೀ...."

ಶೇಷಾದ್ರಿ ಅವಳ ಭುಜವನ್ನು ಹಿಡಿದು ಬಲವಾಗಿ ಅಲುಗಾಡಿಸಿದ. "ಛೀ.... ಎಂಥಾ ಕೀಳು ಆಲೋಚನೆ ನಿನ್ನದು. ನಾನು ಅಷ್ಟು ಕೆಳಮಟ್ಟಕ್ಕೆ ಇಳೀತೀನಿ ಅಂತ ನಿಂಗೆ ಹೇಗಾದ್ರೂ ಅನ್ನಿಸ್ತು?"

"ಮಂಜುಳಾ ಗರ್ಭಿಣಿ ಕಣ್ರೀ... ಅವಳು ಗಂಡ ಇಲ್ಲದೋಳು... ನನಗೆ ನಿಮ್ಮ ಮೇಲೇ ಅನುಮಾನ" ಗಂಡನ ಮೇಲೆ ಹರಿಹಾಯ್ದಳು.

"ಮಕ್ಕಳ ಮೇಲೆ ಆಣೆ ಮಾಡಿ ಹೇಳ್ತೀನಿ. ನಾನು ನಿನ್ನ ಹೊರತು ಬೇರೆ ಯಾರ ಸಹವಾಸವನ್ನೂ ಮಾಡಿಲ್ಲ.... ನಿಂಗೆ ಯಾಕೆ ಇಂಥಾ ಅನುಮಾನ ಬಂತು?"

"ನನ್ನ ಆರೋಗ್ಯ ಸರಿಯಾಗಿಲ್ಲಿಲ್ಲ. ಮಕ್ಕಳ ಲಾಲನೆ ಪಾಲನೇಲಿ ನಿಮ್ಮನ್ನು ಮರೆತೇ ಬಿಟ್ಟಿದ್ದೆ.... ಕಟ್ಟು ಮಸ್ತಾಗಿದ್ದ ಅವಳು ನಿಮ್ಮ ಕಣ್ಣೆದುರಿಗೆ ಓಡಾಡ್ತಾ ಇರ್ತಾಳೆ. ನಂಗೆ ಅನುಮಾನ ಬರದೇ ಇರುತ್ತಾ? ...ಅವಳು ಹೇಗೆ ಬಸಿರಿ ಯಾದ್ಲು? ಯಾರ ಸಹವಾಸ ಮಾಡಿದ್ಲು?"

"ನಂಗೇನು ಗೊತ್ತು? ಅವಳನ್ನೇ ಕರೆದು ಕೇಳು...."

"ತಡೀರಿ ಈಗಲೇ ಕೇಳ್ತೀನಿ..." ಎಂದು ಹೇಳಿ ಅಡಿಗೆ ಮನೆಯ ಬಳಿಗೆ ಬಂದಳು. ಮಂಜುಳಾ ಅಳುತ್ತಾ ನಿಂತಿದ್ದಳು. ಅವಳು ಇವರಿಬ್ಬರ ಮಾತುಕತೆ ಗಳನ್ನು ಕೇಳಿಸಿಕೊಂಡಿದ್ದಳು.

"ಮಾಡೋದು ಹೀನ ಕೆಲಸ? ಈಗ್ಯಾಕೆ ಅಳ್ತಿದೀಯ?" ರೇಗಿದಳು.

"ಕ್ಷಮಿಸಿ ಅಕ್ಕಾ... ನಾನು ಇಲ್ಲಿಂದ ಹೊರಟು ಹೋಗ್ತೀನಿ... ದಯ ವಿಟ್ಟು ಅಣ್ಣನ್ನ ಏನೂ ಅನ್ಬೇಡಿ..."

"ನನ್ನ ಗಂಡನ್ನ ನಾನು ಏನು ಬೇಕಾದ್ರೂ ಅಂತೀನಿ... ನಮ್ಮಿಬ್ಬರ ಮಾತು ಗಳನ್ನು ಕದ್ದು ಕೇಳಿಸ್ಕೊಂಡಿದೀಯಲ್ಲ, ನಾಚ್ಕೆ ಆಗುಲ್ವಾ? ....ನಿಜ ಹೇಳು... ನಿನ್ನ ಹೊಟ್ಟೇಲಿರುವ ಮಗು ಯಾರದ್ದು?"

"ಹೇಳಿ ಮಂಜುಳಾ... ಈ ಅನುಮಾನ ಕಳೆಯಲಿ?" ನಾಗವೇಣಿಯ ಹಿಂದೆ ಬಂದು ನಿಂತ ಶೇಷಾದ್ರಿ ಹೇಳಿದ.

"ನನ್ನ ಮೈದುನ.... ನನ್ನನ್ನು ಕೆಡಿಸಿ ಬಿಟ್ಟ...." ಮಂಜುಳಾ ಬಿಕ್ಕಿದಳು.

ಗಂಡ ಹೆಂಡತಿ ಪರಸ್ಪರ ಮುಖವನ್ನು ನೋಡಿಕೊಂಡರು. ಒಬ್ಬ ಮೈದುನ ಹೀಗೆ ಮಾಡುಕ್ಕೆ ಸಾಧ್ಯಾನಾ? ...ಅತ್ತಿಗೆ ತಾಯಿ ಸಮಾನ ಅಂತ ಅಂತಾರೆ..."

"ಹೋಗ್ಲಿ ಬಿಡು ನಾಗೂ... ಅವರನ್ನು ಏನೂ ಅನ್ಬೇಡ. ಇದರಲ್ಲಿ ಇವರ ತಪ್ಪು ಏನಿದೆ? ತಪ್ಪೆಲ್ಲಾ ಅವನದ್ದು, ಇವರನ್ನು ಕೆಡಿಸಿದವನದ್ದು...."

"ಇಂಥಾವರನ್ನು ನಮ್ಮ ಮನೇಲಿ ಹೇಗೆ ಇಟ್ಕೊಳ್ಳೋದು? ...ಜನ ಆಡ್ಕೊಂಡು ನಗುಲ್ವಾ? ....ವಾಪಸ್ಸು ಅತ್ತೆ ಮನೆಗೇ ಹೋಗಲಿ..."

"ಅತ್ತೆ ಮನೆಯವರು ಇವರನ್ನು ಮನೆಗೆ ಸೇರಿಸ್ತಾರಾ? ...ಇವರ ಮಾತನ್ನು ನಂಬ್ತಾರಾ? ....ನನ್ನ ಮೇಲೇ ಅನುಮಾನ ಬರುತ್ತೆ... ಇವರನ್ನು ಎಲ್ಲಿಗೂ ಕಳಿಸೋದು ಬೇಡ... ಇವರು ಇಲ್ಲೇ ಇರಲಿ. ನಿನ್ನ ಅತ್ತಿಗೆಯ ಹತ್ತಿರ ಮಾತಾಡು...."

"ಬೇಡ ಅಕ್ಕಾ... ನಾನು ಎಲ್ಲಿಗಾದ್ರೂ ಹೊರಟು ಹೋಗ್ತೀನಿ...."

"ನೀವು ಎಲ್ಲಿಗೂ ಹೋಗ್ಬೇಡಿ... ಒಂಟಿಯಾಗಿ ಎಲ್ಲಿರ್ತೀರಿ?"

"ಹೋಗ್ಲಿ ಬಿಡ್ರೀ... ನಿಮಗ್ಯಾಕೆ ಈಕೆಯ ಜವಾಬ್ದಾರಿ?" ನಾಗವೇಣಿ ಎಂದಳು.

"ಜವಾಬ್ದಾರಿಯ ಪ್ರಶ್ನೆ ಅಲ್ಲ ನಾಗು ಅಪವಾದದ ಪ್ರಶ್ನೆ.... ಈ ಸಮಯ ದಲ್ಲಿ ಮನೆಯಿಂದಾಚೆ ಕಳಿಸಿದರೆ ಜನ ತಲೆಗೊಂದು ಮಾತಾಡ್ತಾರೆ.... ನಮ್ಮ ಮಕ್ಕಳು ದೊಡ್ಡವರಾಗುವವರೆಗೂ ಅವರು ಇಲ್ಲಿಯೇ ಇರಲಿ.... ಇವರಿಗೆ ಹುಟ್ಟುವ ಮಗುವನ್ನು ನಾವೇ ಸಾಕಿ ಬೆಳೆಸೋಣ..."

ಮಂಜುಳ ಅವನಿಗೆ ಕೃತಜ್ಞತೆಯಿಂದ ಕೈ ಮುಗಿದಳು. ನಾಗವೇಣಿ ಅಸಹನೆಯಿಂದ ಮುಖವನ್ನು ತಿರುಗಿಸಿದಳು... ಗಂಡ ಯಾಕೆ ಇವಳ ಪರವಾಗಿ ಮಾತನ್ನಾಡುತ್ತಿದ್ದಾನೆ? ...ಗುಟ್ಟು ಗುಟ್ಟಾಗಿ ಇವಳ ಸಹವಾಸ ಮಾಡಿರಬಹುದೇ? ....ಈ ಅನುಮಾನ ಅವಳನ್ನು ಪ್ರಬಲವಾಗಿ ಕಾಡಿತು... ಆದರೆ ಏನನ್ನೂ ಆಡಲಾಗಿರಲಿಲ್ಲ. ಆದರೆ ಗಂಡನಿಗೆ ತಿಳಿಯದಂತೆ, ಅವನ ಚಲನಚಲನಗಳ ಮೇಲೆ ಗಮನವನ್ನಿಟ್ಟಿದ್ದಳು.

* * *

ಮಂಜುಳ, ದಿನ ತುಂಬಿದ ಮೇಲೆ, ಗಂಡು ಮಗುವಿಗೆ ಜನ್ಮವಿತ್ತಳು. ಮಗು ಮುದ್ದಾಗಿತ್ತು. ಆದರೂ ಮಂಜುಳಳಿಗೆ ಸಂತೋಷವಾಗಿರಲಿಲ್ಲ. ತನಗೆ ಗಂಡನಿಲ್ಲ. ಮಗುವಿನ ತಂದೆ ಯಾರೆಂದು ಹೇಳಿಕೊಳ್ಳಲು ಸಾಧ್ಯವಿಲ್ಲ. ಮುಂದೆ ಈ ಮಗುವಿನ ಗತಿಯೇನು? ಬೆಳೆಸುವುದು ಹೇಗೆ? ....ಈ ಚಿಂತೆ ಕಾಡಿತ್ತು.

ನಾಗವೇಣಿಯ ಅತ್ತಿಗೆ, ಮಂಜುಳಳ ಮೈದುನನೊಡನೆ ಗುಟ್ಟಾಗಿ

ಮಾತನಾಡಿದಳು. "ನಿನ್ನ ಅತ್ತಿಗೆಗೆ ಮಗುವಾಗಿದೆ. ಆ ಮಗು ನಿಮ್ಮದೇ ಎಂದು ತಿಳಿಸಿದಾಳೆ. ಆ ಮಗುವನ್ನು ನೀವೇ ಸಾಕಬೇಕು... ಇಲ್ಲದಿದ್ದರೆ ಸಾಕಷ್ಟು ಹಣವನ್ನು ಕೊಡಬೇಕು. ಇಲ್ಲದಿದ್ದರೆ, ನಾನು ಕಾನೂನಿನ ಸಹಾಯವನ್ನು ತೆಗೆದುಕೊಂಡು ಮಂಜುಳಂಗೆ ನ್ಯಾಯ ದೊರಕಿಸಿ ಕೊಡ್ತೀನಿ. ಆಗ ನಿಮ್ಮ ಮರ್ಯಾದೆಯೂ ಹೋಗುತ್ತದೆ" ಎಂದು ಹೆದರಿಸಿದಳು.

ಮೊದಲಿಗೆ ಅವನು ಹೆದರಲಿಲ್ಲ. "ಆ ಮಗು ನನ್ನದೇ ಅಂತ ಹೇಗೆ ಹೇಳ್ತೀರಿ? ಮಂಜುಳ ನನ್ನ ಅತ್ತಿಗೆ... ಅವರು ನಿಮಗೆ ಸುಳ್ಳು ಹೇಳಿರಬಹುದು... ಆ ಮನೇಲಿದಾರಲ್ಲ, ಆ ಯಜಮಾನನೊಡನೆ ಸಂಬಂಧ ಇಟ್ಟುಕೊಂಡು ಮಗುವಾಗಿ ದ್ದರೆ... ನಾನ್ಯಾಕೆ ದುಡ್ಡು ಕೊಡ್ಬೇಕು? ನನಗೂ ಅವರಿಗೂ ಸಂಬಂಧವಿಲ್ಲ" ಎಂದಿದ್ದ.

"ಎಲ್ಲವನ್ನೂ ನಾನು ಪ್ರೂವ್ ಮಾಡ್ತೀನಿ... ಈ ಮನೆಯಲ್ಲಿ ಇದ್ದಾಗಲೇ ಅವರು ಗರ್ಭಿಣಿಯಾಗಿದ್ದರು ಎನ್ನುವುದಕ್ಕೆ ನನ್ನ ಹತ್ತಿರ ಸಾಕ್ಷಿಗಳಿವೆ" ಎಂದಳು. "ನೀವು ಅವರ ಭಾಗದ ಆಸ್ತಿಯನ್ನು ಕೊಟ್ಟರೆ, ನಾವು ಯಾವ ಗಲಾಟೆಯನ್ನೂ ಮಾಡುವುದಿಲ್ಲ. ನಿಮ್ಮ ಹೆಂಡತಿಗೆ, ಅವರ ಮನೆಯವರಿಗೆ ಈ ವಿಷಯ ತಿಳಿಯ ಬಾರದು ಅಂತಿದ್ದರೆ, ನಿಮ್ಮ ಅತ್ತಿಗೆಗೆ, ಅವರ ಮಗುವಿಗೆ ನ್ಯಾಯವಾಗಿ ಏನು ಸಲ್ಲಬೇಕೋ ಅದನ್ನು ಕೊಟ್ಟುಬಿಡಿ, ಇಲ್ಲದಿದ್ದರೆ ಪರಿಣಾಮ ನೆಟ್ಟಗಿರು ವುದಿಲ್ಲ..." ಮತ್ತೆ ಹೆದರಿಸಿದಳು.

ಕೆಲವು ತಿಂಗಳುಗಳ ನಂತರ, ಅವನು ತನ್ನ ಅತ್ತಿಗೆಯನ್ನು ಭೇಟಿಯಾಗಿ, ಕ್ಷಮಾಪಣೆಯನ್ನು ಕೇಳಿ, ಅವಳಿಗೆ ಐದು ಲಕ್ಷ ರೂಗಳನ್ನು ಕೊಟ್ಟು ಕೈಮುಗಿದಿದ್ದ.

"ನನ್ನ ಮರ್ಯಾದೆಯನ್ನು ಬೀದಿಗೆ ಎಳೆಯಬೇಡಿ ಅತ್ತಿಗೆ... ನನ್ನದು ತಪ್ಪಾಗಿದೆ... ನನ್ನ ಕೈ ಮೀರಿ, ಈ ಹಣವನ್ನು ನನ್ನ ಮಗುವಿಗಾಗಿ ಕೊಡು ತ್ತಿದ್ದೇನೆ..." ಎಂದಿದ್ದ. ಮಂಜುಳ ಮುಖವನ್ನು ಅತ್ತ ತಿರುಗಿಸಿದ್ದಳು.

ಆ ಹಣವನ್ನು ಮಂಜುಳ ಶೇಷಾದ್ರಿಯ ಕೈಗಿತ್ತಳು. "ನನ್ನನ್ನು ನಿಮ್ಮ ತಂಗಿ ಅಂತ ಭಾವಿಸಿ. ನನ್ನ ಮಗುವನ್ನು ನಿಮ್ಮ ಮಗು ಎಂದೇ ಬೆಳೆಸಿ..." ಎಂದಳು. ಶೇಷಾದ್ರಿ ನಾಗವೇಣಿಯ ಬಳಿ ಮಾತನಾಡಿ, ಅವಳ ಅಭಿಪ್ರಾಯ ವನ್ನು ಕೇಳಿದ. ಮೊದಲಿಗೆ ಅವಳು ನಿರಾಕರಿಸಿದ್ದಳು.

"ನಮಗೆ ಈ ಜವಾಬ್ದಾರಿ ಬೇಡ. ಮುಂದೆ, ಅವಳ ಮೈದುನ ಬಂದು ಗಲಾಟೆ ಮಾಡಿದರೆ, ಎಲ್ಲಿಯ ಗ್ರಹಚಾರ?" ಎಂದು ಅನುಮಾನವನ್ನು ವ್ಯಕ್ತಪಡಿಸಿದಳು.

"ಆಗ ನೋಡಿಕೊಳ್ಳೋಣ.... ಈಗ ಈ ಮಗುವಿಗೆ ಸರಿಯಾದ ಪೋಷಣೆ, ಶಿಕ್ಷಣದ ಅಗತ್ಯವಿದೆ. ನಮ್ಮ ಕೈಲಾದದ್ದನ್ನು ಮಾಡೋಣ... ನಮ್ಮ ಮಕ್ಕಳಂತೆಯೇ

ಬೆಳೆಸೋಣ... ಆಕೆಗೂ ಅನುಕೂಲವಾಗುತ್ತದೆ" ಎಂದು ಹೇಳಿ ಒಪ್ಪಿಸಿದ್ದ. ನಾಗು ಹೆಚ್ಚು ವಾದಿಸದೇ ಒಪ್ಪಿಕೊಂಡಳು.

ನಾಗವೇಣಿ ಮತ್ತೆ ಗರ್ಭಿಣಿಯಾದಾಗ, ಅವಳ ನಿಶ್ಶಕ್ತಿ ಹೆಚ್ಚಿತು. ಬಳಲಿಕೆ ಆಯಾಸದಿಂದ ಅವಳ ಆರೋಗ್ಯದಲ್ಲಿ ಏರು ಪೇರಾಯಿತು. ಡಾಕ್ಟರರ ಸಲಹೆ ಯಂತೆ ಔಷಧೋಪಚಾರಗಳು ನಡೆದರೂ, ಅವಳು ಮೊದಲಿನಂತಾಗಲಿಲ್ಲ. ಮಂಜುಳ ಅವಳನ್ನು, ಮಕ್ಕಳನ್ನೂ ಚೆನ್ನಾಗಿ ನೋಡಿಕೊಂಡರೂ, ಅವಳಿಗೆ ಸಮಾಧಾನವಿರಲಿಲ್ಲ. ಕೆಲವೊಮ್ಮೆ ಅಸಹನೆಯಿಂದ ಏನೇನೋ ಮಾತನ್ನಾಡಿ ಬಿಡುವಳು. ಕೆಲವೊಮ್ಮೆ ಮಂಜುಳನನ್ನು ತನ್ನ ಬಳಿ ಕೂರಿಸಿಕೊಂಡು ಹೇಳುತ್ತಿದ್ದಳು.

"ನಂಗೇನಾಗಿ ಬಿಡುತ್ತೋ ಅನ್ನುವ ದಿಗಿಲು ನನ್ನನ್ನು ಕಾಡುತ್ತೆ ಮಂಜುಳಾ. ಹಾಗೇನಾದರೂ ಆಗಿ ಹೋದರೆ, ನನ್ನ ಮಕ್ಕಳನ್ನು, ನನ್ನ ಗಂಡನನ್ನೂ ನೀವು ಚೆನ್ನಾಗಿ ನೋಡ್ಕೋಬೇಕು..." ಎಂದು ಕೇಳಿಕೊಳ್ಳುತ್ತಿದ್ದಳು.

"ಹಾಗೆಲ್ಲಾ ಏನೂ ಆಗುಲ್ಲ ಬಿಡಿ ಅಕ್ಕಾ... ನಿಮ್ಮ ಮಕ್ಕಳನ್ನು ನೀವೇ ಸಾಕಿ ಬೆಳೆಸ್ತೀರಂತೆ ನೋಡ್ತಿರಿ..." ಎಂದು ಸಮಾಧಾನವನ್ನು ಹೇಳುತ್ತಿದ್ದಳು. ಆದರೆ ಹಾಗಾಗಲಿಲ್ಲ. ಹೆರಿಗೆಯ ಸಮಯದಲ್ಲಿ ಮಗುವೂ ಉಳಿಯಲಿಲ್ಲ, ತೊಂದರೆಯಿಂದ ನಾಗವೇಣಿಯೂ ಉಳಿಯಲಿಲ್ಲ. ಶೇಷಾದ್ರಿಗೆ ಆಘಾತ ವಾಗಿತ್ತು.

ಎಲ್ಲವೂ ಮುಗಿದು ಅನೇಕ ದಿನಗಳು ಕಳೆದರೂ, ಮನೆಯ ವಾತಾವರಣ ಸರಿ ಹೋಗಿರಲಿಲ್ಲ. ಎಲ್ಲಾ ಜವಾಬ್ದಾರಿಯನ್ನೂ ಮಂಜುಳಾ ವಹಿಸಿಕೊಂಡಿ ದ್ದಳು. ಮೊದ ಮೊದಲಿಗೆ ಉಳಿದವರು ಸುಮ್ಮನಿದ್ದರೂ, ಕ್ರಮೇಣ ಹಿಂದೆ ಹಿಂದೆ ಆಡಿಕೊಳ್ಳತೊಡಗಿದರು. ಎಲ್ಲರ ಬಾಯಿಯನ್ನು ಮುಚ್ಚಿಸಲು, ಶೇಷಾದ್ರಿ ಮಂಜುಳನನ್ನು ಮದುವೆಯಾದ. ಮಂಜುಳ ಮಕ್ಕಳಿಗೆ ಸಾಕು ತಾಯಿ ಯಾದಳು. ಆದರೆ ಅಮ್ಮನಾಗಲಿಲ್ಲ.

ವರ್ಷಗಳು ಉರುಳಿಹೋದವು. ಮಕ್ಕಳು ಬೆಳೆದರು. ವಿದ್ಯಾವಂತರಾದರು. ಶೇಷಾದ್ರಿ ಈಗ ಅನುಕೂಲಕರ ಸ್ಥಿತಿಯಲ್ಲಿದ್ದ. ಹೆಣ್ಣು ಮಕ್ಕಳು ಅವರವರ ಗಂಡಂದಿರ ಜೊತೆ ಚೆನ್ನಾಗಿ ಸಂಸಾರ ಮಾಡಿಕೊಂಡಿರುವುದನ್ನು ಕಂಡು ಶೇಷಾದ್ರಿ ನೆಮ್ಮದಿಗೊಂಡ. ನಾಗವೇಣಿಗೆ ಇವುಗಳನ್ನು ನೋಡಿ ಆನಂದಿಸುವ ಭಾಗ್ಯವಿಲ್ಲ ದಾಯಿತಲ್ಲ ಎಂದು ವ್ಯಥೆಗೊಂಡ.

ಮಗ ಸಮರ್ಥ, ಇಂಜನಿಯರಿಂಗ್ ಪದವಿಯನ್ನು ಪಡೆದು, ಸಿಂಗಪೂರ ದಲ್ಲಿ ಕೆಲಸ ಸಿಕ್ಕಿತೆಂದು ಹೊರಟು ಹೋದ. ಈಗ ಮನೆಯಲ್ಲಿ ಇವರೇ ಮೂವರು... ಶೇಷಾದ್ರಿ, ಮಂಜುಳ ಹಾಗೂ, ಅವಳ ಮಗ ಪ್ರಮೋದ.

ಅವನು ಶೇಷಾದ್ರಿಗೆ ಅಚ್ಚು ಮೆಚ್ಚಿನ ಮಗನಾದ. ಸಮರ್ಥ ತನ್ನ ಸಹೋದ್ಯೋಗಿ ಶುಭಾಳನ್ನು ಪ್ರೀತಿಸುತ್ತಿರು ವುದಾಗಿಯೂ ಅವಳನ್ನೇ ಮದುವೆಯಾಗುವುದಾಗಿ ಘೋಷಿಸಿದಾಗ ಶೇಷಾದ್ರಿ, ಮೊದಲು ಸಮಾಧಾನಕರವಾಗಿ ತಿಳುವಳಿಕೆಯನ್ನು ಹೇಳಿದ. ಮಂಜುಳಾ ಸಹ ಬುದ್ಧಿವಾದವನ್ನು ಹೇಳಿದಳು. "ಇಲ್ಲೇ ನಮ್ಮೊಂದಿಗೆ ಇರು ಕಂದಾ... ನಮಗೆ ನೀವಿಬ್ಬರೂ ಮುಖ್ಯ... ನಿನ್ನ ತಂದೆಗೆ ಬಹಳ ಬೇಸರವಾಗುತ್ತದೆ" ಎಂದಳು.

"ಯಾಕೆ? ಪ್ರಮೋದ ಇದಾನಲ್ಲ... ನನ್ನ ಪಾಡಿಗೆ ನನ್ನನ್ನು ಇರಲು ಬಿಡಿ.... ನಾನು ಲಕ್ಷಾಂತರ ರೂಪಾಯಿಗಳನ್ನು ಸಂಪಾದಿಸುತ್ತಿದೀನಿ. ನಿಮ್ಮೆಲ್ಲರನ್ನೂ ಸಾಕುವ ಶಕ್ತಿ ಈಗ ನನಗಿದೆ. ಇಲ್ಲಿಯೇ ಇದ್ದರೆ ಏನು ಸಿಗುತ್ತೆ? ಇವನಂತೆಯೇ ಎಷ್ಟೋ ಅಷ್ಟರಲ್ಲಿರಬೇಕಾಗುತ್ತೆ. ಅದು ನನಗೆ ಇಷ್ಟವಿಲ್ಲ..." ಎಂದಿದ್ದ.

"ಸರಿ ನಿನ್ನಿಷ್ಟ. ಹೋಗಲಿ, ನಮಗೆ ಇಷ್ಟವಾಗುವಂಥ ಹುಡುಗಿಯನ್ನು ನೋಡಿ, ಮನೆ ತುಂಬಿಸಿಕೊಳ್ಳುವ ಅವಕಾಶವನ್ನಾದರೂ ಕೊಡು. ಅವಳಿ ಗಾಗಲೇ ಮದುವೆಯಾಗಿದ್ದು ಡೈವೋರ್ಸ್ ತಗೊಂಡಿರುವವಳು. ಅಲ್ಲದೇ ಅವಳಿಗೆ ಒಂದು ಮಗು ಸಹ ಇದೆ. ಅವಳೇ ಆಗಬೇಕು ಅಂತ ಹಠ ಯಾಕೆ?" ಮಗನನ್ನು ಕೇಳಿದ್ದ.

"ನನ್ನ ಆಸೆಗೆ ಅಡ್ಡ ಯಾಕೆ ಬರ್ತೀರಿ ಡ್ಯಾಡೀ... ನನಗೆ ಶುಭ ಇಷ್ಟ... ಇನ್ನು ಮುಂದೆ ಅವಳ ಮಗುವಿಗೆ ನಾನೇ ತಂದೆ. ನೀವು ಒಪ್ಪಿದರೂ ಸರಿ, ಒಪ್ಪದಿದ್ದರೂ ಸರಿ. ನಾನು ಅವಳನ್ನೇ ಮದುವೆಯಾಗುವವನು. ನೀವು ಅವಳನ್ನು ಸೊಸೆ ಅಂತ ಒಪ್ಪಿಕೊಳ್ಳದಿದ್ದರೆ ನನಗೆ ಯಾವ ಚಿಂತೆಯೂ ಇಲ್ಲ" ಎಂದುಬಿಟ್ಟ.

ಅವನು ತನ್ನ ನಿರ್ಧಾರವನ್ನು ಬದಲಾಯಿಸುವುದಿಲ್ಲವೆಂದು ತಿಳಿದು ಇಬ್ಬರೂ ಮತ್ತೆ ಆ ಬಗ್ಗೆ ಚರ್ಚಿಸಲಿಲ್ಲ. ಸಮರ್ಥ, ಶುಭಳ ವಿವಾಹ ನೆರವೇರಿತು. ಇಬ್ಬರೂ ವಾಪಸ್ಸು ಸಿಂಗಾಪೂರಕ್ಕೆ ಹೊರಟು ಹೋದರು.

"ಎಂಥಾ ಕೆಲಸ ಮಾಡಿ ಬಿಟ್ಟ ನನ್ನ ಮಗ... ನನ್ನ ತಂದೆಯ ಹಾಗೂ ನಾಗವೇಣಿಯ ಆತ್ಮಗಳಿಗೆ ಎಷ್ಟು ಧಕ್ಕೆಯುಂಟಾಗಿದೆಯೋ" ಅಂತ ನೊಂದು ಕೊಂಡ.

"ಸಮಾಧಾನ ಮಾಡ್ಕೊಳ್ಳಿ.... ಮಕ್ಕಳ ಸುಖದಲ್ಲೇ ನಮ್ಮ ಸುಖ ಇದೆ ಎಂದು ಭಾವಿಸೋಣ..." ಎಂದು ಸಾಂತ್ವನವನ್ನು ಹೇಳಿದಳು ಮಂಜುಳಾ.

"ನನ್ನ ಹತ್ತಿರ ನನ್ನ ತಂದೆ ನಾಗವೇಣಿಗೆ ಕೊಟ್ಟ ವಜ್ರದ ಓಲೆಗಳು ಹಾಗೂ ಮೂಗುಬೊಟ್ಟು ಇವೆ ಅಂತ ಹೇಳಿದ್ನಲ್ಲ, ನ್ಯಾಯವಾಗಿ ಅದು ಸಮರ್ಥನ ಪತ್ನಿಗೆ ಸೇರಬೇಕು. ಮಗನೇ ನನ್ನ ಮಾತನ್ನು ಕೇಳಲಿಲ್ಲ. ಇನ್ನು

ಆ ಹುಡುಗಿ ಕೇಳುತ್ತಾಳೆಂದು ಹೇಗೆ ನಂಬೋದು? ಅದಕ್ಕೇ ಅದರ ಸುದ್ದಿಯನ್ನೇ ಎತ್ತಲಿಲ್ಲ. ಇನ್ನು ಮುಂದೆ ಅದನ್ನು ನೀವೇ ಹಾಕಿಕೊಳ್ಳಿ..." ಎಂದು ಅವಳ ಕೈಗೆ ಕೊಡಲು ಹೋದ. ಅವಳು ತೆಗೆದುಕೊಳ್ಳಲಿಲ್ಲ.

"ಬೇಡ... ಬೇಡ... ಇವುಗಳ ಮೇಲೆ ನನಗೆ ಯಾವ ಅಧಿಕಾರವೂ ಇಲ್ಲ... ಒಂದಲ್ಲ ಒಂದು ದಿನ ಸಮರ್ಥ ಮತ್ತೆ ನಿಮ್ಮ ಬಳಿಗೆ ಬರುತ್ತಾನೆ.... ಆಗ ಅವನ ಹೆಂಡತಿಗೇ ಕೊಡೋರಂತೆ...."

"ಇಲ್ಲ ಮಂಜುಳಾ... ಅವನ ಪತ್ನಿಗೆ ಕೊಡುವ ಮನಸ್ಸು ನನಗಿಲ್ಲ.... ನಿಮಗೆ ಹಾಕಿಕೊಳ್ಳಲು ಇಷ್ಟವಿಲ್ಲದಿದ್ದರೆ ನಾನು ಬಲವಂತ ಮಾಡುವುದಿಲ್ಲ... ಆದರೆ ಇದನ್ನು ಪ್ರಮೋದನ ಪತ್ನಿಗೆ ಕೊಟ್ಟು ಬಿಡ್ತೀನಿ.... ಅದನ್ನು ತಡೆಯಬೇಡಿ..." ಎಂದ.

'ಬೇಡ' ಎಂದು ಹೇಳಲು ಹೊರಟವಳು ಹೇಳಲಾಗದೇ ಸುಮ್ಮನಾಗಿದ್ದಳು. ತನಗೇ ಅದನ್ನು ಧರಿಸುವ ಅಧಿಕಾರ ಇಲ್ಲದಿದ್ದ ಮೇಲೆ, ತನ್ನ ಮಗನ ಹೆಂಡತಿಗೆ ಎಲ್ಲಿಂದ ಬರುತ್ತದೆ? ನಿಧಾನವಾಗಿ ಒಪ್ಪಿಸಬೇಕು ಅಂತಂದು ಕೊಂಡಳು.

ಪ್ರಮೋದ ಹೆಚ್ಚು ಓದದಿದ್ದರೂ, ವ್ಯವಹಾರ ಚತುರನಾಗಿದ್ದ. ತಾಯಿ ಅವನ ಹೆಸರಿನಲ್ಲಿ ಇಟ್ಟಿದ್ದ ಹಣವನ್ನು ಬಂಡವಾಳವನ್ನಾಗಿಟ್ಟುಕೊಂಡು ಹೋಟೆಲ್ ಬಿಸಿನೆಸ್ ಪ್ರಾರಂಭಿಸಿದ. ಕೆಲವೇ ವರ್ಷಗಳಲ್ಲಿ ಬಿಸಿನೆಸ್ ಅಭಿವೃದ್ಧಿಗೊಂಡಿತು. "ನಿಮ್ಮ ಮಗ ಒಂದು ನೆಲೆಗೆ ಬಂದಿದಾನೆ. ಇನ್ನಾದರೂ ಮದುವೆಯಾಗಲೀ... ಅವನಿಗೆ ಅನುರೂಪಳಾದ ಹುಡುಗಿಯನ್ನು ನೋಡಿ" ಎಂದಿದ್ದ.

"ಅವನಿಗೆ ತಂದೆಯಾಗಿ ನಿಂತು, ಬೆಳೆಸಿ ವಿದ್ಯಾವಂತನನ್ನಾಗಿ ಮಾಡಿದೀರಿ. ಅವನು ನಿಮ್ಮ ಮಾತನ್ನು ಮೀರುವುದಿಲ್ಲ... ನೀವೇ ಮಾತನಾಡಿ..." ಎಂದಿದ್ದಳು.

"ನನ್ನ ತಂಗಿಯ ಮಗಳು ಶ್ವೇತಾಳನ್ನು ಸೊಸೆಯನ್ನಾಗಿ ಮಾಡ್ಕೋಬೇಕು ಅಂತ ನನಗೆ ಆಸೆ... ಸಮರ್ಥನಿಗೆ ಆ ಯೋಗವಿಲ್ಲ... ಪ್ರಮೋದನಿಗೆ ಮಾಡಿ ಕೊಳ್ಳೋಣ ಏನಂತೀರಿ?"

"ನನ್ನದು ಏನೂ ಅಭ್ಯಂತರವಿಲ್ಲ. ಆದರೆ ನಿಮ್ಮ ತಂಗಿಗೆ ಇಷ್ಟವಿದೆಯೋ ಇಲ್ಲವೋ ಮೊದಲು ವಿಚಾರಿಸಿ. ಆಮೇಲೆ ಪ್ರಮೋದನ ಹತ್ತಿರ ಮಾತನಾಡಿ..." ಅವಳು ಸಲಹೆಯನ್ನಿತ್ತಳು.

* * *

ಇದ್ದಕ್ಕಿದ್ದಂತೆ, ಮಂಜುಳಳ ಓರಗಿತ್ತಿ ಪ್ರತ್ಯಕ್ಷಳಾದಳು. ಆತ್ಮೀಯತೆಯಿಂದ ಮಾತನ್ನಾಡಿಸಿದಳು. ಯೋಗಕ್ಷೇಮವನ್ನು ವಿಚಾರಿಸಿದಳು. ನಂತರ ತಾನು

ಬಂದ ವಿಷಯವನ್ನು ಪ್ರಸ್ತಾಪಿಸಿದಳು.

"ಅಕ್ಕಾ, ನಮ್ಮ ನಿರ್ಮಲ ಬೆಳೆದು ನಿಂತಿದಾಳೆ. ಮೈದುನ ಇಲ್ಲದ ಮನೆ ಆಗ್ಬೇಕು... ನೀವು ಮನಸ್ಸು ಮಾಡಿದರೇ... ನಿಮ್ಮ ಸೊಸೆ ಆಗ್ತಾಳೆ...."

ಮಂಜುಳಾ ಬೆಚ್ಚಿದಳು. ಇಂದೆಂಥಾ ಪ್ರಸ್ತಾಪ! ವಾಸ್ತವದಲ್ಲಿ ನಿರ್ಮಲ ಪ್ರಮೋದನಿಗೆ ತಂಗಿಯಾಗ್ಬೇಕು. ಆದರೆ, ಆ ರಹಸ್ಯವನ್ನು ತಿಳಿಸುವಂತಿಲ್ಲ. ಮೌನವಾಗಿ ನಿಂತಳು. ನಿಮಗೆ ನಮ್ಮ ಮೇಲೆ ಕೋಪ ಅಲ್ವಾ ಅಕ್ಕಾ? ಏನ್ಮಾಡೋದು ಹೇಳಿ... ನಮಗೂ ಅನುಕೂಲವಿರಲಿಲ್ಲ.... ಈಗಲೂ ಅಷ್ಟಕ್ಕಷ್ಟೇ... ನಿಮ್ಮ ಅದೃಷ್ಟ ಖುಲಾಯಿಸಿದೆ... ಭಾವ ನಿಮ್ಮ ಕೈ ಹಿಡಿದರು....

ಮಂಜುಳಾ ಮೌನವನ್ನು ಮುರಿದಳು... "ನಿನ್ನ ಗಂಡನಿಗೆ ನೀನು ಇಲ್ಲಿಗೆ ಬಂದಿರುವ ವಿಷಯ ಗೊತ್ತಾ?"

"ಹೂಂ, ಹೇಳಿಬಿಟ್ಟೇ ಬಂದಿದೀನಿ... ಅವರಿಗೆ ನಿಮ್ಮ ಮೇಲೆ ಗೌರವವಿದೆ. ಏನೋ ಅಣ್ಣ ತೀರಿ ಹೋದಾಗ, ಸಣ್ಣ ಮಾತುಗಳನ್ನಾಡಿರಬಹುದು..."

"ನಾನು ಅದನ್ನೆಲ್ಲ ಮರೆತಿಲ್ಲ ವನಜಾ... ನಾನು ಅಲ್ಲಿಯೇ ಇದ್ದಿದ್ದರೆ, ನೀನು ಈ ದಿನ, ಈ ಸಂಬಂಧದ ಪ್ರಸ್ತಾಪ ಮಾಡುತ್ತಿರಲಿಲ್ಲ... ನಾನು ಈಗಲೂ ನಿನಗೆ ಅಕ್ಕನೇ... ನಿನ್ನ ಗಂಡನಿಗೆ ಅತ್ತಿಗೇನೇ.... ನನ್ನ ಮಗ ನಿನ್ನ ಮಗನ ಸಮಾನ.... ಅಂದರೆ ನಿರ್ಮಲ ತಂಗಿಯಾಗುತ್ತಾಳೆ... ಮದುವೆ ಹೇಗೆ ಸಾಧ್ಯ?....ನಿನ್ನ ಗಂಡನಿಗಾದರೂ ತಿಳಿಯಬೇಡವೇ?"

"ಅದ್ಹೇಗೆ ಸಾಧ್ಯ ಅಕ್ಕಾ... ಪ್ರಮೋದ ಶೇಷಾದ್ರಿಯವರ ಸಂತಾನ...."

"ಸರಿ.... ಇವರಿಗೆ ಒಪ್ಪಿಗೆಯಾದರೆ ನಾನು ನಿನಗೆ ತಿಳಿಸುತ್ತೇನೆ...." ವನಜ ಪೆಚ್ಚಾಗಿ ಹಿಂತಿರುಗಿದ್ದಳು. ಮಂಜುಳಾ ಸಮಯ ನೋಡಿ, ಶೇಷಾದ್ರಿಗೆ, ವನಜ ಬಂದಿದ್ದ ವಿಷಯವನ್ನು ತಿಳಿಸಿದಳು. ಅವನು ಹುಬ್ಬೇರಿಸಿದ.

"ನೀವೇನು ಹೇಳಿದ್ರೀ?"

"ನಾನೇನು ಹೇಳ್ಲೀ...? ಈ ಸಂಬಂಧ ಹೇಗೆ ಸಾಧ್ಯ? ನೀವೇ ಹೇಳಿ...."

"ಸರಿ, ಇನ್ನು ಈ ವಿಷಯದ ಚರ್ಚೆ ಬೇಡ. ನಾನು ಅವರ ಹತ್ತಿರ ಮಾತಾಡ್ತೀನಿ..." ಎಂದ. ಅವಳು ನಿರಾಳವಾದಳು.

* * *

ಶೇಷಾದ್ರಿಯನ್ನು ಕಂಡು ವನಜ ಹಿಗ್ಗಿದಳು... ಒಳಗಿನಿಂದ ಅವಳ ಗಂಡ ಮಧುಕರನೂ ಬಂದ. ಅವನ ಮುಖ ಕಪ್ಪಾಯಿತು. ಆದರೂ ಸೌಜನ್ಯ ದಿಂದ ಕರೆದು ಕುಳಿತುಕೊಳ್ಳುವಂತೆ ಹೇಳಿದ. ಶೇಷಾದ್ರಿ, ತಾನು ತಂದಿದ್ದ ಆರು ಲಕ್ಷ ರೂಪಾಯಿಗಳ ಕಟ್ಟನ್ನು ಟೀಪಾಯಿಯ ಮೇಲಿಟ್ಟ. "ಇದು ನೀವು ನಿಮ್ಮ ಅತ್ತಿಗೆಗೆ ಹಾಗೂ ಅವರ ಮಗನಿಗೆ ಸಹಾಯವಾಗಲೆಂದು ಕೊಟ್ಟ

ಹಣ. ಈಗ ಇದರ ಅಗತ್ಯವಿಲ್ಲ... ನಿಮ್ಮ ಮಗಳಿಗೆ ಸೂಕ್ತವಾದ ವರನನ್ನು ನೋಡಿ, ಚೆನ್ನಾಗಿ ಮದುವೆ ಮಾಡಿಕೊಡಿ...."

"ಅತ್ತಿಗೆಗೆ ಈಗ ಜಂಭ ಬಂದು ಬಿಟ್ಟಿದೆ ಅಂತ ಕಾಣುತ್ತೆ. ನಾನು ಕೊಟ್ಟ ಹಣವನ್ನು ಬಡ್ಡಿ ಸಮೇತ ಕಳಿಸಿದ್ದಾರೆ..." ವ್ಯಂಗ್ಯವಾಗಿ ಹೇಳಿದ.

"ನೀವ್ಯಾವಾಗ ಕೊಟ್ಟಿದ್ರಿ? ನೀವು ಹೇಳಿರಲೇ ಇಲ್ಲ...." ವನಜ ಕೇಳಿದಳು.

"ಅತ್ತಿಗೆ ಈ ಮನೆಯಿಂದ ಹೊರಟು ಹೋದ್ರಲ್ಲ... ನಾನೇ ಅತ್ತಿಗೆಗೆ, ಅಣ್ಣನ ಕಡೆಯಿಂದ ಸಿಗಬೇಕಾದ ಹಣ ಅಂತ ಎರಡು ಲಕ್ಷ ರೂಪಾಯಿಗಳನ್ನು ಕೊಟ್ಟಿದ್ದೆ.... ಈಗ ಮೂರರಷ್ಟಾಗಿರಬಹುದು. ಈಗ ಅವರಿಗ್ಯಾಕೆ ಅಣ್ಣನ ಹಣ? ....ಈಗ ಅವರೇ ಯಜಮಾನಿತಿ... ಸಂಪಾದಿಸುವ ಮಗ ಇದಾನೆ? ಇನ್ನೇನು ಬೇಕು?" ಹುಬ್ಬು ಕುಣಿಸಿದ.

"ಹಾಗಾದ್ರೆ, ನಮ್ಮ ನಿರ್ಮಲ ನಿಮ್ಮ ಸೊಸೆಯಾಗುವುದು ಇಷ್ಟ ಇಲ್ಲವಾ?"

"ಬೇಡ ವನಜಾರವರೇ.... ಈಗ ಯಾವ ಸಂಬಂಧವೂ ಬೇಡ... ಹಳೆಯ ಸಂಬಂಧಗಳಿಗೆ, ಹೊಸ ಸಂಬಂಧಗಳ ಕೊಂಡಿಯನ್ನು ಸೇರಿಸಿದರೂ, ಕೆಲವು ಅರ್ಥವಾಗದ ಸಂಬಂಧಗಳು ಬದಲಾಗುವುದಿಲ್ಲ..."

"ಅಂದರೇ... ಅಕ್ಕ ಏನಂದ್ರು?"

"ಅವರು ಏನನ್ನೂ ಅಂದಿಲ್ಲ.... ಅವರ ಪರವಾಗಿ ಮಾತನ್ನಾಡಲು ನಾನು ಬಂದಿದೀನಿ.... ನಿಮ್ಮ ಹಣವನ್ನು ವಾಪಸ್ಸು ಕೊಡುವುದು ಸರಿ ಅಂತ ಅನ್ನಿಸ್ತು... ಅದಕ್ಕೇ ಬಂದೆ... ನಾನಿನ್ನು ಹೊರಡ್ತೀನಿ...." ಎಂದು ಎದ್ದ. ಅವನು ಅತ್ತ ಹೋದ ಕೂಡಲೇ, ಗಂಡ ಹೆಂಡತಿ, ಹಣವನ್ನು ಜೋಪಾನವಾಗಿ ತೆಗೆದಿಟ್ಟರು.

ಮನೆಗೆ ವಾಪಸ್ಸಾದ ಶೇಷಾದ್ರಿ, ಉಸ್ಸೆಂದು ಗಾಳಿ ಬೀಸಿಕೊಳ್ಳುತ್ತಾ ಕುಳಿತ. ಅವನಾಗಿಯೇ ಏನನ್ನೂ ಹೇಳದಿದ್ದಾಗ, ಮಂಜುಳ ತಾನೇ ಪ್ರಶ್ನಿಸಿದಳು. "ಏನಂದ್ರು ಅವರಿಬ್ರೂ....?"

"ಇಬ್ಬರೂ ಸೇರಿ ಈ ನಾಟಕ ಆಡಿದಾರೆ ಅಂತ ಅನ್ಸುತ್ತೆ. ಅವನು ಕೊಟ್ಟ ಹಣ ಅವನಿಗೆ ವಾಪಸ್ಸು ಬೇಕಾಗಿತ್ತು ಅಷ್ಟೇ. ಇನ್ನು ಅವರು ನಮ್ಮ ತಂಟೆಗೆ ಬರುಲ್ಲ...."

"ಪ್ರಮೋದಂಗೆ ಏನಾದ್ರೂ ತೊಂದ್ರೆ ಮಾಡಿದ್ರೆ?" ಆತಂಕದಿಂದ ಕೇಳಿದಳು.

"ಏನೂ ಮಾಡುಲ್ಲ ಧೈರ್ಯವಾಗಿರಿ...."

"ನಾವು ಈ ಊರನ್ನೇ ಬಿಟ್ಟು ಬೇರೆ ಎಲ್ಲಿಗಾದ್ರೂ ಹೊರಟು ಹೋಗೋಣ...."

"ಅಷ್ಯಾಕೆ ಹೆದರ್ತೀರಿ ಮಂಜುಳಾ ನಾನಿಲ್ವಾ?"

"ಪ್ರಮೋದಂಗೆ ನಿಜ ಹೇಳಿ, ಅವನ ತಲೆ ಕೆಡಿಸಿದರೆ.... ಈಗ ಇವನು ಚೆನ್ನಾಗಿ ಸಂಪಾದಿಸ್ತಿದ್ದಾನೆ. ಮತ್ತೆ ಮತ್ತೆ ಬಂದು ಹಣ ಕೇಳಿದರೆ?"

"ಹಾಗೇನಾದ್ರೂ ಮಾಡಿದರೆ, ಪೋಲೀಸ್ ಕಂಪ್ಲೆಂಟ್ ಕೊಟ್ರಾಯ್ತು...." ಹಾಗಂತ ಅವಳಿಗೆ ಹೇಳಿದರೂ, ಅವನಿಗೂ ಆತಂಕವಾಗಿತ್ತು. ಯಾವ ಹಗರಣಗಳೂ ಬೇಡವಾಗಿದ್ದವು. ಈ ಮನೆಗೆ ಬಂದ ಮೇಲೆ, ತಂದೆಯನ್ನು ಕಳೆದುಕೊಂಡಿದ್ದ. ನಾಗವೇಣಿಯೂ ತೀರಿ ಹೋಗಿದ್ದಳು. ಹೆಣ್ಣು ಮಕ್ಕಳಿಗೆ ಮದುವೆಯಾಗಿತ್ತು.... ಇವನನ್ನು ಬಂದು ವಿಚಾರಿಸಲೂ ಅವರಿಗೆ ಬಿಡುವಿರಲಿಲ್ಲ. ಸಮರ್ಥ ದೇಶವನ್ನು ಬಿಟ್ಟು, ಹೆಂಡತಿಯೊಡನೆ ಹೊರಟುಹೋಗಿದ್ದ... ಮಂಜುಳ ಪತ್ನಿಯಾಗಿದ್ದರೂ, ಆಪ್ತಳಾಗಿರಲಿಲ್ಲ. ಪ್ರಮೋದನನ್ನು ಮಗನಂತೆ ಸಾಕಿದ್ದರೂ, ಸ್ವಂತ ಮಗನಲ್ಲ.... ಯಾಕೋ ಎಲ್ಲವೂ ವಿಚಿತ್ರ ಎನಿಸುತ್ತಿತ್ತು. ಮಂಜುಳ ಹೇಳಿದಂತೆ, ಪರವೂರಿಗೆ ಹೋಗಿ, ಹೊಸ ರೀತಿಯಲ್ಲಿ ಬಾಳಬೇಕು ಎಂದುಕೊಂಡ.

ಆದರೆ ಪ್ರಮೋದ ಒಪ್ಪಲಿಲ್ಲ. "ಬಿಸಿನೆಸ್ ಚೆನ್ನಾಗಿ ನಡೆಯುತ್ತಿದೆ. ಬೇರೆ ಊರಿನಲ್ಲಿ ಮತ್ತೆ ಹೊಸದಾಗಿ ಪ್ರಾರಂಭಿಸಿದರೆ ಜನ ನಗ್ತಾರೆ ಅಷ್ಟೇ... ನಿಮಗೆ ಇಲ್ಲಿ ಇರುಕ್ಕೆ ಇಷ್ಟವಿಲ್ಲದಿದ್ದರೆ ನೀವು ಹೋಗಿ. ನಾನು ಇಲ್ಲಿಯೇ ಇರ್ತೀನಿ. ಎಲ್ಲಿಗೂ ಬರುಲ್ಲ" ಎಂದು ಖಡಾಖಂಡಿತವಾಗಿ ಹೇಳಿದ್ದ. ಶೇಷಾದ್ರಿ ಮಂಜುಳಳ ಕಡೆ ನೋಡಿ ಪೆಚ್ಚು ನಗೆಯನ್ನು ನಕ್ಕ. ಅವನಿಗೆ ನಿರಾಸೆಯಾಗಿದೆ ಎನ್ನುವುದನ್ನು ಅವಳು ಅರಿತಳು. ಮಗನ ಬಳಿಗೆ ಬಂದು ನುಡಿದಳು.

"ಹಾಗಲ್ಲ ಕಣೋ ಪ್ರಮೋದ, ನಿನ್ನ ತಂದೆಯನ್ನು ಹಳೆಯ ನೆನಪುಗಳು ಕಾಡುತ್ತವೆ. ನಿದ್ದೆ ಸರಿಯಾಗಿ ಬರುಲ್ಲ.... ಊಟ ಸರಿಯಾಗಿ ಸೇರುಲ್ಲ.... ಬೇರೆ ಸ್ಥಳಕ್ಕೆ ಹೋದರೆ, ಸ್ವಲ್ಪ ಮಟ್ಟಿಗೆ ಮನಸ್ಸು ಸರಿ ಹೋಗುತ್ತದೆ...."

ಪ್ರಮೋದ ನಕ್ಕ. "ಇದೆಲ್ಲಾ ವಯಸ್ಸಾಗುತ್ತಿರುವುದರ ಲಕ್ಷಣ.... ಎಲ್ಲಿ ಹೋದರೂ ಊಟ ಸೇರುಲ್ಲ, ನಿದ್ದೆ ಬರುಲ್ಲ. ಬೇರೆ ಚಟುವಟಿಕೆಗಳನ್ನು ಇಟ್ಟುಕೊಳ್ಳಲಿ, ಎಲ್ಲಾ ಸರಿ ಹೋಗುತ್ತೆ...." ಎಂದಿದ್ದ.

"ಹೋಗಲಿ ಬಿಡಿ. ಅವನಿಗೆ ಹೇಗೆ ಬೇಕೋ ಹಾಗಿರಲಿ. ಮತ್ತೆ ಈ ಚರ್ಚೆ ಬೇಡ" ಎಂದು ಹೇಳಿ ಶೇಷಾದ್ರಿ ಅಲ್ಲಿಂದ ಹೊರಕ್ಕೆ ಹೋಗಿದ್ದ.

"ನಿನ್ನ ಮಾತ್ನಿಂದ ನಿನ್ನ ಅಪ್ಪನಿಗೆ ಬೇಸರ ಆಯ್ತು.... ಅವರಿಗೆ ಹೊರಗೆ ತಿರುಗುವ ಅಭ್ಯಾಸವಿಲ್ಲ. ಮನೆಯಲ್ಲಿ ಹೊತ್ತು ಹೋಗುಲ್ಲ... ನಿನ್ನ ಬಿಸಿನೆಸ್ ವ್ಯವಹಾರದಲ್ಲಿ ಅವರು ತಲೆ ಹಾಕುಲ್ಲ. ಹೋಗಲಿ, ಬೇಗ ಮದುವೆ ಮಾಡ್ಕೋ.... ಮೊಮ್ಮಕ್ಕಳು ಹುಟ್ಟಿದರೆ, ಆಟ ಆಡಿಸ್ಕೊಂಡಾದ್ರೂ ಕಾಲ ಕಳೀತಾರೆ..."

"ಸರಿ ಹೋಯ್ತು. ಅವರಿಗೆ ಆಡಿಸುಕ್ಕೆ ಮೊಮ್ಮಗು ಬೇಕು ಅಂತ ನಾನು

ಬೇಗ ಮದುವೆಯಾಗ್ಬೇಕಾ? ಇದು ಸಾಧ್ಯವಿಲ್ಲ..." ನಗುತ್ತಾ ಕೇಳಿದ್ದ.

"ಯಾಕೆ ಸಾಧ್ಯವಿಲ್ಲ? ನಿನಗೂ ಮದುವೆಯ ವಯಸ್ಸಾಗಿದೆ.... ನಿನ್ನ ಅಣ್ಣ ಅವನೇ ಗೊತ್ತು ಮಾಡಿಕೊಂಡ, ಮದುವೆಯಿಂದ ಇವರಿಗೆ ನಿರಾಸೆ ಯಾಗಿದೆ. ನಿನ್ನ ಮದುವೆಯನ್ನಾದರೂ, ಇವನ ಇಷ್ಟದಂತೆ, ಅಚ್ಚು ಕಟ್ಟಾಗಿ ನಡೆಸ್ಬೇಕು ಅಂತ ನನಗೆ ಆಸೆ... ಇದನ್ನಾದ್ರೂ ಒಪ್ಕೋ...."

ಒಂದು ನಿಮಿಷ ಯೋಚಿಸಿದವನಂತೆ ಮಾಡಿ, ಟಕ್ ಎಂದು ತಲೆಯಾಡಿಸಿ ನುಡಿದ... "ಓ...ಕೇ... ನಾನು ಮದುವೆಯಾಗೋಕೆ ರೆಡಿ... ಆದರೆ ಒಂದು ಕಂಡೀಷನ್.... ನನ್ನ ಪಾರ್ಟನರ್ ವಿಶ್ವನ ತಂಗಿ ಪ್ರಣೀತಾಳನ್ನು ನಾನು ಮೆಚ್ಚಿದೀನಿ.... ಮದುವೆಯಾದರೆ ಅವಳನ್ನೇ ಇಲ್ಲದಿದ್ದರೆ ಹೀಗೇ ಇದ್ದು ಬಿಡ್ತೀನಿ. ನೀನು ಡ್ಯಾಡೀನ ಒಪ್ಪಿಸು...." ಎಂದು ಹೇಳಿ ಎದ್ದು ಒಳಕ್ಕೆ ಹೋಗಿದ್ದ.

ಮಂಜುಳ ಆತಂಕಗೊಂಡಳು. ಈ ವಿಷಯವನ್ನು ಪ್ರಸ್ತಾಪಿಸುವುದು ಹೇಗೆ? ಮೊದಲೇ ಬೇಸರಗೊಂಡಿದ್ದಾರೆ, ಇವನೂ ಸಮರ್ಥನ ದಾರಿಯನ್ನೇ ಹಿಡಿದಿದಾನೆಂದರೆ, ಏನನ್ನಿಸಬಹುದು? ನಾನು ಬೆಳೆಸಿದ ರೀತಿಯೇ ಸರಿ ಇಲ್ಲ ದಿರಬಹುದು.... ಸಮರ್ಥನೂ ಸ್ವಾರ್ಥಿಯಾದ.... ಈಗ ಇವನೂ ಅಷ್ಟೇ.... ನಾನು ಹೇಳುವುದಿಲ್ಲ. ಮದುವೆಯಾದರೆ ಆಗಲಿ, ಇಲ್ಲದಿದ್ದರೆ ಹಾಗೇ ಇರಲಿ, ನಷ್ಟವಿಲ್ಲ ಎಂದುಕೊಂಡು ಸುಮ್ಮನಾದಳು.

ಒಂದು ದಿನ ಇದ್ದಕ್ಕಿದ್ದಂತೆ, ಪ್ರಣೀತಾಳ ತಂದೆ ತಾಯಿ, ಪ್ರಸ್ತಾಪವನ್ನು ಮಾಡಲೆಂದು ಇವರ ಮನೆಗೆ ಬಂದರು. ಆಗಲೇ ಶೇಷಾದ್ರಿಗೆ ಈ ವಿಷಯ ತಿಳಿದದ್ದು. ಮಂಜುಳ ಮೌನವಾಗಿದ್ದಳು. ಅವಳಿಗೆ ಈ ಮೊದಲೇ ತಿಳಿದಿದ್ದರೂ ತನಗೆ ತಿಳಿಸಿರಲಿಲ್ಲವೆಂದು ಅನ್ನಿಸಿದರೂ, ಅಸಮಾಧಾನವನ್ನು ಎದೆಯಲ್ಲಿ ಅಡಗಿಸಿ ಕೊಂಡ. ಮೇಲೆ ಅವರೊಡನೆ ಸಮಾಧಾನದಿಂದ ಮಾತನಾಡಿದ. ಮದುವೆ ನಿಶ್ಚಯವೂ ಆಯಿತು. "ನಮಗೆ ಇವಳು ಒಬ್ಬಳೇ ಮಗಳು, ಯಾವುದೇ ಲೋಪ ದೋಷ ಬರದಂತೆ ಮದುವೆ ಮಾಡಿಕೊಡುವ ಜವಾಬ್ದಾರಿ ನಮ್ಮದು... ನಿಮ್ಮ ಯಾವುದೇ ಕಂಡೀಷನ್‌ಗೆ ನಾವು ಸಿದ್ಧ...." ಎಂದು ಒತ್ತಿ ಒತ್ತಿ ಹೇಳಿದ್ದರು.

"ನಮಗೆ ಯಾವ ಕಂಡೀಷನ್ನೂ ಇಲ್ಲ. ನಿಮ್ಮ ಅಳಿಯನಾಗುವವನಿಗೆ ಏನು ಇಷ್ಟವೋ ಅದನ್ನು ಪೂರೈಸಿ ಅಷ್ಟು ಸಾಕು" ಎಂದು ಹೇಳಿದ್ದ. ಅವರುಗಳು ಅತ್ತ ಹೋದ ನಂತರ ಮಂಜುಳ ಕ್ಷಮಾಪಣೆಯನ್ನು ಕೇಳಿದಳು.

"ನಿಮ್ಮ ಮನಸ್ಸಿಗೆ ನೋವಾಗಿದೆ ಅಂತ ನಂಗೆ ಅರ್ಥವಾಗ್ತಿದೆ. ನನ್ನ ಮಾತನ್ನು ಅವನು ಕೇಳಲಿಲ್ಲ..." ಎಂದಳು ಕೆಳ ದನಿಯಲ್ಲಿ.

"ನಾವು ಅಪೇಕ್ಷೆ ಪಡುವುದೂ ಸರಿಯಲ್ಲ ಅಂತ ಅರ್ಥವಾಗಿದೆ. ನನ್ನ ಸ್ವಂತ ಮಗನಿಗೇ ನಾನು ಏನನ್ನೂ ಹೇಳುವುದಾಗಲಿಲ್ಲ... ಇವನು ಕೇಳಲಿ

ಎಂದು ಬಯಸುವುದು ತಪ್ಪಲ್ಲವೇ?"

"ಹಾಗ್ಯಾಕೆ ಹೇಳ್ತೀರಿ? ನೀವು ಸಾಕಿ ಬೆಳೆಸಿದವನು.... ನಿಮ್ಮ ಮಾತನ್ನು ಅವನು ಕೇಳಬಹುದು, ಹೇಳುವ ಹಕ್ಕು ನಿಮಗಿದೆ... ಈಗಲೂ ಮಾತಾಡಿ..."

"ಬೇಡ ಮಂಜುಳಾರವರೇ... ಈಗ ಯಾವ ಉಪಯೋಗವೂ ಇಲ್ಲ... ಈ ಕಾರಣದಿಂದ ಇವನೂ ನಮ್ಮಿಂದ ದೂರ ಹೊರಟು ಹೋದರೆ, ನಾವು ಯಾರಿಗಾಗಿ ಬದುಕಬೇಕು? ನಿಮ್ಮಿಂದ ನಿಮ್ಮ ಮಗನನ್ನು ದೂರ ಮಾಡಲು ನನಗಿಷ್ಟವಿಲ್ಲ" ಎಂದ. ಅವಳೂ ಪೆಚ್ಚಾದಳು.

* * *

ಲಗ್ನ ಪತ್ರಿಕೆ ಸಮಾರಂಭ ಬಹಳ ಅದ್ಧೂರಿಯಾಗಿ ನೆರವೇರಿತು. ಶೇಷಾದ್ರಿಯ ಕುಟುಂಬದವರೆಲ್ಲ ಉತ್ಸವದಲ್ಲಿ ಸೇರುವಂತೆ, ಒಟ್ಟಾಗಿ ಸೇರಿದ್ದರು. ಎಲ್ಲರಿಗೂ ಅಚ್ಚರಿ. ಶೇಷಾದ್ರಿಯ ಸಾಕುಮಗನಾಗಿ, ಎಂಥಾ ಸುಯೋಗವನ್ನು ಹೊಂದಿದ್ದಾನೆ. ಕೆಲವರಿಗೆ ಅಸೂಯೆಯೂ ಆಗಿತ್ತು...ನಾಗವೇಣಿಯ ಮಕ್ಕಳಿಗೆ ಇಲ್ಲದುದು ಇವನಿಗೆ ಸಿಕ್ಕಿತೆಂದರೆ? ಕೆಲವರು, ಇವನು ನಿಜವಾಗಿಯೂ ಶೇಷಾದ್ರಿಯ ಮಗನೇ ಇರಬಹುದು ಎಂಬ ನಿರ್ಣಯಕ್ಕೂ ಬಂದಿದ್ದರು. ಕೆಲವರು ಶೇಷಾದ್ರಿಯ ಹಿಂದೆ ಹಿಂದೆ ಆಡಿಕೊಂಡರು. ಕೆಲವರು, ಶೇಷಾದ್ರಿ ಯನ್ನು ಬಾಯ್ತುಂಬಾ ಹೊಗಳಿದರು.

ಸಮಾರಂಭ ಮುಗಿದಿತ್ತು. ಈಗ ಬರೀ ಮನೆ ಮನೆಯವರೇ ಉಳಿದು ಕೊಂಡಿದ್ದರು. ಶೇಷಾದ್ರಿಯ ಮನ ಗೊಂದಲದ ಗೂಡಾಗಿತ್ತು. ಪ್ರಮೋದನನ್ನು ಮಗನೆಂದು ಎಂದೋ ಸ್ವೀಕರಿಸಿದ್ದಾಗಿದೆ. ಸಾಕಿ ಬೆಳೆಸುವುದರಲ್ಲಿ ಹೇಗೆ ತಾರತಮ್ಯ ವಿರಲಿಲ್ಲವೋ ಹಾಗೇ, ಯಾವುದರಲ್ಲೂ ಏನೂ ತಾರತಮ್ಯವಿರಬಾರದು. ಅಳೆದು ಸುರಿದೂ, ಮೀನಾ ಮೇಷ ಎಣಿಸಿ ಕೊನೆಗೊಮ್ಮೆ ಒಂದು ನಿರ್ಧಾರಕ್ಕೆ ಬಂದಿದ್ದ... ಸೊಸೆಯಾಗಿ ಬರುವವಳ ಮನೆಯವರು ಶ್ರೀಮಂತರು.... ಮನಸ್ಸಿಗೆ ಸ್ವಲ್ಪ ಪಿಚ್ಚೆನ್ನಿಸಿತ್ತು... ಪ್ರಮೋದನನ್ನೂ, ಭಾವೀ ಸೊಸೆಯನ್ನೂ ತನ್ನ ಬಳಿಗೆ ಕರೆಸಿದ್ದ. ತನ್ನ ಬಳಿ ಇಟ್ಟುಕೊಂಡಿದ್ದ ವಜ್ರದ ಓಲೆಗಳನ್ನು, ಮೂಗುಬೊಟ್ಟನ್ನೂ ಅವಳಿಗೆ ಕೊಟ್ಟ, ಆದರೆ ಅವರಿಬ್ಬರೂ ಯಾವ ಉತ್ಸಾಹವನ್ನೂ ತೋರಿಸದಿದ್ದಾಗ ಪಿಚ್ಚೆನ್ನಿಸಿತ್ತು. ವಜ್ರದ ಹೊಳಪು ಅತಿಶಯವಾಗಿದ್ದರೂ, ಒಡವೆ ಹಳೆಯದೇ.... ಯಾವ ಆಕರ್ಷಣೆ ಯನ್ನುಂಟುಮಾಡಲಿಲ್ಲ. ಆದರೆ ಇದು ತನ್ನ ಕರ್ತವ್ಯವಾಗಿತ್ತು. ಮನೆಗೆ ಸೊಸೆ ಯಾಗಿ ಬರುವವಳಿಗೆ ಕೊಡುವುದು ಸರಿ ಎನಿಸಿತ್ತು. ಆದರೆ.... ಪ್ರಣೀತಾಳ ಉದಾಸೀನ ಅವನನ್ನು ಯೋಚಿಸುವಂತೆ ಮಾಡಿತ್ತು. ರಾತ್ರಿಯೆಲ್ಲಾ ಆತಂಕದಿಂದ ಹೊರಳಾಡಿದ್ದ. ಅಪ್ಪನ ಆಸೆ ಇದ್ದುದು... ನನ್ನ ಹೆಂಡತಿ ಈ ಒಡವೆಗಳನ್ನು ಧರಿಸಲೆಂದು, ನಾಗವೇಣಿಗೆ ಒಡವೆಗಳ ಬೆಲೆ ಗೊತ್ತಿರಲಿಲ್ಲ...

ಹೊಳಪಿಲ್ಲದ ಹಳೆಯ ಹರಳಿನ ಈ ಓಲೆಗಳಿಗಿಂತ ಹೊಳೆ ಹೊಳೆಯುವ ಚಿನ್ನದ ಒಡವೆಗಳೇ ಸೊಗಸೆಂದು ಭಾವಿಸಿದ್ದಳು. ಈ ಹುಡುಗಿಯೋ ಹತ್ತಾರು, ಹೊಸ ಹೊಸ, ಒಡವೆಗಳನ್ನು ಕೊಳ್ಳುವ ಚೈತನ್ಯವಿರುವವಳು.... ನಾಗವೇಣಿಗೆ ನೆಮ್ಮದಿಯೇ ಇರಲಿಲ್ಲ. ಯಾವುದೋ ಭೀತಿಯಲ್ಲಿದ್ದಳು.... ಆದರೂ ತನಗೆ ಎಲ್ಲವನ್ನೂ ತಿಳಿಸುತ್ತಿದ್ದಳು. ಆದರೆ ಈ ಪ್ರಣೀತಾ? ಈ ಕಾಲದವಳು, ಯಾವುದಕ್ಕೂ ಯೋಚಿಸದವಳು.... ಭಾವನಾತ್ಮಕ ವಿಚಾರಗಳಿಗೆ ಬೆಲೆಯನ್ನು ಕೊಡದವಳು. ಅವಳಿಗೆ ಈ ವಿಷಯಗಳು ತಮಾಷೆಯಾಗಿ ಕಾಣಬಹುದು... ಪ್ರಮೋದನೋ ಈಗಲೇ ಪ್ರಣೀತಾಳ ಕೈಗೊಂಬೆ.... ತನ್ನ ಸ್ವಂತ ಮಗನೇ ತನ್ನ ಆಸೆ ಆಕಾಂಕ್ಷೆಗಳಿಗೆ ಬೆಲೆ ಕೊಡಲಿಲ್ಲ. ಇನ್ನು ಇವನಿಂದ ಏನನ್ನು ನಿರೀಕ್ಷಿಸಲಾಗುತ್ತೆ ಎಂದುಕೊಂಡು ಹೊರಳಾಡಿದ.

ಸಮರ್ಥನ ಹೆಂಡತಿಗೆ ಈಗಾಗಲೇ ಒಂದು ಮಗುವಿದೆ. ಮತ್ತೆ ಮಕ್ಕಳು ಬೇಕೋ ಬೇಡವೋ ಯಾರಿಗೆ ಗೊತ್ತು? ಪ್ರಮೋದನ ಹೆಂಡತಿಗೆ ಹುಟ್ಟುವ ಸಂತಾನ ತನ್ನ ವಂಶದ್ದಂತೂ ಅಲ್ಲ.... ತಿಳಿದೂ ತಿಳಿದೂ, ತಾನು ಈ ಒಡವೆ ಗಳನ್ನು ಇವಳಿಗೆ ಕೊಡುತ್ತಿರುವುದು ಸರಿಯೇ ಎಂದು ಮತ್ತೆ ಮತ್ತೆ ಚಿಂತಿಸಿದ....

* * *

ದೇವರ ವಿಗ್ರಹದ ಮುಂದೆ ನಿಂತು ಕೈ ಮುಗಿದ. ಪ್ರಾರ್ಥಿಸಿದ. ನೆಟ್ಟ ನೋಟದಿಂದ ಮೂರ್ತಿಯನ್ನೇ ನೋಡಿದ. ಅಲಂಕೃತಗೊಂಡ ವಿಗ್ರಹ ಮೂರ್ತಿ, ಮೈ ತುಂಬಾ ಹೊದೆಸಿರುವ ಹೊನ್ನಿನ ಕವಚ. ಹೊಳೆ ಹೊಳೆಯುವ ನಾನಾ ರೀತಿಯ ಆಭರಣಗಳು.... ಅಲಂಕಾರಿಕವಾಗಿ ಜೋಡಿಸಿರುವ ಹೂ ಮಾಲೆಗಳು. ... ಭವ್ಯವಾದ ವದನದಲ್ಲಿ ವಿಶೇಷ ಮಂದಹಾಸ! ಕವಚದ ಒಳಗೆ ಬರೀ ಶಿಲೆ...ಕೆತ್ತಿದ ನಂತರ ಈ ವಿಶೇಷ ಕಳೆ! ಅದಕ್ಕೆ ಮೆರುಗು ಕೊಡುವ, ಕವಚ! ಈ ಆಭರಣಗಳು!! ಹೀಗಿರಬೇಕು... ದೇವರ ವಿಗ್ರಹದಂತೆ, ಲೌಕಿಕಕ್ಕೆ ಕಲ್ಲಾಗಿರ ಬೇಕು... ನೋಡುಗರಿಗೆ ಮಂದಸ್ಮಿತನಾಗಿರಬೇಕು.... ಈ ಆಭರಣಗಳಂತೆ ಹೊಳೆಯಬೇಕು. ಆಗಲೇ ಈ ಬದುಕು ಸಾರ್ಥಕಗೊಳ್ಳುವುದು.

ಅಪ್ಪ ಸ್ವಾರ್ಥಿಯಾಗಿದ್ದರು, ಪತ್ನಿಗಾಗಿ ಒಡವೆಗಳನ್ನು ತಂದು ಕೊಟ್ಟರು. ಪ್ರೀತಿಯ ಮಳೆಯನ್ನೇ ಸುರಿಸಿರಬೇಕು.... ಮನೆ ತುಂಬಾ ಮಕ್ಕಳು... ಅದೇ ಅವರ ಆಸ್ತಿ.... ಆದರೂ ಅವರಿಗೆ ಆದದ್ದು ನಿರಾಸೆಯೇ... ಆ ಕಾರಣದಿಂದ ತನಗೆ ಮಾಡಿದ್ದೇನು? ಉಳಿದವರಂತೆ ತನ್ನನ್ನು ಮೇಲೇರಲು ಬಿಡಲೇ ಇಲ್ಲ. ಹಿಂದಕ್ಕೇ ನಿಲ್ಲಿಸಿ ಬಿಟ್ಟರು.... ಇಲ್ಲದಿದ್ದರೆ, ತಾನೂ ಬೇರೆಯವರಂತೆ ಇರ ಬಹುದಾಗಿತ್ತು. ನಾಗವೇಣಿ ಮೂಢೆ, ಬಡತನದಲ್ಲಿ ಬೆಳೆದವಳು. ಅವಳಿಗೆ ಪ್ರಪಂಚ ಜ್ಞಾನವೇ ಇರಲಿಲ್ಲ. ಹಾಗಾದರೆ ತನಗೆ ಸಿಕ್ಕಿದ್ದೇನು? ಅಪ್ಪ ಹೇಳಿದಂತೆ

ಕೇಳಿದವನು... ಅವರ ಸ್ವಾರ್ಥಕ್ಕೆ, ನಾಗವೇಣಿಯ ಮೌಢ್ಯದಲ್ಲಿ ತನ್ನತನವನ್ನು ಕಳೆದುಕೊಂಡವನು.... ತಾನು ಇದ್ದ ರೀತಿಯೇ ಸರಿ ಇರಲಿಲ್ಲ... ತನಗೆ ಅಸ್ಥಿತ್ವವೇ ಇರಲಿಲ್ಲ. ಬೇರೆಯವರು ಹೇಳಿದಂತೆ ಕೇಳುವ ಒಂದು ಪ್ರಾಣಿ ಯಾಗಿದ್ದೆ. ...ತನ್ನ ಬಗ್ಗೆಯೇ ಅವನಿಗೆ ಅಸಹ್ಯ ಹುಟ್ಟಿಕೊಂಡಿತು. ಹಾಗೇ ಯೋಚಿಸುತ್ತಾ, ಎಷ್ಟು ಹೊತ್ತು ನಿಂತಿದ್ದನೋ, ಹಿಂದಿನವರು ಎಚ್ಚರಿಸಿದರು. ಇವನು ಇತ್ತ ಸರಿದ. ತನ್ನ ನಿರ್ಧಾರ ಬದಲಾಗುವ ಮೊದಲು ಅದನ್ನು ಕಾರ್ಯಗತ ಮಾಡಿ ಬಿಡಬೇಕೆಂದುಕೊಂಡ. ಸರಸರನೆ, ಹುಂಡಿ ಇದ್ದ ಸ್ಥಳಕ್ಕೆ ಬಂದ... ತನ್ನ ಜೇಬಿನಲ್ಲಿದ್ದ ಆ ಸಣ್ಣ ಡಬ್ಬಿಯನ್ನು ತೆಗೆದು, ಕಣ್ಣು ಮುಚ್ಚಿ ಕೈ ಮುಗಿದು, ಪ್ರಾರ್ಥಿಸಿ, ಅದನ್ನು ಹುಂಡಿಯೊಳಕ್ಕೆ ಹಾಕಿದ...

ತಕ್ಷಣಕ್ಕೆ ಏನನ್ನೋ ಕಳೆದುಕೊಂಡ ಅನುಭವವಾಯಿತು. ಆದರೆ ಒಂದೇ ಗಳಿಗೆ ಅಷ್ಟೇ... ಹೃದಯ ಹಗುರವಾಗಿ, ಮೈ ಭಾರ ಕಡಿಮೆ ಆದಂತೆನಿಸಿತು... ಎಲ್ಲಾ ಕಾಮನೆಗಳಿಂದ ಮುಕ್ತನಾದರೆಂತೆ ಅನ್ನಿಸಿತು. ಮತ್ತೊಮ್ಮೆ ದೇವರಿಗೆ ಕೈ ಮುಗಿದು ಅಲ್ಲಿಂದ ಹೊರ ಬಂದ. ಮಹತ್ಕಾರ್ಯ ಮಾಡಿ ಮುಗಿಸಿದವನಂತೆ, ವಿಜಯೋತ್ಸಾಹದಿಂದ ಮನೆಯ ಕಡೆ ಹೆಜ್ಜೆ ಹಾಕಿದ. ಹೃದಯ ಗಟ್ಟಿಯಾಗಿತ್ತು. ಮುಖದಲ್ಲಿ ಮಂದಸ್ಮಿತವಿತ್ತು.... ನಡಿಗೆಯಲ್ಲಿ ನಿರಾಳತೆ ಇತ್ತು.... ತನಗೆ ಅನ್ನಿಸಿದ್ದನ್ನು ಮಾಡಿದ ಒಂದು ವಿಚಿತ್ರ ಆನಂದ ಮೈಮನವನ್ನು ತುಂಬಿತ್ತು. ಇನ್ನು ಮುಂದೆ ತಾನು ಯಾರನ್ನೂ ಏನನ್ನೂ ಕೇಳಬೇಕಾಗಿಲ್ಲ. ಯಾರಾದರೂ ಏನನ್ನಾದರೂ ಹೇಳಿದರೆ, ಅವರು ಹೇಳಿದಂತೆ ಕೇಳಬೇಕಾಗಿಲ್ಲ.... ಇನ್ನು ಮುಂದೆ ನನಗಾಗಿ ನಾನು ಬದುಕಬೇಕು, ನನ್ನ ಇಷ್ಟದಂತೆ ಬದುಕಬೇಕು....

ಅವನನ್ನೇ ಎಲ್ಲರೂ ಕಾಯುತ್ತಿದ್ದಂತೆ ಅನ್ನಿಸಿತು. ಆದರೂ ಏನೂ ಅನ್ನಿಸಲಿಲ್ಲ. ಮಂಜುಳಳ ಕೈಗೆ ಪ್ರಸಾದದ ಚೀಲವನ್ನಿತ್ತ... "ಎಲ್ಲರಿಗೂ ಕೊಡಿ" ಎಂದ.

"ಓ, ದೇವಸ್ಥಾನಕ್ಕೆ ಹೋಗಿದ್ರಾ? ...ಹೇಳ್ಬಿಟ್ಟು ಹೋಗ್ಬಾರ್ದಾಗಿತ್ತಾ?" ಮಗಳು ಕೇಳಿದಾಗ, ಅವಳ ಕಡೆ ಸುಮ್ಮನೇ ನೋಡಿದ. ಮಂಜುಳಾ ಎಲ್ಲರಿಗೂ ಪ್ರಸಾದ ವನ್ನಿತ್ತು, ಕಲ್ಲು ಸಕ್ಕರೆಯ ಚೂರುಗಳನ್ನು ಸಮನಾಗಿ ಹಂಚಿದಳು.

"ಕಲ್ಲಿನ ಒಡವೆಗಳನ್ನು ದೇವರಿಗೆ ಒಪ್ಪಿಸಿ, ಈ ಕಲ್ಲು ಸಕ್ಕರೆಯನ್ನು ಪ್ರಸಾದವನ್ನಾಗಿ ತಂದಿದೀನಿ. ಅದು ಕಹಿ ವಿಷ; ಇದು ಸಿಹಿ ಸಕ್ಕರೆ..." ಎಂದು ಹೇಳಬೇಕೆಂದುಕೊಂಡರೂ, ತಾನೇಕೆ ಹೇಳಬೇಕು ಎಂದುಕೊಂಡು, ಮೌನವಾಗಿ ಎಲ್ಲರನ್ನೂ ನೋಡಿ, ಮಂದಹಾಸವನ್ನು ಬೀರಿದ. ಅವನ ಬದಲಾವಣೆ ಯಾರ ಗಮನಕ್ಕೂ ಬರಲಿಲ್ಲ.

ಆದರೆ, ಒಂದು ಅಚ್ಚರಿಯ ವಿಷಯವೆಂದರೆ, ಯಾರೂ, ಅವನನ್ನು

ಮತ್ತೆಂದೂ, ಆ ಓಲೆ ಮೂಗುಬೊಟ್ಟುಗಳನ್ನು ಕುರಿತು ವಿಚಾರಿಸಲಿಲ್ಲ. ಇವನೂ ಮತ್ತೆ ಎಂದೂ, ಅದರ ಪ್ರಸ್ತಾಪವೆತ್ತಲಿಲ್ಲ. ಅದೇನಾಯಿತೆಂದು ಯಾರಿಗೂ ಗೊತ್ತಾಗಲೇ ಇಲ್ಲ!!

* * * * *

## ಆದದ್ದೆಲ್ಲಾ ಒಳ್ಳೆಯದಕ್ಕೇ...

"ನಮಸ್ಕಾರ... ನಾನು ಶ್ರೀಹರಿ ಅಂತ" ಶ್ರೀಹರಿ ತನ್ನ ಪರಿಚಯವನ್ನು ಮಾಡಿಕೊಂಡ. ಶಾರದಾ ಅವನನ್ನು ಒಳಕ್ಕೆ ಆಹ್ವಾನಿಸಿದಳು.

"ಬನ್ನಿ, ನಾನು ಶಾರದಾ... ಶಂಕರ್‌ರವರ ಪತ್ನಿ"

"ಗೊತ್ತು ಗೊತ್ತು" ಶಾರದಾ ಆಶ್ಚರ್ಯವನ್ನು ಪ್ರಕಟಿಸಿದಳು. ಅಷ್ಟರಲ್ಲಿ ಒಳಗಿನಿಂದ ಶಂಕರ್ ನಿಧಾನವಾಗಿ ನಡೆದು ಬಂದ. ಶ್ರೀಹರಿ ಎದ್ದು ಅವನ ಕೈ ಕುಲುಕಿದ.

"ಕೂತ್ಕೋ ಶ್ರೀಹರಿ, ಹೇಗಿದೀಯ?" ಈಗ ಆಶ್ಚರ್ಯ ಪಡುವ ಸರದಿ ಅವನದಾಗಿತ್ತು.

"ನನ್ನ ಪರಿಚಯ ನಿಮಗಿದೆಯಾ?"

"ಹೂಂ... ಇಲ್ದೇ ಏನು? ನಾನ್ಯಾರು ಅಂತ ನಿಂಗೆ ಇನ್ನು ಗೊತ್ತಾಗ್ಲಿಲ್ಲ ಅಂತ ಕಾಣುತ್ತೆ"

"ಸಾರಿ ಗೊತ್ತಾಗ್ಲಿಲ್ಲ, ನೆನಪಿಗೆ ಬರ್ತಿಲ್ಲ" ಕಣ್ಣು ಮುಚ್ಚಿ, ನೆನಪಿಸಿಕೊಳ್ಳಲು ಪ್ರಯತ್ನಿಸಿ ಸೋತ.

"ನಾನು ಶಂಕ್ರೂ ಕಣೋ... ಗೋಪಾಲ ಮೇಷ್ಟ್ರ ಮೊಮ್ಮಗ" ಶ್ರೀಹರಿಯ ಮುಖ ಕಳೆಗುಂದಿತು, ಮೌನಿಯಾದ.

"ಯಾಕಪ್ಪಾ... ನನ್ನ ನೆನಪು ನಿನಗೆ ಇಷ್ಟವಾದಂತೆ ಅನ್ನಿಸಲಿಲ್ಲ"

"ಹಾಗೇನಿಲ್ಲ ಶಂಕ್ರೂ... ಯಾಕೆ ಗುರುತು ಸಿಗಲಿಲ್ಲ ಅಂತ ಯೋಚಿಸ್ತಿದ್ದೆ, ಹೇಗಿದೀಯ? ನೀನು ಇದೇ ಊರ್‍ನಲ್ಲಿ ಇದೀಯ ಅಂತ ನಂಗೆ ಗೊತ್ತಿರಲಿಲ್ಲ"

"ನಮಗೂ ನೀನು ಇದೇ ಊರ್‍ನಲ್ಲಿದ್ದೀಯ ಅಂತ ಗೊತ್ತಿರಲಿಲ್ಲ. ಆದರೆ ಫೋನಿನಲ್ಲಿ ನಿನ್ನ ಧ್ವನಿ ಕೇಳಿ ನೀನೇ ಅಂತ ಗೊತ್ತಾಯಿತು"

"ಆಗ್ಱೇ ಯಾಕೆ ಹೇಳಲಿಲ್ಲ?"

"ಹೇಳಿದ್ದಿದ್ರೆ ನೀನು ಇಲ್ಲೀ ತನಕ ಬರ್ತಿದ್ದೆಯಾ?" ಶಂಕರ ನಕ್ಕ, ಶ್ರೀಹರಿ ನಗಲಿಲ್ಲ. ಶಾರದಾ ಕಾಫಿಯನ್ನು ಬಿಸ್ಕತ್ತನ್ನು ತಂದಿತ್ತಳು. ಅವಳು ಅತ್ತ ಮರೆಯಾದ ಕೂಡಲೇ ಶ್ರೀಹರಿ ಪ್ರಶ್ನಿಸಿದ.

"ಯಾವಾಗ ನಿನ್ನ ಮದುವೆಯಾಯ್ತು? ಮದುವೇನೇ ಆಗೊಲ್ಲ ಅಂತ ಹೇಳಿದ್ದೆಯಲ್ಲ"

"ಹೌದು... ಆಗ ಹಾಗೆ ನಿರ್ಧರಿಸಿದ್ದೆ, ಆದರೆ, ಪರಿಸ್ಥಿತಿ ಹೀಗೆ ಒದಗಿ ಬಂದಾಗ, ಇವಳನ್ನು ಮದುವೆಯಾದೆ. ನನ್ನ ಮಗನಿಗೆ ಈಗ ಇಪ್ಪತ್ತೇಳು ವರ್ಷಗಳು. ನಿನಗೆ ಅವನ ವಿಷಯ ಗೊತ್ತಿರಬೇಕಲ್ಲ" ಶ್ರೀಹರಿ ತಲೆದೂಗಿದ.

"ನನ್ನ ಮಗಳಿಗೂ ಇಪ್ಪತ್ತೇಳು ವರ್ಷ. ಇಬ್ಬರೂ ಒಂದೇ ಕಡೆಯಲ್ಲಿ ಕೆಲಸ ಮಾಡ್ತಾರೆ. ಇಬ್ಬರೂ ಒಬ್ಬರನ್ನೊಬ್ಬರು ಪ್ರೀತಿಸ್ತಾರಂತೆ"

"ಹೂಂ... ನಂಗೂ ವಿಷಯ ತಿಳಿದಿದೆ"

"ಇದು ನನ್ನ ಮಗಳ ಫೋಟೋ... ನಿಮ್ಮಿಬ್ಬರಿಗೂ ಹಿಡಿಸಿದರೆ?"

"ನನ್ನ ಮಗನಿಗೆ ಹಿಡಿಸಿ ಆಗಿದೆಯಲ್ಲ. ಇನ್ನು ನಮ್ಮಿಬ್ಬರಿಗೆ ಹಿಡಿಬೇಕಾದ ಅಗತ್ಯ ಏನಿದೆ?" ಶಂಕರ ಪ್ರಶ್ನೆಯನ್ನು ಒತ್ತಿ ಕೇಳಿದ.

"ಹಾಗಲ್ಲ;

"ಇಬ್ಬರೂ ನಿರ್ಧರಿಸಿದ್ದಾರೆ, ಒಂದೇ ಮನೆಯಲ್ಲಿ ವಾಸ ಮಾಡುತ್ತಿದ್ದಾರಂತೆ. ಮದುವೆಯ ಸೀಲ್ ಒಂದು ಬೇಕಾಗಿದೆ. ಉಳಿದದ್ದು ಏನೂ ಇಲ್ಲ"

"ನೀನು ತಪ್ಪು ತಿಳಿದಿದೀಯ. ನನ್ನ ಮಗಳು ಅಂಥವಳಲ್ಲ"

"ನಾನೆಲ್ಲಿ ಹಾಗಂದೆ? ನನ್ನ ಮಗನೇ ನನಗೆ ಎಲ್ಲವನ್ನು ಇ-ಮೇಲ್‌ನಲ್ಲಿ ತಿಳಿಸಿದ್ದಾನೆ. ನೀನು ಬಂದು ಮಾತಾಡುವುದಾಗಿ ಅವನೇ ತಿಳಿಸಿದ್ದ"

"ಹಾಗಾದ್ರೆ ನಿಮ್ಮಿಬ್ಬರಿಗೂ ಒಪ್ಪಿಗೆ ಅಂತನ್ನು. ಮದುವೆ ಯಾವಾಗ ಇಟ್ಟುಕೊಳ್ಳೋಣ?"

"ನಿನಗೆ ನಮ್ಮ ಸಂಬಂಧ ಹಿಡಿಸಿದೆಯಾ ಶ್ರೀಹರಿ?" ಶ್ರೀಹರಿಯ ಮುಖ ಕಪ್ಪಿಟ್ಟಿತು.

"ಯಾಕೆ ಹೀಗೆ ಕೇಳ್ತಿದೀಯ?" ಶ್ರೀಹರಿ ಸಂಶಯದಿಂದ ಕೇಳಿದ.

"ಸುಮ್ಮನೇ ಕೇಳಿದೆ..." ಶಂಕರನ ವ್ಯಂಗ್ಯ ನಗೆ ಅವನಿಗೆ ಕಂಡಿತ್ತು.

"ಇಲ್ಲಿ ಫೋಟೋ ಇದೆ. ಜಾತಕ ಇದೆ. ತೋರಿಸುವುದಾದರೆ..."

"ಈಗ ಇದರ ಅವಶ್ಯಕತೆ ಏನಿದೆ? ಏನೂ ಬೇಡ" ಶ್ರೀಹರಿ ಮತ್ತೆ ತೆಗೆದಿಟ್ಟುಕೊಂಡ.

"ಹಾಗಾದ್ರೆ ಮುಂದೆ?"

"ಮದುವೆಗೆ ಸಿದ್ಧತೆಗಳನ್ನು ಮಾಡೋದು..."

"ನಿನಗೆ ಏನೂ ಬೇಸರವಿಲ್ವಾ ಶಂಕ್ರೂ?"

"ಇಲ್ಲ... ನನಗೆ ಏನೂ ಬೇಸರವಿಲ್ಲ..." ಹಾಗೆ ಮೇಲೆ ಹೇಳಿದರೂ, ಒಳಗೆ ಮನ ಸ್ವಲ್ಪ ಕಲಕಿತ್ತು. ಅದನ್ನು ಹೊರಗೆಡವಲಿಲ್ಲ.

*****

ಶಾರದಾ ಕ್ಲಿನಿಕ್‌ಗೆ ಹೊರಟು ಹೋಗಿದ್ದಳು. ಗಾರ್ಡನ್ನಿನ ಛೇರ್ ಮೇಲೆ ಕುಳಿತು ತಂಗಾಳಿಯ ಸೇವನೆ ಮಾಡುತ್ತಿದ್ದ. ಆದರೂ ಮನದೊಳಗೆ ಏನೋ ಧಗೆ! ಕೆಲವು ದಿನಗಳ ಹಿಂದೆ ಮಗ ಇ-ಮೇಲ್ ಮಾಡಿ ವಿಷಯವನ್ನು ತಿಳಿಸಿದ್ದ. ನಿಮ್ಮಿ ಎಂಬ ಹುಡುಗಿಯನ್ನು ಇಷ್ಟ ಪಟ್ಟಿರುವುದಾಗಿಯೂ, ಅವಳನ್ನೇ ಮದುವೆಯಾಗುವುದಾಗಿಯೂ ತಿಳಿಸಿದ್ದ. ಈ ವಿಷಯದಲ್ಲಿ ಗಂಡ ಹೆಂಡತಿಯರಲ್ಲಿ ಚರ್ಚೆ ನಡೆದಿತ್ತು.

"ನಿನ್ನ ಮಗ ಹೀಗೆ ಮಾಡ್ತಾನೆ ಅಂತ ನಾನಂದುಕೊಂಡಿರಲಿಲ್ಲ. ಓದುಕ್ಕೆ ಅಂತ ಹೋದ್ನೋ... ಪ್ರೀತಿಸೋಕೆ ಅಂತ ಹೋದ್ನೋ...?" ಶಂಕರ ಒದರಿದ್ದ.

"ಏನಾಯ್ತೀಗ... ಈ ವಯಸ್ನಲ್ಲಿ ಪ್ರೀತಿ ಪ್ರೇಮ ಎಲ್ಲಾ ಸಹಜ... ಅದೇನು ತಪ್ಪು... ಅವನ ಇಷ್ಟದಂತೆ ಮದುವೆ ಮಾಡಿ ಬಿಡೋಣ... ಎಲ್ಲಾ ಸರಿಹೋಗುತ್ತೆ"

"ಹಾಗಾದರೆ ನಮ್ಮ ಆಸೆ ಏನೂ ಇಲ್ಲವೆ?"

"ನಮ್ಮ ಆಸೆಗಳು ಬೇಕಾದಷ್ಟಿವೆ. ಆದರೆ ನಮಗೆ ಸಮಯವಿಲ್ಲ... ಅವನಿಗೆ ಬೇಕಾದವಳನ್ನು ಅವನೇ ಆರಿಸಿಕೊಂಡಿದಾನೆ. ಒಳ್ಳೇದೇ ಆಯ್ತು... ನಮ್ಮದೇನಿದೆ? ನಾವು ಗಂಡಿನವರು, ಎಲ್ಲಾ ಅವರದ್ದು" ಸಹನೆಯಿಂದ ಹೇಳಿದಳು.

"ಎಷ್ಟು ಸುಲಭವಾಗಿ ಹೇಳ್ತೀಯಲ್ಲ ಶಾರದಾ... ನಿನಗೆ ಏನೂ ಅನ್ನಿಸೊಲ್ವಾ?"

"ಅದನ್ನೆಲ್ಲಾ ಯೋಚಿಸೊಕ್ಕೆ ನನಗೆ ಬಿಡುವಿಲ್ಲ. ನೀವೂ ಯೋಚಿಸಬೇಡಿ. ನಿಮ್ಮ ಹೆಲ್ತ್ ಕೆಡುತ್ತೆ ಅಷ್ಟೇ..." ಶಾರದಾ ಕೈಯಲ್ಲಿ ಪುಸ್ತಕ ಹಿಡಿದು ಕುಳಿತಳು. ಶಂಕರ ಸರಿಯಾಗಿ ಮಲಗಿದ. ಮಲಗಿದ್ದ ಗಂಡನ ಕಡೆಗೆ ಒಮ್ಮೆ ನೋಡಿ ಶಾರದಾ ತಲೆ ಕೊಡಹಿದಳು. ಅವಳ ಮನಸ್ಸು ಕ್ಷುಬ್ಧಗೊಂಡಿತ್ತು.

ತಾಯಿಗೆ ಫೋನು ಮಾಡಿ, ಈ ಮೊದಲೇ ಮಗ ತನ್ನ ಫಿಯಾನ್ಸಿಯ ಬಗ್ಗೆ ತಿಳಿಸಿದ್ದ. ಮಮ್ಮೀ... ಅವಳ ಹೆಸರು ನಿಮ್ಮೀ ಅಂತ... ಪ್ರೆಟ್ಟಿ ಗರ್ಲ್. ಇಂಟರ್‌ನೆಟ್‌ನಲ್ಲಿ ಅವಳ ಫೋಟೋ ಅಟ್ಯಾಚ್ ಮಾಡಿದೀನಿ... ನೀನೇ ನೋಡು... ಯೂ ವಿಲ್ ಅಪ್ರಿಷಿಯೇಟ್ ಹರ್ ವೆರಿ ಮಚ್... ಐ ಆಮ್ ಶೂರ್..."

ಫೋಟೋದಲ್ಲಿ ಬರೀ ಅವಳೊಬ್ಬಳೇ ಇರಲಿಲ್ಲ. ಅವಳ ಹೆಗಲ ಮೇಲೆ ಕೈ ಹಾಕಿ ನಿಂತ ಮಗನೂ ಇದ್ದ. ಸ್ಕರ್ಟ್, ಸ್ಲೀವ್‌ಲೆಸ್ ಟಾಪ್ ಧರಿಸಿ, ಕೂದಲನ್ನು ಎತ್ತಿ ಕಟ್ಟಿದ್ದ ಹುಡುಗಿ, ಸ್ಕೂಲಿಗೆ ಹೋಗುವ ಹುಡುಗಿಯಂತೆಯೇ ಕಂಡಳು. ಅವಳ ಹೆಗಲ ಮೇಲೆ, ಸಲುಗೆಯಿಂದ ಕೈ ಹಾಕಿ ನಿಂತಿದ್ದ ಮಗನ ಭಂಗಿ. ಅವರಿಬ್ಬರ ಗೆಳೆತನ ಎಷ್ಟು ಮುಂದುವರೆದಿದೆ ಎನ್ನುವುದನ್ನು ತೋರಿಸಿತ್ತು.

ನಿಟ್ಟುಸಿರುಬಿಟ್ಟಳು. ಅವಳಿಗೆ ನಿರಾಸೆಯಾಗಿತ್ತು. ಒಬ್ಬನೇ ಮಗ... ಹೊತ್ತಿದ್ದು ನಾನು, ಹೆತ್ತಿದ್ದು ನಾನು, ಹಾಲುಡಿಸಿ ಬೆಳೆಸಿದ್ದು ನಾನು... ಅವನ ಓದು ಬರಹ, ವಿದ್ಯಾಭ್ಯಾಸಕ್ಕೆ ತಾನು ಗಮನ ಕೊಡುತ್ತಿದ್ದುದೂ ಸುಳ್ಳಲ್ಲ. ಮಗನನ್ನು ಮುಂದಕ್ಕೆ ತರಬೇಕೆಂಬ ಹಂಬಲ... ಖರ್ಚು ವೆಚ್ಚ ಸಹ ತನ್ನದೇ... ಮಗ ಡಾಕ್ಟರಾಗಲಿ ಎಂಬ ಆಸೆ ತನಗೆ. ಆದರೆ ಅವನ ಒಲವು ಇಂಜಿನಿಯರಿಂಗ್ ಕಡೆ. ಬಲವಂತ ಮಾಡಿ ಓದಿಸಲಾಗುವುದಿಲ್ಲ ಎಂದುಕೊಂಡು ಅವನ ಇಚ್ಛೆಗೆ ಬಿಟ್ಟಿದ್ದಾಗಿತ್ತು. ನಂತರ ಹೈಯರ್ ಸ್ಟಡೀಸ್‌ಗೆಂದು ವಿದೇಶಕ್ಕೆ ಹೊರಡುವ ಇಚ್ಛೆಯನ್ನು ಪ್ರಕಟಿಸಿದ. ಅದಕ್ಕೂ ವ್ಯವಸ್ಥೆ ಮಾಡಿದಳು. ಗಂಡ ಬೇಡ ಎಂದಿದ್ದ.

"ಹೋಗಿ ಬರಲಿ ಬಿಡಿ... ಬೇಡ ಅಂತ ಯಾಕೆ ಅಂತೀರಿ? ಅವನಿಗೆ ಆಸಕ್ತಿ ಇದೆ. ನಮಗೆ ಅನುಕೂಲವಿದೆ..." ಗಂಡನನ್ನು ಒಪ್ಪಿಸಿದ್ದಳು. ಎಂ.ಎಸ್. ಮಾಡಿದ ನಂತರ ಅಲ್ಲಿಯೇ ಕೆಲಸಕ್ಕೆ ಸೇರಿದ್ದ. ಈಗ ಇದು... ಮದುವೆಗೆ ಅರ್ಜೆಂಟೇನಿತ್ತು? ತಾನು ಹುಡುಕಿ ಮಾಡುತ್ತಿರಲಿಲ್ಲವೇ? ಮಗ ಇಂಜಿನಿಯರ್ ಆದರೇನಾಯ್ತು? ಸೊಸೆಯಾದರೂ ಡಾಕ್ಟರಾಗಲಿ ಎಂಬ ಆಸೆ... ಆಸೆಯಾಗಿಯೇ ಉಳಿದು ಬಿಟ್ಟಿತ್ತು. ನಾವು ಬೇಡ ಅನ್ನಲಿ; ಬೇಕು ಅನ್ನಲಿ... ಅವರಿಬ್ಬರಂತೂ ಒಟ್ಟಿಗೇ ವಾಸ ಮಾಡುತ್ತಿದಾರೆ. ಇನ್ನೇನು ಉಳಿದಿದೆ?..." ಮನದಲ್ಲಿ ಏನೋ ಕೊರತೆ.

*****

ಶ್ರೀಹರಿ ವಾಸಂತಿ ದಂಪತಿಗಳಿಗೆ, ನಿರ್ಮಲ ಸ್ವಂತ ಮಗಳಲ್ಲ. ತಂಗಿಯ ಮಗಳನ್ನು ಶ್ರೀಹರಿ ತಾನೇ ಸಾಕಿಕೊಂಡಿದ್ದ. ನಿರ್ಮಲ ತಾನು ಶಶಾಂಕನನ್ನು ಪ್ರೀತಿಸುತ್ತಿರುವುದಾಗಿಯೂ ಅವನನ್ನೇ ಮದುವೆಯಾಗುವುದಾಗಿ ಹಠ ಹಿಡಿದಾಗ, ಶ್ರೀಹರಿ ಈ ವಿಷಯವನ್ನು ತನ್ನ ತಂಗಿ ವಿಮಲಳಿಗೆ ತಿಳಿಸಿದ. ವಿಮಲ ಮೊದಲಿಗೆ, ಚಿಂತಿತಳಾದರೂ ನಂತರ ತನ್ನ ಒಪ್ಪಿಗೆಯನ್ನು ಸೂಚಿಸಿದ್ದಳು. "ಶಶಾಂಕನ ಮನೆಯವರ ಹತ್ತಿರ ಮಾತನಾಡಿ, ಮದುವೆಯ ದಿನವನ್ನು ಗೊತ್ತು ಮಾಡು... ಇಬ್ಬರೂ ಒಟ್ಟಿಗೇ ವಾಸವಾಗಿದ್ದಾರೆಂದ ಮೇಲೆ ಅವರ ಸಂಬಂಧ ಗಂಡ ಹೆಂಡತಿಯರಾಗಿ ಮುಂದುವರೆದರೇ ಒಳ್ಳೆಯದು ಅಂತ ನನ್ನ ಅಭಿಪ್ರಯ" ಅಂತ ನುಡಿದಿದ್ದಳು. ಉದಾಸೀನದಿಂದ.

"ನನ್ನ ಅಭಿಪ್ರಾಯವೂ ಅದೇ. ನನಗೆ ಒಂದ್ಮಾತು ಹೇಳಲಿಲ್ಲ ಅಂತ ನೀನು ಆಕ್ಷೇಪಿಸಬಾರದು ಅಂತ ನಿನಗೆ ಹೇಳಿದೆ. ಇಂಥ ವಿಷಯಗಳು ಸಂಬಂಧವನ್ನೇ ಕೆಡಿಸಿಬಿಡುತ್ತವೆ" ಶ್ರೀಹರಿ ನುಡಿದಾಗ, ವಿಮಲ ಕತ್ತು ತಗ್ಗಿಸಿದಳು. ವಿಮಲಳಿಗೆ ತನ್ನ ಕಾಲೇಜಿನ ದಿನಗಳು ನೆನಪಿಗೆ ಬಂದಿದ್ದವು. ತಾನು ಪ್ರೀತಿಸಿದ್ದವನನ್ನು ನೆನೆಪಿಸಿಕೊಂಡಳು. ಅವನು ತನ್ನನ್ನು ನಿರಾಕರಿಸಿದ್ದ ದಿನ, ತಾನು

ಆತ್ಮಹತ್ಯೆಗೆ ಪ್ರಯತ್ನಿಸಿದ್ದು ನೆನಪಿಗೆ ಬಂತು. ಈ ಸಮಯದಲ್ಲಿ ಪ್ರಭಾಕರ ತನ್ನ ಬಾಳಿನಲ್ಲಿ ಪ್ರವೇಶಿಸದೇ ಇದ್ದಿದ್ದರೇ... ಈ ದಿನ ತಾನು ಈ ಪ್ರಪಂಚದಲ್ಲೇ ಇರುತ್ತಿರಲಿಲ್ಲ. ಆದರೂ, ಏನೋ ವ್ಯಥೆ, ಏನೋ ದುಗುಡ... ತಾನು ಪ್ರೀತಿಸಿದ್ದವನು, ತನ್ನನ್ನು ಮದುವೆಯಾಗಲಿಲ್ಲ, ತಾನು ಮದುವೆಯಾದವನನ್ನು ತಾನು ಪ್ರೀತಿಸಲಾಗುತ್ತಿಲ್ಲ. ಆದರೂ ಸೃಷ್ಟಿ ನಿಯಮ ಎಂಬಂತೆ ಮಕ್ಕಳು ಹುಟ್ಟಿದವು. ನಿರ್ಮಲ ಹುಟ್ಟಿದ ದಿನಗಳು ನೆನಪಾದವು. ಬಸಿರಲ್ಲಿ ಮಗುವು ಮಿಸಕಾಡುವ ವರೆಗೂ, ಭ್ರೂಣವನ್ನು ಕರಗಿಸುವ ಪ್ರಯತ್ನಗಳನ್ನು ಮಾಡಿದಳು. ನಂತರವೂ ಮಗುವಿನ ಬಗ್ಗೆ ವಿಶೇಷ ಮಮಕಾರ ಬೆಳೆದಿರಲಿಲ್ಲ. ಈ ವಿಷಯದ ಅರಿವಾದದ್ದು ವಿಮಲಳ ತಾಯಿಗೆ... ಅವಳ ಖಿನ್ನತೆ... ಅವಳ ಉದಾಸೀನ ತಾಯಿಗೆ ಆತಂಕವನ್ನುಂಟುಮಾಡಿತ್ತು. ಈ ವಿಷಯ ಶ್ರೀಹರಿಗೂ, ಅವಳ ಗಂಡ ಪ್ರಭಾಕರನಿಗೂ ತಿಳಿಯಿತು. ಹೆರಿಗೆ ಆದ ಮೇಲೆ, ಮಗುವನ್ನು ಅವಳ ತಾಯಿಯೇ ನೋಡಿಕೊಳ್ಳುತ್ತಿದ್ದರು. ಶ್ರೀಹರಿಯ ಪ್ರೀತಿಯ ಕೂಸಾಗಿ ಬೆಳೆದಳು ನಿರ್ಮಲ. ವಿಮಲ ನಿರಾತಂಕವಾಗಿದ್ದುದು ಎಲ್ಲರಿಗೂ ಆಶ್ಚರ್ಯವನ್ನುಂಟುಮಾಡಿತ್ತು. ಆ ನಂತರ ವಿಮಲಳಿಗೆ ಯಾವ ಆಸಕ್ತಿ ಇಲ್ಲದಿದ್ದರೂ, ಇಬ್ಬರು ಗಂಡು ಮಕ್ಕಳು ಹುಟ್ಟಿದರು. ಈಗ ವಿಮಲ ಸ್ವಲ್ಪ ಮಟ್ಟಿಗೆ ಹಳೆಯ ದಿನಗಳನ್ನು ಮರೆತಳು. ಗಂಡು ಮಕ್ಕಳನ್ನು ಪ್ರೀತಿಯಿಂದ ಸಾಕಿದಳು.

*****

"ಶ್ರೀಹರಿ ಹೇಳ್ದ... ತಾನೇ ಗಂಡನನ್ನು ಆಯ್ಕೆ ಮಾಡಿಕೊಂಡಿದಾಳಂತೆ ನಮ್ಮ ಮಗಳು. ನನಗೆ ಸರಿ ಅನ್ನಿಸ್ತಿಲ್ಲ" ಪ್ರಭಾಕರ ಹೆಂಡತಿಗೆ ಹೇಳಿದ.

"ಏನಾದರೂ ಮಾಡ್ಕೊಳ್ಳಲಿ, ಅವಳು ನಮ್ಮ ಮಗಳಲ್ಲ"

"ಏನ್ಮಾತಾಡ್ತೀ ವಿಮ್ಮು... ನಿಮ್ಮಿ ನಮ್ಮ ಮಗಳು... ಶ್ರೀಹರಿಗೆ ಹುಟ್ಟಿದವಳಲ್ಲ. ಅವಳ ಹಕ್ಕು ನಮ್ಮದು. ಅವಳನ್ನು ಅವನ ವಶಕ್ಕೆ ಕೊಟ್ಟು ತಪ್ಪು ಮಾಡಿದೆವು ನಾವು"

"ಇಲ್ಲ ತಪ್ಪೇನಾಗಿಲ್ಲ. ಎಲ್ಲಾ ಸರಿಯಾಗಿಯೇ ಇದೆ"

"ಈಗಲೂ ಅವಳನ್ನ ಯಾಕೆ ಅಷ್ಟು ದ್ವೇಷಿಸ್ತೀಯಾ? ಅವಳು ಹೆಣ್ಣಾಗಿ ಹುಟ್ಟಿದ್ದು ತಪ್ಪೇ... ನಾನು ಒಪ್ಪಬಾರದಾಗಿತ್ತು ಅಂತ ಈಗ ಅನ್ನಿಸ್ತಿದೆ... ನಮ್ಮ ಮಗಳನ್ನು ನಮ್ಮ ಬಳಿಯೇ ಇಟ್ಟುಕೊಳ್ಳಬೇಕಾಗಿತ್ತು"

"ಪ್ಲೀಸ್... ಈ ವಿಷಯದಲ್ಲಿ ಚರ್ಚೆ ಬೇಡ... ಶ್ರೀಹರಿ ಅವಳನ್ನು ಚೆನ್ನಾಗಿಯೇ ಬೆಳೆಸಿದಾನೆ. ನಾನು ಕೂಡಾ ಹಾಗೆ ಬೆಳೆಸುತ್ತಿರಲಿಲ್ಲ. ಅತ್ತಿಗೆ ಅಷ್ಟು ಚೆನ್ನಾಗಿ ನೋಡಿಕೊಂಡಿದಾರೆ"

"ಇರಬಹುದು, ವಿಮ್ಮು.. . ಆದರೆ ನಿಮ್ಮಿಯ ಬಗ್ಗೆ ಒಂದು ಮಾತನಾಡುವ

ಸ್ವಾತಂತ್ರ್ಯವೂ ನಮಗಿಲ್ಲವಲ್ಲ"

"ಇಲ್ಲ... ಬೇಡ ಬಿಡಿ..."

"ನೀನ್ಯಾಕೆ ಹೀಗೆ ಮಾತಾಡ್ತೀಯೋ... ನೀನೊಬ್ಬಳು ವಿಚಿತ್ರ ಹೆಂಗಸು..."

"ನನ್ನನ್ಯಾಕೆ ಮದುವೆಯಾದ್ರಿ?... ನನ್ನನ್ನಯಾಕೆ ಉಳಿಸಿದಿರಿ?..."

"ಅದಕ್ಕೆ ಈ ಶಿಕ್ಷೇನಾ?..."

"ಶಿಕ್ಷೆ ಅಂತ ಯಾಕೆ ಅಂದುಕೊಳ್ತೀರಿ? ಅದಕ್ಕೆ ಬೇರೆ ಕಾರಣಗಳಿವೆ..."

"ಏನು ಕಾರಣ ಅಂತ ನಂಗೂ ಗೊತ್ತು... ಆದರೆ ಅದು ನಿಜವಲ್ಲ"

"ನಿಜವೋ ಸುಳ್ಳೋ ಅಂತ ನಂಗೆ ಗೊತ್ತು. ನಿಮಗೆ ಹೇಗೆ ಗೊತ್ತಾಗುತ್ತೆ?"

"ನಿನ್ನ ಹತ್ರ ವಾದ ಮಾಡಿ ಪ್ರಯೋಜನವಿಲ್ಲ, ನಾನು ಸೋತೆ. ಆದರೆ ನಿಮ್ಮಿ ಬಾಳು ಮಾತ್ರ ಹಾಳಾಗಬಾರದು. ಹಾಗೇನಾದ್ರೂ ಆದ್ರೆ ನಾನು ನಿನ್ನ ಅಣ್ಣ ಅತ್ತಿಗೆಯರನ್ನು ಸುಮ್ಮನೆ ಬಿಡೋಲ್ಲ" ಪ್ರಭಾಕರ ರೋಷದಿಂದ ಎದ್ದು ಹೋಗಿದ್ದ.

*****

ಮದುಮಕ್ಕಳಿಬ್ಬರೂ ಕೈ ಕೈ ಹಿಡಿದು, ಏರ್‌ಪೋರ್ಟ್‌ನಿಂದ ಹೊರ ಬಂದರು. ಅವರಿಬ್ಬರಿಗಾಗಿ ಕಾಯುತ್ತಾ ನಿಂತಿದ್ದ ಶಂಕರ, ಶ್ರೀಹರಿ ಪರಸ್ಪರ ಮುಖ ಮುಖ ನೋಡಿಕೊಂಡರು. ನಿಮ್ಮಿ ಓಡಿ ಬಂದು ಶ್ರೀಹರಿಯನ್ನು ತಬ್ಬಿಕೊಂಡಳು. ಅವನು ಅವಳ ತಲೆ ನೇವರಿಸಿದ. ಶಶಾಂಕ, ಶಂಕರನ ಕಡೆ ಕೈಯಾಡಿಸಿ "ಹಾಯ್ ಡ್ಯಾಡ್... ಮಮ್ಮಿ ಬರ್ಲಿಲ್ವಾ? ಅಂತ ಕೇಳಿದ. ಶಂಕರ ಇಲ್ಲ ಎನ್ನುವಂತೆ ತಲೆಯಾಡಿಸಿ, ತನ್ನ ಸೊಸೆಯಾಗುವವಳ ಮುದ್ದು ಮುಖವನ್ನೇ ನೋಡಿದ.

"ನಿಮ್ಮೀ... ಇವರು ನಮ್ಮ ತಂದೆ..." ಶಶಾಂಕ ಪರಿಚಯಿಸಿದ.

"ಹಲೋ... ಅಂಕಲ್..."

"ನಮಸ್ಕಾರ ಮಾಡು..." ಶಶಾಂಕ ಸಂಜ್ಞೆ ಮಾಡಿದ. ಅವಳು ಕೈ ಮುಗಿದು "ನಮಸ್ಕಾರ ಅಂಕಲ್" ಎಂದಳು. ಶಶಾಂಕ ಹಣೆ ಚಚ್ಚಿಕೊಂಡ. ಇಬ್ಬರೂ ನಕ್ಕರು.

"ಇರಲಿ ಬಿಡು, ಏರ್‌ಪೋರ್ಟಿನಲ್ಲಿ ಆ ಸಂಪ್ರದಾಯಗಳೆಲ್ಲ ಏಕೆ?" ಶಂಕರನೆಂದ ಎಲ್ಲರೂ ಅಲ್ಲಿಂದ ಹೊರಬಿದ್ದರು.

*****

"ನಿಮ್ಮೀನ ನಮ್ಮ ಮನೆಗೆ ಕರ್ಕೊಂಡು ಹೋಗ್ತಿನಿ ಅಂಕಲ್... ಮಮ್ಮಿಗೆ ತೋರಿಸ್ಬೇಕು" ಶಶಾಂಕನೆಂದಾಗ, ಶ್ರೀಹರಿ ಮಿಕಿ ಮಿಕಿ ನೋಡಿದ.

"ಇವತ್ತು ಬೇಡ ಶಶಾಂಕ್, ನಿಮ್ಮಿಬ್ಬರ ಎಂಗೇಜ್‌ಮೆಂಟ್ ಆಗಿದೆ.

ವಾರದೊಳಗೆ ಮದುವೆಯೂ ಆಗುತ್ತೆ. ಆಮೇಲೆ ಸಾಂಪ್ರದಾಯಕವಾಗಿ ಮನೆ ತುಂಬಿಸಿಕೊಳ್ಳೋಣ" ಶಶಾಂಕ. ನಿಮ್ಮಿಯ ಕೈ ಚಿವುಟಿ ನಕ್ಕ.

"ಹೌದು... ಶಶಾಂಕ್. ಇನ್ನು ಕೆಲವೇ ದಿನ. ಈಗ ನಮ್ಮ ನಮ್ಮ ಮನೆಗೆ ಹೋಗೋಣ..." ನಿಮ್ಮಿ ನುಡಿದಾಗ. ಶಶಾಂಕ ಅವಳ ಬೆನ್ನ ಮೇಲೆ ಏಟು ಹಾಕಿದ.

"ಡ್ಯಾಡೀನ ಕಂಡ ಕೂಡ್ಲೇ... ನಾನು ದೂರ ಆಗಿ ಬಿಟ್ನಾ?"

"ದೂರ ಎಲ್ಲಿ? ಈಗ ನಾಲ್ಕು ದಿನ ಪೇರೆಂಟ್ಸ್ ಜೊತೆ... ಪ್ಲೀಸ್" ನಿಮ್ಮಿ ರಾಗ ಎಳೆದಳು. ಶಶಾಂಕ ಅವಳನ್ನು ತನಗೆ ಒತ್ತಿಕೊಂಡು ನುಡಿದ.

"ಓ.ಕೆ... ಡಾರ್ಲಿಂಗ್... ನಿನ್ನ ಇಷ್ಟ... ಆದರೆ ನಾಳೆ ನೀನು ನನ್ನ ಜೊತೆ ಷಾಪಿಂಗ್‌ಗೆ ಬರ್ತಿದೀಯ ದಟ್ಸಾಲ್... ಬೈ ಬೈ..." ಕೈಯಾಡಿಸಿ ಟ್ಯಾಕ್ಸಿಯನ್ನೇರಿದ. ನಿಮ್ಮಿ ಶ್ರೀಹರಿಯ ಕಾರು ಇದ್ದೆಡೆಗೆ ನಡೆದಳು.

ಶಂಕರನಿಗೆ, ಮಗನೊಡನೆ ಮಾತನಾಡುವುದಕ್ಕೆ ಯಾವ ವಿಷಯವೂ ಇಲ್ಲ ಎನ್ನುವಷ್ಟು ಮೌನ ಆವರಿಸಿಕೊಂಡಿತು. ಸೊಸೆಯಾಗುವವಳ ಬಗ್ಗೆ ಚಿಂತಿಸುತ್ತಿದ್ದ. ಪ್ಯಾಂಟು, ಟಾಪ್, ಧರಿಸಿ ತಲೆಗೂದಲನ್ನು ಕತ್ತರಿಸಿ, ಹೈ ಹೀಲ್ಡ್ ಷೂಗಳನ್ನು ಧರಿಸಿ ಆಧುನಿಕ ಹಾವಭಾವಗಳೊಡನೆ, ಹಿರಿಯರ ಎದುರಿಗೇ, ಸಲುಗೆಯಿಂದ ಮಾತುಗಳನ್ನಾಡುತ್ತಾ, ಖುಷಿ ಖುಷಿಯಾಗಿದ್ದವಳ ಬಗ್ಗೆ ಯಾವ ಮಧುರ ಭಾವನೆಗಳೂ ಹುಟ್ಟಲಿಲ್ಲ. ನಮ್ಮ ಕಾಲಕ್ಕೂ ಈ ಕಾಲಕ್ಕೂ ಅಜಗಜಾಂತರ... ಶಾರದಂಗೆ ಈ ಸೊಸೆ ಹಿಡಿಸುವಳೋ ಇಲ್ಲವೋ... ಮನಸ್ಸು ತನ್ನ ಕಾಲಕ್ಕೆ ಹಿಂದಕ್ಕೆ ಓಡಿತ್ತು.

ನಿಮ್ಮಿ ಪಟಪಟನೆ ಮಾತನಾಡುತ್ತಿದ್ದಳು, ಶ್ರೀಹರಿ ಕೇಳಿಸಿಕೊಳ್ಳುತ್ತಿದ್ದ. ಆದರೂ ಅವನ ಮನಸ್ಸು ಬೇರೆಲ್ಲೋ... ಇವರಿಬ್ಬರೂ ಮದುವೆಯಾಗಿ ಎಷ್ಟೋ ವರ್ಷಗಳು ಕಳೆದವರಷ್ಟೇ ಸಲುಗೆಯಿಂದ ಇದಾರೆ... ಎಂಗೇಜ್‌ಮೆಂಟ್ ಆಗಿದೆ. ದಿನವನ್ನು ನಿಶ್ಚಯಿಸಿದ್ದಾಗಿದೆ. ಬೇಗ ಬೇಗ ದಿನಗಳು ಕಳೆದು, ಮದುವೆ ಮುಗಿದು ಇಬ್ಬರೂ ಹಿಂತಿರುಗಿ ಹೊರಟು ಹೋದರೆ... ಆಗ ನಿಶ್ಚಿಂತೆ. ಇಲ್ಲದಿದ್ದರೇ... ವಿಮಲನ್ನ ಮದುವೆಗೆ ಬರಬೇಡ ಅಂತ ಹೇಗೆ ಹೇಳುವುದು? ಶಶಾಂಕ, ಶಂಕರನ ಮಗ ಅಂತ ತಾನು ಇನ್ನು ಅವಳಿಗೆ ತಿಳಿಸಿಲ್ಲ... ತಿಳಿದರೆ ಹೇಗೋ? ತಿಳಿಯದಿದ್ದರೆ ಹೇಗೋ?

ಮದುವೆಯ ಸಿದ್ಧತೆಗಳೆಲ್ಲ ಮುಗಿದಿದ್ದವು. ಷಾಪಿಂಗ್‌ಗೆಂದು ಹೋಗಿದ್ದ ಶಶಾಂಕ, ತಾಯಿಗೆ ಫೋನು ಮಾಡಿದ್ದ.

"ಮಮ್ಮೀ, ನಿಮ್ಮಿ ನಿನ್ನನ್ನ ಮೀಟ್ ಮಾಡ್ಬೇಕು ಅಂತಾಳೆ. ಕ್ಲಿನಿಕ್‌ಗೆ ಕರ್ಕೊಂಡು ಬರ್ತಾ ಇದೀನಿ" ಶಾರದಾ ಬೇಡ ಎನ್ನಲಾಗದೇ 'ಹೂಂ'

ಇಲ್ಲವಲ್ಲ. ಅದಕ್ಕೂ ನಾನು ಅರ್ಹನಲ್ಲ ಅಲ್ವಾ?"

"ಪ್ಲೀಸ್... ಪ್ರಭಾಕರ್, ಪದೇ ಪದೇ ಈ ರೀತಿಯ ಮಾತುಗಳನ್ನಾಡಿದರೆ ನನ್ನ ತಲೆ ಸಿಡಿದು ಹೋಗುವಷ್ಟು ನೋಯುತ್ತೆ. ನೀವು ನನ್ನನ್ನು ನಿಜವಾಗಿಯೂ ಪ್ರೀತಿಸುವುದಾದರೆ, ಇನ್ನೆಂದೂ ಇಂಥ ಪ್ರಶ್ನೆಗಳನ್ನು ಕೇಳಲೇ ಬೇಡಿ..." ಪ್ರಭಾಕರ ರೂಮಿನಿಂದ ಆಚೆ ಬಂದ. ವಾಸಂತಿಗೆ ಅವರಿಬ್ಬರ ಮಾತು ಸ್ವಲ್ಪ ಸ್ವಲ್ಪ ಕೇಳಿಸಿತ್ತು. ಗಂಡನನ್ನು ಹುಡುಕಿಕೊಂಡು ಹೊರಟಳು.

*****

"ನಿಮ್ಮ ಭಾವಂಗೇನು ಬುದ್ಧಿ ಇಲ್ವಾ? ಈಗ ಇಷ್ಟು ವರ್ಷಗಳ ಮೇಲೆ, ಎಲ್ಲರಿಗೂ ಕೇಳಿಸುವಂತೆ, ನಿಮ್ಮಿ... ನಿಮ್ಮಿ... ಅಂತ ಹೇಳಿಕೊಳ್ತಾರಲ್ಲ, ಬಾಯ್ಮುಚ್ಚಿಕೊಂಡು ಇರುವಂತೆ ಹೇಳಿ"

"ಏನಾಯ್ತು ಈಗ?" ಶ್ರೀಹರಿ ಸಮಾಧಾನದಿಂದ ಕೇಳಿದ.

"ನಾನು ಆಗ್ಲೇ ಹೇಳಿದೆ, ಈ ಹುಡುಗಿಯ ಸಹವಾಸಬೇಡ. ನಿಮ್ಮ ತಂಗಿಯ ಮನೇಲಿ ಬಿಟ್ಟು ಬನ್ನಿ ಅಂತ. ಇದೆಲ್ಲಾ ಕಿತಾಪತಿ ನಿಮ್ಮ ಅಮ್ಮಂದು. ಇಲ್ಲಿ ಕಿಚ್ಚು ಹೊತ್ತಿಸಿಬಿಟ್ಟು, ಅಲ್ಲಿ ಸ್ವರ್ಗದಲ್ಲಿ ಹಾಯಾಗಿದಾರೇನೋ?"

"ವಾಸಂತೀ... ಏನೇನೋ ಮಾತಾಡ್ಬೇಡ. ನಿಮ್ಮಿ ನಮ್ಮ ಮಗಳು. ನೀನು ಸಾಕಿದೀಯ... ನಾನು ಭಾವನ ಹತ್ರ ಮಾತಾಡ್ತೀನಿ. ನೀನು ಸುಮ್ನಿರು. ಇದನ್ನೇ ಒಂದು ದೊಡ್ಡ ರಂಪ ಮಾಡ್ಬೇಡ"

"ಮೊದಲು ಆ ಕೆಲಸ ಮಾಡಿ. ನಾನು ಏನಾದ್ರೂ ಆಡಿದ್ರೆ ಅದು ರಂಪ. ಅವರಿಗ್ಯಾಕೆ ಈಗ ಆಸಕ್ತಿ ಅಂತ ನನಗೆ ಅರ್ಥವಾಗ್ತಿದೆ. ನಿಮ್ಮಿ ಎಂಜಿನಿಯರ್ ಆಗಿದಾಳೆ. ವಿದೇಶದಲ್ಲಿ ಓದಿ, ಒಳ್ಳೆ ಕೆಲಸದಲ್ಲಿದಾಳೆ. ಸುಂದರವಾದ, ವಿದ್ಯಾವಂತ ಅಳಿಯ ಸಿಕ್ಕಿದಾನೆ. ಈಗ ಮಗಳ ಸಂಬಂಧ ಒತ್ತಿ ಒತ್ತಿಕೊಂಡು ಬರ್ತಿದೆ. ಆಗ ಎಲ್ಲಿ ಹೋಗಿತ್ತು ಈ ಬುದ್ಧಿ. ಅವರಿಗೆ ನಮ್ಮ ಮೇಲೆ ಹೊಟ್ಟೆ ಉರಿ..." ವಾಸಂತಿ ಕಿಡಿ ಕಾರಿದಳು.

"ಹಾಗೇನಿಲ್ಲ... ಅವರು ಒಳ್ಳೆಯವರೇ. ಇಲ್ದಿದ್ರೆ ವಿಮಲನ್ನ ಮದುವೆ ಆಗ್ತಿದ್ರಾ?... ನಾನು ಅವರ ಹತ್ರ ಮಾತಾಡ್ತೀನಿ. ಈಗ ನಿಮ್ಮಿ ಈ ಮನೆಯಿಂದ ಬೇರೆಯವರ ಮನೆಯ ಸೊಸೆಯಾಗಿ ಹೋಗ್ತಿದಾಳೆ. ಇನ್ನು ಮುಂದೆ ಅವಳು ಅವರ ಸ್ವತ್ತು. ಅವಳ ಮೇಲೆ ನಮಗ್ಯಾರಿಗೂ ಹಕ್ಕು ಇರುವುದಿಲ್ಲ..."

"ಹಸೆಮಣೆ ಮೇಲೆ ಕುಳಿತು ಧಾರೆ ಎರೆದುಕೊಡ್ತಾರಂತೆ. ಆ ಹಕ್ಕು ಅವರಿಗೆ ಹೇಗೆ ಸಿಗುತ್ತದೆ?"

"ಧಾರೆಯ ನೀರು ಯಾರು ಬೇಕಾದ್ರೂ ಎರೆಯಬಹುದು. ನಾನು

ಶಾಸ್ತ್ರಿಗಳ ಹತ್ರ ಮಾತಾಡ್ತೀನಿ. ನಾವೆಲ್ಲರೂ ಸೇರಿ ಧಾರೆ ಎರೆದುಕೊಡೋಣ. ಕನ್ಯಾದಾನದ ಪುಣ್ಯ ಎಲ್ಲರಿಗೂ ಸಿಗಲಿ. ಅದನ್ನೇಕೆ ಬೇಡ ಅಂತ ಅನ್ನೋಣ..."

"ಎಲ್ಲರ ಕೈಲೂ, ನಿಮ್ಮಿ ನಮ್ಮ ಮಗಳು ಅಂತ ಹೇಳಿಕೊಂಡು ಬಂದರೆ?... ನಾನು ಮಾಡಿದ್ದೆಲ್ಲಾ ವ್ಯರ್ಥವಾಗುತ್ತೆ. ನಿಮ್ಮಿಗೆ ನಾನು ಸ್ವಂತ ತಾಯಿಯಲ್ಲ ಅಂತ ತಿಳಿದರೆ, ಅದಕ್ಕಿಂತ ಅನರ್ಥ ಬೇಕಾ? ನಿಮ್ಮಿ, ಮೃದುಲಾ ಸ್ವಂತ ಅಕ್ಕ ತಂಗಿಯರಂತೆ ಬೆಳೆದಿದಾರೆ. ಈಗ ಅಲ್ಲೋಲ್ಲ ಕಲ್ಲೋಲವಾಗುತ್ತೆ." ವಾಸಂತಿಯ ಕಣ್ಣುಗಳಲ್ಲಿ ನೀರು ಇಳಿಯಿತು.

"ಹಾಗೇನೂ ಆಗೊಲ್ಲ... ನೀನು ಅಳಬೇಡ"

"ಇದರ ಬದಲು ನಿಮ್ಮಿ-ಶಶಾಂಕ, ಅಲ್ಲೇ ಮದುವೆಯಾಗಿ ಬಂದು ಇಲ್ಲಿ ರಿಸೆಪ್ಷನ್ ಇಟ್ಟುಕೊಂಡಿದ್ದರೆ ಚೆನ್ನಾಗಿರ್ತಿತ್ತು... ಈಗಲೂ ಹಾಗೇ ಮಾಡಿ. ಯಾವ ಕಲಾಪವೂ ಬೇಡ..."

"ಹಾಗ್ಹೇಗೆ ಆಗುತ್ತೆ ವಾಸಂತಿ? ಶಶಾಂಕನ ತಂದೆ ತಾಯಿ, ನೆಂಟರಿಷ್ಟರು ಏನಂದುಕೊಳ್ತಾರೆ?"

"ನಾನು ಶಾರದಮ್ಮನ ಹತ್ರ ಮಾತಾಡ್ತೀನಿ... ಅಥವಾ ನೀವೇ ಆಡಿ"

"ನಾನೇ ಆಡ್ತೀನಿ, ನೀನು ಚಿಂತಿಸ್ಬೇಡ" ಎಂದು ಸಮಾಧಾನ ಹೇಳಿದ.

*****

"ಭಾವ, ಶಶಾಂಕನ ಮನೆಗೆ ಹೊರಟಿದೀನಿ. ನೀವೂ ಬರ್ತೀರೇನು?" ಶ್ರೀಹರಿ ಕೇಳಿದಾಗ, ಪ್ರಭಾಕರ ಅವನೊಂದಿಗೆ ಹೊರಟ.

"ವಿಮಲನ್ನೂ ಕರ್ಕೊಂಡು ಹೋಗೋಣ. ಆಗಲಾದ್ರೂ ಅವಳಿಗೆ ಮಗಳು ಎಂಥೋರ ಮನೆ ಸೇರ್ತಿದಾಳೆ ಅನ್ನೋ ಆಸಕ್ತಿ ಕೆರಳಬಹುದು"

"ಬೇಡ ಭಾವ, ಅವಳಿಗೆ ಇಷ್ಟವಿಲ್ಲದಿದ್ರೆ ನೀವು ಬಲವಂತ ಮಾಡಬೇಡಿ. ಸುಮ್ಮನೇ ಹಗರಣ ಆಗುತ್ತೆ"

"ಅಲ್ಲಾ, ನೀವೇ ಹೇಳಿ ಶ್ರೀಹರಿ, ನಿಮ್ಮಿ ನಮ್ಮ ಮಗಳೇ ತಾನೇ, ಅದು ಸುಳ್ಳಲ್ಲವಲ್ಲ"

"ಸರಿ ಒಪ್ಪಿದೆ. ಆದರೆ ಯಾರಿಗೂ ಗೊತ್ತಿಲ್ಲವಲ್ಲ. ಸ್ವತಃ ನಿಮ್ಮಿಗೇ ಗೊತ್ತಿಲ್ಲ. ಈಗ ತಿಳಿಸಿದರೆ ಅನಾಹುತವಾಗುಲ್ವಾ?"

"ತಿಳಿಸೋದು ಬೇಡ. ನಾವು ಸಂಭ್ರಮ ಪಟ್ಟರೆ ಅದು ತಪ್ಪಾಗುತ್ತಾ? ನಿಮ್ಮ ತಂಗಿ ಯಾಕೆ ಹೀಗೆ ವರ್ತಿಸುತ್ತಾಳೋ ದೇವರಿಗೇ ಗೊತ್ತು. ಜನ್ಮ ಕೊಟ್ಟ ತಾಯಿ, ಮಮತೆಯೇ ಇಲ್ಲ... ಆಗ ಅವಳ ಮನಃಸ್ಥಿತಿ ಸರಿಯಿರಲಿಲ್ಲ ಅಂತ ನಾನೂ ಸುಮ್ಮನಾಗಿದ್ದೆ. ಆದರೆ ಈಗ ಸರಿಯಾಗಿದಾಳಲ್ಲ"

"ಆದರೆ ಬಲವಂತ ಮಾಡಿ ಏನು ಪ್ರಯೋಜನ? ವಿಮಲಂಗೆ ಬೇಕಿಲ್ಲ.

ನಿಮ್ಮಗೆ ಗೊತ್ತಿಲ್ಲ. ಹೀಗೆ ಮುಂದುವರೆಯಲಿ... ಇನ್ನು ಮುಂದೆ ನಿಮ್ಮ ನಮ್ಮ ಮಗಳು ಎನ್ನುವುದಕ್ಕಿಂತ, ಶಶಾಂಕನ ಹೆಂಡ್ತಿ ಅಂತ ತಾನೇ...?"

"ಅದೂ ಸರಿ, ಆದರೆ ಕನ್ಯಾದಾನ ಮಾಡುವ ಹಕ್ಕು ಹೆತ್ತವರಿಗೋ, ಸಾಕಿದವರಿಗೋ?"

"ಈ ಜಿಜ್ಞಾಸೆಗೆ ನನಗೆ ಉತ್ತರ ಗೊತ್ತಿಲ್ಲ ಭಾವ. ಶಾಸ್ತ್ರಿಗಳನ್ನು ಕೇಳೋಣ ಅಥವಾ ಈ ಕಲಾಪವನ್ನೇ ಮೊಟಕುಗೊಳಿಸೋಣ. ಆಗ ಹಕ್ಕಿನ ಪ್ರಶ್ನೆಯೇ ಬರುವುದಿಲ್ಲ"

"ನೀವು ಹೀಗೆ ಹೇಳ್ತೀರಿ ಅಂತ ನಾನಂದುಕೊಂಡಿರಲಿಲ್ಲ"

"ಮತ್ತಿನ್ನೇನು ಹೇಳಲಿ ಭಾವ? ಈ ಗಂಡನ್ನು ನಾನು ನೋಡಿದ್ದಲ್ಲ, ನೀವು ನೋಡಿದ್ದಲ್ಲ ನಿಮ್ಮಯೇ ಆರಿಸಿಕೊಂಡಿದ್ದು. ನಾವು ಒಪ್ಪದಿದ್ದರೂ, ನಿಮ್ಮ ಅವನನ್ನೇ ಮದುವೆಯಾಗ್ತೀನಿ ಅಂತ ಹಠ ಹಿಡಿದುದರಿಂದ ನಾವೂ ಒಪ್ಪಿದ್ದು ಅಲ್ವಾ?"

"ನೀವು ಬೆಳೆಸಿದ ರೀತಿಯೇ ತಪ್ಪಾಯಿತು. ಅವಳಿಗೆ ಮುದ್ದು ಹೆಚ್ಚಾಯಿತು"

"ಮುದ್ದಿನಿಂದ ಬೆಳೆಸಿದೀವಿ. ಒಳ್ಳೆಯ ವಿದ್ಯೆಯನ್ನು ಕೊಟ್ಟಿದೀವಿ. ಈಗ ಅವಳ ಆಯ್ಕೆಯೂ ಚೆನ್ನಾಗಿಯೇ ಇದೆ. ಇಲ್ಲಿ ಯಾವ ದೋಷವನ್ನು ನೀವು ಹುಡುಕುವಂತಿಲ್ಲ. ಕೆಲವೇ ದಿನಗಳಲ್ಲಿ ಅವಳು ಗಂಡನ ಮನೆಗೂ ಹೊರಟು ಹೋಗ್ತಾಳೆ. ಇನ್ಯಾಕೆ ಈ ಚರ್ಚೆ? ನಮ್ಮಿಂದ ಏನೂ ಅನ್ಯಾಯವಾಗಿಲ್ಲ ಅಂತ ನೀವೇ ಒಪ್ಪಿಕೊಂಡಿದೀರಿ..."

"ಇದಕ್ಕೆಲ್ಲ ವಿಮಲನೇ ಕಾರಣ" ಅತೃಪ್ತಿಯ ದನಿಯಲ್ಲಿ ನುಡಿದ.

"ಇರಬಹುದು, ಅವಳ ಪರವಾಗಿ ನಾನು ಕ್ಷಮೆಯನ್ನು ಕೇಳಿದೀನಿ. ನಿಮ್ಮ ದೊಡ್ಡ ಗುಣವನ್ನ ಮೆಚ್ಚಿದೀನಿ... ವಿಮಲ ನಿಮಗೆ ಇನ್ನು ಎರಡು ಗಂಡು ಮಕ್ಕಳನ್ನು ಹೆತ್ತು ಕೊಟ್ಟಿದ್ದಾಳೆ... ಈಗಲೂ ಅಸಮಾಧಾನ ಏಕೆ?" ಪ್ರಭಾಕರ ಸುಮ್ಮನಾದ.

"ಒಂದು ರಿಕ್ವೆಸ್ಟ್ ಭಾವ... ಈ ವಿಷಯ ನಮ್ಮ ನಮ್ಮಲ್ಲೇ ಇರಲಿ. ಬೀಗರ ಮನೆಯವರಿಗೆ ತಿಳಿಯುವುದು ಬೇಡ. ಮುಂದೆ ನಿಮ್ಮಿಯ ವಿಚಾರದಲ್ಲಿ ಪ್ರೀತಿ ಕಡಿಮೆ ಆಗಬಹುದು. ನಮಗೆಲ್ಲ ಅವಳು ಸುಖವಾಗಿರುವುದು ಮುಖ್ಯ ಅಲ್ಲವೆ?" ಆದರೆ ಪ್ರಭಾಕರ ಅದಕ್ಕೆ ಮಾತಾಡಲಿಲ್ಲ.

ಕಾರು ಶಶಾಂಕನ ಮನೆಯ ಮುಂದೆ ನಿಂತಿತು. ಪ್ರಭಾಕರ ಮೌನವಾಗಿ ಶ್ರೀಹರಿಯನ್ನು ಹಿಂಬಾಲಿಸಿದ. ಬಾಗಿಲನ್ನು ತೆರೆದ ಶಶಾಂಕ. ಶ್ರೀಹರಿಯ ಅಕ್ಕ ಪಕ್ಕ ಹಿಂದೆ ಮುಂದೆ ನೋಡಿ, "ನಿಮ್ಮಿ ಬರ್ಲಿಲ್ವಾ" ಅಂತ ಕೇಳಿದ.

"ಇಲ್ಲ, ಅವಳ ಫ್ರೆಂಡ್ ಮನೆಗೆ ಹೋಗಿದಾಳೆ..."

"ಹೌದು... ಫೋನು ಮಾಡಿದ್ಲು, ಮರೆತೇ ಹೋಯ್ತು. ಬನ್ನಿ ಕೂತ್ಕೊಳ್ಳಿ, ಡ್ಯಾಡಿನ ಕರೀತೀನಿ" ಅಂತ ಒಳಗೆ ಹೋದ. ನಿಧಾನವಾಗಿ ಕಾಲನ್ನು ಸ್ವಲ್ಪವೇ ಎಳೆದು ಹಾಕುತ್ತಾ ಶಂಕರ ರೂಮಿನಿಂದ ಹೊರಬಂದ.

"ಇವರು ಪ್ರಭಾಕರ್ ಅಂತ, ಕಾಲೇಜಿನಲ್ಲಿ ಪ್ರೊಫೆಸರ್ ಆಗಿದಾರೆ..." ಪರಿಚಯಿಸಿದ. ಇಬ್ಬರೂ ಕೈಕುಲುಕಿದರು. ಮಾತಿಗೆ ಕುಳಿತರು.

ಶಾಸ್ತ್ರ ಸಂಪ್ರದಾಯ, ಆಚಾರ ವಿಚಾರ, ಪದ್ಧತಿ ನೇಮ ಯಾವುದೂ ನಮ್ಮ ಶಶಾಂಕನಿಗೆ ಗೊತ್ತಿಲ್ಲ, ಬೇಕೂ ಇಲ್ಲ. ನಾನು ಸಂಪ್ರದಾಯಸ್ಥ ಮನೆಯಲ್ಲಿ ಬೆಳೆದವನು ನಿಜ... ಆದರೆ ಈ ಆಕ್ಸಿಡೆಂಟ್ ನಂತರ, ನಾನೂ ಎಲ್ಲವನ್ನೂ ಬಿಟ್ಟು ಬಿಟ್ಟಿದೀನಿ. ಇನ್ನು ನನ್ನ ಹೆಂಡತಿಗೆ... ಅದಕ್ಕೆಲ್ಲ ಪುರುಸೊತ್ತು ಎಲ್ಲಿದೆ? ನೀವು ಅದಕ್ಕೆಲ್ಲ ತಲೆ ಕೆಡಿಸಿಕೊಳ್ಳಬೇಡಿ. ಮುಖ್ಯವಾದ ಶಾಸ್ತ್ರಗಳು ಇರಲಿ. ನಮ್ಮ ಕಡೆಯಿಂದ ಯಾವ ಆಕ್ಷೇಪಣೆಯೂ ಇಲ್ಲ" ಶಂಕರ ನಗುನಗುತ್ತಾ ನುಡಿದಾಗ, ಶ್ರೀಹರಿ ಗೆದ್ದವನಂತೆ ಪ್ರಭಾಕರನ ಕಡೆ ನೋಡ.

"ನಿಮ್ಮ ಶ್ರೀಮತಿಯವರು ಕಾಣ್ತಿಲ್ಲ..."

"ಅವಳು ಕ್ಲಿನಿಕ್‌ನಲ್ಲಿದಾಳೆ... ಏನಾದ್ರೂ ಮುಖ್ಯವಾದ ವಿಷಯ ಇದ್ದರೆ, ಅಲ್ಲೇ ಹೋಗಿ ಮಾತನಾಡಬಹುದು. ಅಡಿಗೆಯವನು ಕಾಫಿಯನ್ನು, ಬಿಸ್ಕತ್ತುಗಳನ್ನು ತಂದಿತ್ತ. ಎಲ್ಲರೂ ಸೇವಿಸಿದರು. ಅಲ್ಲಿಂದ ಹೊರಟು, ಇಬ್ಬರೂ ಕ್ಲಿನಿಕ್‌ಗೆ ಬಂದರು. ಡಾ॥ ಶಾರದಾ ಎಂ.ಬಿ.ಬಿ.ಎಸ್. ಎಂಬ ನಾಮಫಲಕವನ್ನು ಪ್ರಭಾಕರ ಎರಡೆರಡು ಬಾರಿ ಓದಿದ. ಹೆಜ್ಜೆ ತಡವರಿಸಿತ್ತು. ಮನ ಅಳುಕಿತ್ತು. ಶ್ರೀಹರಿಯ ಹಿಂದೆ ಹಿಂದೆ ನಿಧಾನವಾಗಿ ನಡೆದ. ಟೇಬಲ್ ಹಿಂದೆ ಕುಳಿತಿದ್ದ ಡಾಕ್ಟರನ್ನು ಅನುಮಾನದಿಂದ ನೋಡಿದ. ಹೌದು... ಅವಳೇ... ಸಂಶಯವಿಲ್ಲ. ಅವಳೇ... ಅವನ ಕಾಲುಗಳು ಅಲ್ಲಿಯೇ ನಿಂತವು.

"ಎಸ್... ಕಮಿನ್" ಎನ್ನುತ್ತಾ ಶಾರದಾ ಕತ್ತೆತ್ತಿದಳು. ಶ್ರೀಹರಿಯನ್ನು ಕಂಡು ಮುಗುಳ್ನಕ್ಕಳು. ಹಿಂದೆ ನಿಂತಿದ್ದ ಪ್ರಭಾಕರನನ್ನು ಕಂಡು ಅವಳ ಹುಬ್ಬುಗಳು ಗಂಟಿಕ್ಕಿದವು. ಇಬ್ಬರೂ ಒಳ ಬಂದು, ಅವಳ ಎದುರಿಗೆ ಕುಳಿತರು. ಶ್ರೀಹರಿ, ಪರಿಚಯ ಮಾಡಿಕೊಟ್ಟ. ಇಬ್ಬರೂ ಅಪರಿಚಿತರಂತೆ ಕೈ ಮುಗಿದು ನಮಸ್ಕಾರ ಎಂದಿದ್ದರು. ಸ್ವಲ್ಪ ಹೊತ್ತು ಮಾತಾಡಿದ ನಂತರ ಇಬ್ಬರೂ ಎದ್ದರು. ಪ್ರಭಾಕರ ತಪ್ಪಿತಸ್ಥನಂತೆ ತಲೆ ತಗ್ಗಿಸಿದ್ದ. ಹಿಂದೆ ತಿರುಗಿ ನೋಡುವ ಧೈರ್ಯವಿರಲಿಲ್ಲ. ಶಾರದಾ ತನ್ನ ಗಮನವನ್ನು ಪೇಶೆಂಟ್ ಕಡೆ ಹರಿಸಿದಳು.

*****

ಏನೂ ಮಾತನಾಡದೇ ಮೌನವಾಗಿ ಕುಳಿತಿದ್ದ ಪ್ರಭಾಕರನನ್ನು ಕಂಡು ಶ್ರೀಹರಿ ಆಶ್ಚರ್ಯದಿಂದ ಪ್ರಶ್ನಿಸಿದ.

"ಏನು ಯೋಚಿಸ್ತಿದೀರಿ ಭಾವ?... ಏನೂ ಮಾತನಾಡ್ತಿಲ್ಲ..."

"ಆಕೆ ಡಾಕ್ಟರ್ರು... ಶಶಾಂಕ ಒಬ್ಬನೇ ಮಗ... ಈ ಸಂಬಂಧಕ್ಕೆ ಹೇಗೆ ಒಪ್ಪಿಕೊಂಡ್ರು ಅಂತ ಯೋಚಿಸ್ತಿದ್ದೆ"

"ಆಕೆ ಡಾಕ್ಟರು... ಮಗ ಇಂಜಿನಿಯರ್ರು... ಅದರಿಂದಲೇ ತಿಳಿಯುತ್ತೆ... ಅವನ ಇಚ್ಛೆಗೆ ಆಕೆ ಒಪ್ಪಿಗೆ ಕೊಟ್ಟಿದ್ದಾರೆ ಅಂತ..."

"ಅವನು ಡಾಕ್ಟರಾಗಿದ್ದಿದ್ರೆ... ಈ ಸಂಬಂಧ ಬೆಳೆಯುತ್ತಿರಲಿಲ್ಲ..."

"ಯೋಗ ಹೇಗಿದೆಯೋ ಹಾಗೇ ಮದುವೆ, ಮಕ್ಕಳು, ಸಂಸಾರ... ಅಲ್ವಾ?"

"ಹೌದು, ಶ್ರೀಹರಿ... ನೀನು ಹೇಳೋದು ನಿಜ. ಹಣೇಲಿ ಏನು ಬರೆದಿದೆಯೋ ಅದೇ ನೆರವೇರುವುದು... ಆದರೆ ಆಕೆ ನಿಮ್ಮಿ ಜೊತೆ ಹೇಗೆ ನಡೆದುಕೊಳ್ತಾಳೋ ಅಂತ ಅನುಮಾನ ಕಾಡ್ತಿದೆ"

"ಈ ಅನುಮಾನಕ್ಕೆಲ್ಲಾ ಯಾವ ಅನುಮಾನವೂ ಬೇಡ. ಅತ್ತೆ ಸೊಸೆ ಒಟ್ಟಿಗೆ ಎಲ್ಲಿರ್ತಾರೆ? ಆಕೆಯ ಪ್ರಪಂಚವೇ ಬೇರೆ. ನಿಮ್ಮಿ ತನೇ ಈ ದೇಶದಲ್ಲಿ ಎಲ್ಲಿ ಇರ್ತಾಳೆ...? ಬಂದರೂ ಗೆಸ್ಟ್ ಥರ ಇದ್ದು ಹೋಗ್ತಾಳೆ".

"ಆದರೂ ಯಾಕೋ ಆತಂಕ ಕಾಡುತ್ತೆ... ಶ್ರೀಹರಿ..." ಅವನ ಮಾತಿಗೆ ಶ್ರೀಹರಿ ಗಮನವನ್ನು ಕೊಡಲಿಲ್ಲ.

ವಾಸಂತಿ ಹೇಳೋದು ನಿಜ... ವಿಮಲಂಗಿಂತ ವಿಚಿತ್ರ ಈ ಮನುಷ್ಯ ನಿಮ್ಮಿಯ ಬಗ್ಗೆ ಈಗ, ಚಿಂತೆ ದಿನ ದಿನಕ್ಕೂ ಹೆಚ್ಚಾಗ್ತಿದೆ..." ತನ್ನಲ್ಲೇ ನಕ್ಕೊಂಡ.

ಪ್ರಭಾಕರನ ಆಲೋಚನಾ ಲಹರಿ ಬೇರೆಯೇ ಇತ್ತು.

*****

ಕ್ಲಿನಿಕ್‌ನಲ್ಲಿ ಇವಳಿಗಾಗಿ ಕಾಯುತ್ತಾ ಕೂತಿದ್ದ ಪ್ರಭಾಕರ ಅವನ ಸರದಿ ಬಂದಾಗ ಎದ್ದು ಒಳಗೆ ಹೋಗಿದ್ದ. ಅವಳು ಅವನನ್ನು ನಿರೀಕ್ಷಿಸಿರಲಿಲ್ಲ ವಾದುದರಿಂದ ಹುಬ್ಬುಗಳು ಏರಿದವು.

"ನನ್ನ ಗುರುತು ಸಿಕ್ಕಲಿಲ್ವಾ ಶಾರದಾ..."

"ನಾನು ಡಾ॥ ಶಾರದಾ... ನಿಮ್ಮ ಹೆಸರು?" ಲೆಟರ್‌ಪ್ಯಾಡ್ ಎತ್ತಿಕೊಂಡಳು.

"ಸಾಕು ಈ ನಟನೆ... ಈಗ ನಮ್ಮ ಸಂಬಂಧ ಬೆಳೆಯುತ್ತಿದೆ. ನಾನು ನಿನ್ನ ಮಗನ ಮಾವ... ಅರ್ಥಾತ್, ನಿಮ್ಮಿಯ ತಂದೆ... ನಿಮ್ಮಿ ನನ್ನ ಮಗಳು"

"ನೀವು ಯಾರೋ ನಂಗೆ ಗೊತ್ತಾಗಬೇಕಿಲ್ಲ... ಏನೇನೋ ಆಡ್ಬೇಡಿ"

"ನನ್ನ ಮೇಲಿನ ಕೋಪ ಇನ್ನು ಹೋಗಿಲ್ಲ ನಿನಗೆ..."

"ಕೋಪ ದ್ವೇಷ ಯಾವುದೂ ನನ್ನ ಪ್ರೊಫೆಷನ್‌ನಲ್ಲಿಲ್ಲ. ಹಾಗೆ ಪ್ರೀತಿ ದಯೆ ದಾಕ್ಷಿಣ್ಯಗಳಿಗೂ ಸ್ಥಳವಿಲ್ಲ. ನಾನು ಡಾಕ್ಟರ್, ನೀವು ಪೇಶೆಂಟ್... ಅದಕ್ಕೆ ಸಂಬಂಧಪಟ್ಟ ವಿಷಯ ಇದ್ದರೆ ಮಾತನಾಡಿ. ಇಲ್ಲದಿದ್ದರೆ ಎದ್ದು

ಹೋಗಿ..." ನಿಷ್ಠುರವಾಗಿ ನುಡಿದಳು.

ಪ್ರಭಾಕರ ಯೋಚಿಸಿದ. ನಿಧಾನವಾಗಿ ಮತ್ತೆ ನುಡಿದ. "ನಿಮ್ಮಿ ನನ್ನ ಮಗಳು. ಆದರೆ, ನನ್ನ ಭಾಮೈದ ಶ್ರೀಹರಿಯ ಬಳಿ ನನ್ನ ಮಗಳು ಬೆಳೆದಳು. ಅವರನ್ನೇ ತಂದೆ ತಾಯಿ ಅಂತ ತಿಳಿದಿದಾಳೆ. ಈ ವಿಷಯವನ್ನು ನಿನಗೆ ತಿಳಿಸುವುದು ಸರಿ ಅಂತ ಅನ್ನಿಸಿತು. ಅದಕ್ಕೇ ಮತ್ತೆ ಬಂದಿದೀನಿ. ನನ್ನ ಮೇಲಿನ ಕೋಪಕ್ಕೆ ನನ್ನ ಮಗಳಿಗೆ ಯಾವ ತೊಂದರೆಯನ್ನು ಕೊಡಬೇಡ, ಪ್ಲೀಸ್..."

"ಅಂತ ಹೆಂಗಸು ನಾನಲ್ಲ. ಅವಳು ನಿನ್ನ ಮಗಳೋ, ಶ್ರೀಹರಿಯ ಮಗಳೋ ಅದು ನನಗೆ ಮುಖ್ಯವಲ್ಲ. ನನ್ನ ಮಗ ಅವಳನ್ನು ಮೆಚ್ಚಿದಾನೆ. ಅವನ ಹೆಂಡತಿ ನನ್ನ ಸೊಸೆ... ಅಷ್ಟು ಸಂಬಂಧ ಸಾಕು".

"ಥ್ಯಾಂಕ್ಸ್ ಶಾರದಾ... ಹಾಗೇ ನೀನು ನನಗೊಂದು ಉಪಕಾರವನ್ನು ಮಾಡಬೇಕು. ನನ್ನ ಹೆಂಡತಿಗೆ ಏನೋ ಸಂಶಯ, ಅದನ್ನು ಹೋಗಲಾಡಿಸ ಬೇಕು".

"ಏನೇ ಸಂಶಯವಿದ್ದರೂ ನೀವು ಬಗೆಹರಿಸಿಕೊಳ್ಳಿ. ಅದಕ್ಕೆ ನಾನು ಏನು ಮಾಡಲಿ!"

"ನನ್ನಿಂದ ಆಗದೇ ಇದ್ದುದಕ್ಕೆ ನಿನ್ನನ್ನು ಕೇಳ್ತಿದೀವಿ... ನನಗೆ ಹೆಲ್ಪ್ ಮಾಡು..."

"ಈ ವಿಷಯದಲ್ಲಿ ನಾನು ಯಾವ ಹೆಲ್ಪ್ ಮಾಡ್ಲಾರೆ. ಯಾವುದಾದರೂ ಸೈಕ್ರಿಯಾಟಿಸ್ಟ್ ಹತ್ತಿರ ಹೋಗುವುದು ಒಳ್ಳೆಯದು"

"ನೀನೇ ಯಾವುದಾದರೂ ಹೆಸರನ್ನು ಸೂಚಿಸಿದರೆ ಒಳ್ಳೆಯದ"

"ನಾನ್ಯಾಕೆ ಹೇಳಬೇಕು? ನೀವೇ ಹುಡುಕಿಕೊಳ್ಳಿ... ಅವಳು ನಿಮ್ಮ ಹೆಂಡತಿ. ನನಗೆ ಏನೂ ಆಗಬೇಕಾಗಿಲ್ಲ"

"ಡಾಕ್ಟರಾಗಿ ಅಷ್ಟು ಮಾಡುಕ್ಕೆ ಆಗುಲ್ವಾ?... ಈ ಮದುವೆಗೆ ಮುಂಚೆ ಒಂದು ವಿಷಯ ಇತ್ಯರ್ಥವಾಗಬೇಕು"

"ಈ ಮದುವೆಗೂ ಇದಕ್ಕೂ ಏನು ಸಂಬಂಧ"

"ನನ್ನ ಹೆಂಡತಿ ಮಾನಸಿಕ ರೋಗಿ ಇರಬಹುದು ಅಂತ ನನಗೆ ಅನುಮಾನ"

"ಅವಳಿಗೆ ಹೆಲ್ಪ್ ಮಾಡ್ತೀನಿ ಅಂತ ದೊಡ್ಡ ಆದರ್ಶವಾದಿಯ ಥರ ಅವಳನ್ನು ಮದುವೆಯಾದೆ? ಈಗ ಅವಳನ್ನು ಬಿಡುವ ಚಿಂತೆ ಬಂದಿದೆಯಾ?"

"ಅವಳನ್ನು ಬಿಟ್ಟರೆ, ನೀನು ಮತ್ತೆ ನನ್ನ ಜೀವನಕ್ಕೆ ಬರ್ತೀಯಾ? ತುಂಟನಂತೆ ಕೇಳಿದಾಗ ಅವಳು ಸಿಡಿದಳು.

"ಷಟಪ್... ನಿನ್ನ ಆದರ್ಶಕ್ಕೆ ಮರ್ಯಾದೆ ಕೊಟ್ಟು ನಾನು ಸುಮ್ಮನಾಗಿದ್ದೆ. ಹೀಗೆಲ್ಲಾ ನಿನ್ನ ಮನಸ್ನಲ್ಲಿ ಕುಬುದ್ಧಿಗಳಿವೆ ಅಂತ ನಾನು ಭಾವಿಸಿರಲಿಲ್ಲ"

"ಉದ್ವೇಗಕಕೊಳಗಾಗಬೇಡ ಶಾರದಾ... ಅದು ಡಾಕ್ಟರ ಆರೋಗ್ಯಕ್ಕೂ ಒಳ್ಳೆಯದಲ್ಲ. ನಿಮ್ಮಿ ಯಾರ ಮಗಳು ಅಂತ ಸಾಬೀತಾಗಬೇಕಾಗಿದೆ. ವಿಮಲನ ಸಂಶಯವನ್ನು ಹೋಗಲಾಡಿಸಬೇಕಾಗಿದೆ... ಅದಕ್ಕೆ ನಿನ್ನ ಸಹಾಯ ಸಹಕಾರ ಬೇಕಾಗಿದೆ..."

"ನಾನು ಒಪ್ಪದಿದ್ದರೇ...?"

"ಒಂದು ಕಾಲದಲ್ಲಿ ನೀನು ನನ್ನ ಆಪ್ತ ಸ್ನೇಹಿತೆಯಾಗಿದ್ದೆ. ಡಾಕ್ಟರಾಗಿದ್ದೂ ನೀನು ಹೀಗೆ ಮಾತಾಡಬಹುದಾ?" ಅವನ ಮಾತು ಅವಳನ್ನು ತಟ್ಟಿತು.

"ಸರಿ, ಈಗ ಪೇಶೆಂಟ್‌ಗಳು ಕಾಯ್ತ ಇದಾರೆ. ಈ ಬಗ್ಗೆ ನಿಧಾನವಾಗಿ ಮಾತನಾಡೋಣ. ಈಗ ನೀವು ಹೊರಡಿ..." ಗಂಭೀರ ವದನಳಾಗಿ ನುಡಿದಳು.

"ನನ್ನನ್ನು ಉಪಾಯವಾಗಿ ಕಳಿಸಿದರೆ, ನಾನು ಸುಮ್ಮನಾಗಿ ಬಿಡ್ತೀನಾ?... ನನ್ನ ನಿನ್ನ ಸ್ನೇಹದ ಬಗ್ಗೆ, ನಿನ್ನ ಗಂಡನಿಗೆ ನಿನ್ನ ಮಗನಿಗೆ ತಿಳಿಯದೇ ಇರಬೇಕು ಅಂತಿದ್ರೆ... ನೀನು ಒಪ್ಪಲೇ ಬೇಕು"

"ಏನು ಬ್ಲಾಕ್ ಮೇಲ್ ಮಾಡ್ತಿದೀಯಾ? ನಾನು ಅದಕ್ಕೆ ಹೆದರುಲ್ಲ. ನನ್ನ ಗಂಡನಿಗೆ, ನಿನ್ನ ಹೆಂಡತಿಗೆ ನಾನೇ ಎಲ್ಲವನ್ನು ಹೇಳ್ತೀನಿ. ಮುಚ್ಚಿಡುವ ಅಗತ್ಯವಿಲ್ಲ. ಶಶಾಂಕ ನನ್ನ ಮಗ... ಅವನು ಇದನ್ನೆಲ್ಲ ಕೇರ್ ಮಾಡುಲ್ಲ. ನೀನೇ ನಿನ್ನ ಮಗಳ ಬಾಳನ್ನು ಹಾಳು ಮಾಡಬೇಕು ಅಂತ ನಿರ್ಧರಿಸಿರುವ ಹಾಗಿದೆ". ಮುಖಕ್ಕೆ ಹೊಡೆದಂತೆ ಹೇಳಿದಳು.

"ಹಾಗೇನಿಲ್ಲ ಶಾರದಾ, ನಿರ್ಮಲ ಚೆನ್ನಾಗಿರಲಿ ಅನ್ನುವ ಆಸೆ ಖಂಡಿತಾ ಇದೆ. ಮೊದಲಿನಿಂದಲೂ ತಾಯಿಯಿಂದ ತಿರಸ್ಕರಿಸಲ್ಪಟ್ಟವಳು. ಮಗಳ ಮದುವೆ ಅಂತಂದ್ರೂ ನನ್ನ ಹೆಂಡತಿಗೆ ಸಡಗರವಿಲ್ಲ, ಉತ್ಸಾಹವಿಲ್ಲ... ಹೋಗಲಿ ಅಣ್ಣನ ಮಗಳು ಅನ್ನೋ ಭಾವನೇನೂ ಬೆಳೆಸಿಕೊಂಡಿಲ್ಲ. ಇದನ್ನೆಲ್ಲ ಕಂಡೂ ಕಂಡೂ, ನನಗೂ ರೋಸಿ ಹೋಗಿದೆ. ಮಗಳು ಮದುವೆ ಮಾಡಿಕೊಂಡು ಗಂಡನ ಮನೆಗೆ ಹೊರಟು ಹೋಗುತ್ತಿದಾಳೆ. ಆಮೇಲೆ ಅವಳು ನಮಗೆ ಅಪರೂಪವೇ. ಅದಕ್ಕೆ ಮುಂಚೆ, ಅವಳು ನನಗೆ ಹುಟ್ಟಿದವಳು ಅಂತ ದೃಢವಾಗ ಬೇಕು..." ಶಾರದಾ ಎಚ್ಚೆತ್ತಳು, ಜಾಗೃತಗೊಂಡಳು.

"ಅಂದರೆ? ಯಾಕೆ ಹೀಗೆ? ಯಾಕೆ ಈಗ ಅನುಮಾನ?"

"ನಿನಗೇ ಗೊತ್ತು... ವಿಮಲ ಒಬ್ಬನನ್ನು ಪ್ರೀತಿಸುತ್ತಿದ್ದಳು. ಅವನೊಡನೆ ಎಂಥಾ ಸಂಬಂಥ ಇತ್ತು ಅನ್ನೋ ವಿಷಯ ನನಗೆ ತಿಳೀದು... ಅವನು ತಿರಸ್ಕರಿಸಿದ ಅಂತ ಆತ್ಮಹತ್ಯೆಗೆ ಪ್ರಯತ್ನಿಸಿದಳು. ನಾನು ಅವಳನ್ನು ಉಳಿಸಿದೆ.

ಇದ್ದಕ್ಕಿದ್ದ ಹಾಗೆ ಅವಳಿಗೆ ಬಾಳನ್ನು ಕೊಡಬೇಕು ಅಂತ ಅನ್ನಿಸಿ ನಾನು ಅವಳನ್ನು ಮದುವೆಯಾದೆ. ಮದುವೆಯಾದ ಏಳೂವರೆ ತಿಂಗಳಿಗೆ ನಿಮ್ಮಿ ಹುಟ್ಟಿದಳು. ಆ ಸಮಯದಲ್ಲಿ ವಿಮಲನ ಮನಸ್ಸು ತುಂಬಾ ಸೂಕ್ಷ್ಮವಾಗಿತ್ತು. ಆ ಮಗು, ತನ್ನ ಪ್ರಿಯತಮನ ಮಗು ಎಂಬ ಭಾವನೆ ಹೇಗೆ ಮೂಡಿತೋ, ಮಗುವನ್ನು ದ್ವೇಷಿಸಲಾರಂಭಿಸಿದಳು. ಹಾಲೂಡಿಸದೇ ಉಪವಾಸ ಕೆಡವುತ್ತಿದ್ದಳು. ಆ ಸಮಯದಲ್ಲಿ ಶ್ರೀಹರಿ ತುಂಬಾ ಸಹಾಯ ಮಾಡಿದ. ನನ್ನ ಅತ್ತೆ ಮಗುವನ್ನು ಸಾಕಿದರು. ಆ ಮಗು ಅಲ್ಲೇ ಉಳಿಯಿತು. ಅವರೇ ಬೆಳೆಸಿದರು. ಇವಳು ಬಿಟ್ಟು ಕೊಟ್ಟಳು. ಮನಃಶಾಸ್ತ್ರಜ್ಞರ ಸಲಹೆಯಂತೆ ನಾನು, ಬಲವಂತ ಮಾಡಲಿಲ್ಲ. ನಿಮ್ಮಿ ಅವರಿಬ್ಬರ ಸ್ವಂತ ಮಗಳಂತೆಯೇ ಬೆಳೆದಳು. ಇವತ್ತಿಗೂ ಅವಳಿಗೆ ನಿಜಾಂಶ ತಿಳಿಯದು. ಆದರೂ ನನ್ನ ಹೃದಯ ಮಾತ್ರ ಕುದ್ದು ಹೋಗ್ತಿದೆ"

"ನೀವು ಈಗ ಅದನ್ನೆಲ್ಲ ಯಾಕೆ ಕೆದಕಬೇಕು? ಸುಮ್ಮನಿದ್ದು ಬಿಡಿ"

"ಸುಮ್ಮನಿದ್ದರೆ, ನನ್ನ ಹೆಂಡತಿಯ ಸಂಶಯ ಹಾಗೇ ಮುಂದುವರೆಯುತ್ತದೆ. ನಿಜ ಅವಳಿಗೆ ತಿಳಿಯಬೇಕು ಅಂತ ನನ್ನಾಸೆ"

"ಒಂದು ವೇಳೆ ಅವರ ಸಂದೇಹವೇ ನಿಜವಾಗಿದ್ದರೇ...?"

"ಇಲ್ಲ, ಅದು ನಿಜವಲ್ಲ. ಆ ಅನಿಸಿಕೆ ಬಲವಾಗಿದೆ ಅಷ್ಟೇ".

"ಈಗ ನಿಜವನ್ನು ತಿಳ್ಕೊಂಡು ಏನ್ಮಾಡ್ತೀರಿ? ಸುಮ್ಮನೇ ಕ್ಲೇಶ..."

"ತಿಳ್ಕೊಂಡರೆ ತಪ್ಪೇನಿಲ್ಲವಲ್ಲ... ಯಾರಿಗೂ ತಿಳಿಯದಂತೆ, ಗುಟ್ಟಾಗಿ ಅದೇನು ಟೆಸ್ಟ್ ಮಾಡಿಸಬೇಕೋ ಅದನ್ನು ಮಾಡಿಸಿ, ರಿಪೋರ್ಟ್ ಕೊಡಿಸು. ಎಷ್ಟು ಖರ್ಚಾದರೂ ಪರವಾಗಿಲ್ಲ".

"ಮದುವೆಯ ಕಾರ್ಯ ಮುಗಿಯಲಿ, ನಿಧಾನವಾಗಿ ಮಾಡಿಸಿದರಾಯ್ತು..."

"ಬೇಡ, ಮದುವೆಗೆ ಮೊದಲು ಆದರೆ ವಾಸಿ, ಆಮೇಲೆ ಮಾಡೋದಾದರೆ ಸ್ವಲ್ಪ ಕಷ್ಟವಾಗಬಹುದು"

"ಸರಿ, ನೋಡ್ತೀನಿ, ರಿಪೋರ್ಟ್ ಏನೇ ಬಂದರೂ ಅದನ್ನು ಅಕ್ಸೆಪ್ಟ್ ಮಾಡಿಕೊಳ್ಳೋಕೆ ನೀವು ರೆಡಿಯಾಗಿರಬೇಕು"

"ನಿನ್ನ ಮೇಲೆ ನನಗೆ ನಂಬಿಕೆ ಇದೆ ಶಾರದಾ"

"ಥ್ಯಾಂಕ್ಸ್... ಆದರೆ ಒಂದು ವಿಷಯ ನೆನಪಿರಲಿ ಪ್ರಭಾಕರ್. ನಾನೂ ನೀವು ಕೇವಲ ಹೊಸ ಸಂಬಂಧಿಕರಂತೆ ವರ್ತಿಸಿದರೆ ಒಳ್ಳೆಯದು... ನಮ್ಮ ಹಳೆಯ ಪರಿಚಯ ಯಾರಿಗೂ ತಿಳಿಯದಿದ್ದರೆ ಒಳ್ಳೆಯದು"

"ಯಾಕೆ? ನೀನೂ ಕೇರ್ ಮಾಡ್ತೀಯಾ?"

"ನನಗೋಸ್ಕರ ಅಲ್ಲ, ನಿಮ್ಮ ಹೆಂಡತಿಯ ಕ್ಷೇಮಕ್ಕೆ ಹೇಳ್ತಿದೀನಿ..."

"ಸರಿ, ನಾನಿನ್ನು ಬರ್ತೀನಿ. ನಿನ್ನ ಸಮಯ ಸಾಕಷ್ಟು ವೇಸ್ಟ್ ಆಯಿತು"

"ಒಮ್ಮೊಮ್ಮೆ ಹಾಗಾಗುತ್ತೆ. ನಿಧಾನವಾಗಿ ಉಳಿದ ವಿಷಯವನ್ನು ಮಾತನಾಡೋಣ. ಈಗ ನೀವು ಹೋಗಿ" ಪ್ರಭಾಕರನ ಮನಸ್ಸು ನಿರಾಳವಾಗಿತ್ತು. ಉದ್ವೇಗದಿಂದ ಅವಳ ಕೈಯನ್ನು ತನ್ನ ಕೈಯೊಳಗೆ ತೆಗೆದುಕೊಂಡು "ಥ್ಯಾಂಕ್ ಯೂ ವೆರಿಮಚ್" ಎಂದ. ಶಾರದಾ ಸರ್ರನೆ ಕೈಯನ್ನು ಹಿಂದಕ್ಕೆಳೆದುಕೊಂಡಳು. "ಸಾರೀ... ಶಾರೀ..." ಎಂದ.

"ಡಾ॥ ಶಾರದಾ... ಮೈಂಡ್ ಇಟ್" ಎಂದಳು. ಅವನು ಮತ್ತೆ "ಸಾರೀ" ಎಂದ.

*****

"ಶಂಕರ್ ನಿದ್ದೆ ಬಂತಾ? ನಾನು ನಿಮ್ಮ ಹತ್ರ ಸ್ವಲ್ಪ ಮಾತಾಡ್ಬೇಕಾಗಿತ್ತು"

"ಹೂಂ... ಹೇಳು. ಇನ್ನು ನಿದ್ದೆ ಬಂದಿಲ್ಲ. ಶಶಾಂಕ್ ಏನು ಮಾಡ್ತಿದಾನೆ?"

"ಕಂಪ್ಯೂಟರ್ ಮುಂದೆ ಕೂತಿದಾನೆ"

"ಮದುವೆ ಷಾಪಿಂಗ್ ಎಲ್ಲಾ ಮುಗೀತಾ?"

"ಶುರೂನೇ ಮಾಡಿಲ್ಲ, ನಾಳೆ ಹೋಗಿ ಬರೋಣ. ಬಿಡುವಾಗಿದೀರಾ? ಇನ್ವಿಟೇಷನ್ ಕಾರ್ಡ್ಸ್‌ಗಳನ್ನು ಪೋಸ್ಟ್ ಮಾಡಿದ್ದಾಯಿತಾ? ರಿಲೇಟಿವ್ಸ್‌ಗೆ ಫೋನು ಮಾಡಿದ್ದಾಯ್ತಾ? ಫ್ರೆಂಡ್ಸ್‌ಗಳಿಗೆ ಹೇಳಿದ್ದಾಯ್ತಾ?"

"ಎಲ್ಲಾ ನಾನೇ ಮಾಡ್ಬೇಕಾ ಶಾರದಾ? ನನ್ನ ಸ್ಥಿತಿಯೂ ನಿಂಗೆ ಗೊತ್ತಲ್ಲ"

"ನಾನೇನ್ಮಾಡ್ಲಿ? ನನಗೆ ಕ್ಲಿನಿಕ್‌ನಿಂದ ಬಿಡುವೇ ಸಿಗ್ತಿಲ್ಲ. ಪೇಶೆಂಟ್ಸ್‌ಗಳು ಜಾಸ್ತಿ ಇರ್ತಾರೆ..."

"ಅದಕ್ಕೆ ಹೇಳಿದ್ದು ಮದುವೆ ಸಿಂಪಲ್ ಆಗಿರಲಿ ಅಂತ. ಜೊತೆ ಜೊತೇಲೇ ವಾಸಿಸುತ್ತಿದ್ದೋರು, ಶಾಸ್ತ್ರಕ್ಕೆ ಒಂದು ಮದುವೆ ಅಂತ ಆಗಿದ್ರೆ ಸಾಕಾಗಿತ್ತು"

"ಇರಲಿ ಬಿಡಿ. ನಮಗೆ ಇರೋನು ಒಬ್ಬನೇ ಮಗ. ನಮ್ಮ ಮನೇಲಿ ನಡೀತಿರೋದು ಮೊದಲನೇ ಮದುವೆ... ನಾವು ತಾನೇ ಇನ್ಯಾರಿಗೆ ಖರ್ಚು ಮಾಡ್ಬೇಕು?"

"ನಮ್ಮ ಮದುವೆ ಸಿಂಪಲ್ ಆಗಿ ನಡೀತು, ಅಂತ ಹೀಗೆ ಹೇಳ್ತಿದೀಯ?"

"ನಮ್ಮ ಮದುವೆ ವಿಷಯವೇ ಬೇರೆ. ನಿಮ್ಮ ಮನೆ ಕಡೆ ಯಾರೂ ಇರಲಿಲ್ಲ. ನಮ್ಮ ಮನೆ ಕಡೆಯವರಿಗೆ ಬೇಕಿರಲಿಲ್ಲ..."

"ಈಗ ತಾನೇ ಏನು ಬದಲಾಗಿದೆ? ಲವ್ ಮ್ಯಾರೇಜ್ ಅಂದ್ರೆ ಸಿಂಪಲ್ ಆಗಿರಬೇಕು. ಅದಕ್ಕೆ ಅದ್ಧೂರಿ ಯಾಕೆ?" ಸ್ವಲ್ಪ ಒರಟಾಗಿ ನುಡಿದ.

"ನಿಮಗ್ಯಾಕೆ ಕೋಪ? ಮಾಡೋರು ಅವರಿದಾರೆ..."

"ಅವರ ಹತ್ರ ಖರ್ಚು ಮಾಡಿಸೋದೂ ನ್ಯಾಯವಲ್ಲ"

"ಮಾಡಲಿ ಬಿಡಿ... ನಿಮ್ಮಿಯ ಅಪ್ಪ ಮಾವ, ಎಲ್ರೂ ಸಂಭ್ರಮ ಪಡ್ತಿದಾರೆ"

"ಶ್ರೀಹರಿಗೆ ಇನ್ನು ಒಬ್ಬಳು ಮಗಳಿದಾಳೆ. ಅವಳಿಗೂ ಇಷ್ಟೇ ಸಂಭ್ರಮ ಪಡಬೇಕಾಗುತ್ತೆ... ನಮ್ಮ ಕಡೆ ಇನ್ಯಾವುದಾದ್ರೂ ಗಂಡು ಇದ್ದರೆ ಹೇಳೋಣ" ನಕ್ಕ.

"ನಿಮಗೆ ತಮಾಷೆ... ನಾವು ಹುಡುಗಿಗೆ ಏನು ಇಡೋಣ. ಅದನ್ನು ಹೇಳಿ..."

"ಅದೆಲ್ಲ ನಂಗೇನೂ ತಿಳಿಯುಲ್ಲ. ಅಮ್ಮನ ಹತ್ರ ಒಡವೆಗಳಿತ್ತೋ ಇಲ್ಲವೋ ಗೊತ್ತಿಲ್ಲ. ಅಕ್ಕ ತಂಗಿಯರಿರಲಿಲ್ಲ. ನಿನಗೆ ಒಡವೆಗಳನ್ನು ಕೊಡಿಸಲಿಲ್ಲ. ಇನ್ನು ಸೊಸೆಯ ಒಡವೆಗೊಡವೆ ನನಗೇಕೆ?" ಹಗುರವಾಗಿ ನುಡಿದ.

"ಸಾಕು... ಸಾಕು... ಅದೆಷ್ಟು ಮಾತಾಡ್ತೀರಿ? ಶಶಾಂಕಂಗೆ ಹೇಳ್ತೀನಿ. ಅವಳನ್ನು ಜ್ಯುವೆಲರ್ಸ್ ಅಂಗಡಿಗೆ ಕರೆದುಕೊಂಡು ಹೋಗಿ ಅವಳಿಗೆ ಏನು ಬೇಕೋ ಅದನ್ನು ಕೊಡಿಸಲಿ".

"ಈಗಿನ ಕಾಲದೋರು ಒಡವೆಗಳನ್ನು ಹೇರಿಕೊಳ್ಳೋದು ಅಷ್ಟರಲ್ಲೇ ಇದೆ. ಅಲ್ಲದೇ ಅವನು ಒಡವೆಗಳನ್ನು ಕೊಟ್ಟು ಅವಳನ್ನು ಮೆಚ್ಚಿಸಬೇಕಾಗಿಲ್ಲ. ಇವನಾಗಲೇ ಸಾಕಷ್ಟು ಒಡವೆಗಳನ್ನು ಕೊಟ್ಟಿದ್ದಾನೆ" ಮಾರ್ಮಿಕವಾಗಿ ನುಡಿದ.

"ಒಂದು ಪದ ಸಿಕ್ಕಿ ಬಿಟ್ಟರೆ, ಅದೆಷ್ಟು ವಾಕ್ಯಗಳನ್ನು ಪೋಣಿಸ್ತೀರಿ. ನೀವು ಕವಿಗಳಾಗಬೇಕಾಗಿತ್ತು... ಕವನಗಳ ರಾಶಿಯನ್ನೇ ತುಂಬಬಹುದಾಗಿತ್ತು..."

"ಯಾಕೆ ಶಾರದಾ ನನ್ನ ಸಹವಾಸ ಬೇಸರವಾಗ್ತಿದೆಯಾ? ಎಂದೂ ನೀನು ಹೀಗೆ ಮಾತಾಡಿದವಳಲ್ಲ. ಅಥವಾ ಯಾರಾದ್ರೂ ಪೇಶೆಂಟ್ಸ್ ಏನಾದ್ರೂ ತಕರಾರು ಮಾಡಿದ್ನಾ?... ಯಾರೂಂತ ಹೇಳು ಒಂದು ಕೈ ನೋಡಿಕೊಳ್ತೀನಿ"

"ಬರೀ ಇಷ್ಟೇ ಆಯ್ತು ಪೌರುಷ. ಮಧುರ ಭಾವನೆಗಳೇ ಇಲ್ವಾ ನಿಮ್ಮಲ್ಲಿ?... ಅದೇನು ಸಮಾಜ ಸೇವಕರೋ...? ನಿರ್ದಯಿಗಳು..."

"ಹೀಗೆಲ್ಲಾ ರೇಗಿಸಬೇಡ ಶಾರದಾ... ನಾನು ಬಡವನಿರಬಹುದು. ನಿನ್ನನ್ನು ಚೆನ್ನಾಗಿ ನೋಡಿಕೊಂಡಿದೀನಿ... ನಿನಗೆ ಒಬ್ಬ ಮಗನನ್ನು ಕೊಟ್ಟಿದೀನಿ..."

"ಅವನು ನಿಮ್ಮ ಮಗನೇ ಅಂತ ಏನು ಗ್ಯಾರಂಟಿ?..."

"ಇದೆಂಥಾ ತಮಾಷೆ?..."

"ಇವತ್ತು ಅಂಥದೇ ಒಂದು ಕೇಸು ಬಂದಿತ್ತು. ಒಬ್ಬ ವ್ಯಕ್ತಿ ಬಂದಿದ್ದ, ಅವನ ಹೆಂಡತಿ ಮೊದಲು ಯಾರನ್ನೋ ಪ್ರೀತಿಸ್ತಿದ್ದಳಂತೆ. ಅವನು ಕೈ ಕೊಟ್ಟ ಅಂತ, ಆತ್ಮಹತ್ಯೆಗೆ ಪ್ರಯತ್ನಿಸಿದವಳನ್ನು ಉಳಿಸಿ, ಸಹಾನುಭೂತಿಯಿಂದ ಅವಳನ್ನು ಮದುವೆಯಾದ. ಹುಟ್ಟಿದ ಮಗಳನ್ನು ತಾಯಿ ದ್ವೇಷಿಸ್ತಾಳಂತೆ. ಮಗು ಪ್ರೀತಿಸುತ್ತಿದ್ದವನ ಮಗು ಅಂತ ಅದನ್ನು ತಿರಸ್ಕರಿಸಿದಾಳಂತೆ..."

"ಅಯ್ಯೋ ರಾಮಾ... ತಾಯಿಯಾದೋಳಿಗೆ ಯಾಕೆ ಅಂಥಾ ಬುದ್ಧಿ! ಇಂಥ ಬುದ್ಧಿ ಮದುವೆಯಾದೋನಿಗೆ ಇದ್ದರೆ. ಅದು ಸಹಜ ಎನ್ನಬಹುದು..."

"ಅದೇ ನಂಗೂ ಆಶ್ಚರ್ಯ... ಮದುವೆಗೆ ಮೊದಲು, ಪ್ರೀತಿ ಪ್ರೇಮ ಇದ್ದರೂ, ದೇಹ ಸಂಬಂಧ ಮಾತ್ರ ಬೆಳೆಸಬಾರದು... ಆ ಹುಡುಗಿ ತಾಯಿಯಿದ್ದೂ ಬೇರೆ ಕಡೆ ಬೆಳೆದಳಂತೆ... ಯಾರಿಗೂ ಸುಖವಿಲ್ಲ"

"ಶಶಾಂಕ, ನಿಮ್ಮಿ ಇಬ್ಬರೂ ತುಂಬಾ ನಿಕಟವಾಗಿದಾರಂತೆ. ಮುಂದೆ ಅವರಲ್ಲೂ ಇಂಥಾ ಸಮಸ್ಯೆ ಬರಬಹುದು ಅಂತೀಯಾ?"

"ಛೆ... ಸಾಧ್ಯವಿಲ್ಲ. ಥ್ಯಾಂಕ್ ಗಾಡ್... ಇಬ್ಬರೂ ಒಬ್ಬರನ್ನೊಬ್ಬರು ಪ್ರೀತಿಸಿದ್ದೂ ಅಲ್ಲದೇ ಮದುವೆ ಆಗ್ತಿದಾರೆ. ಪ್ರೀತಿ ಒಬ್ಬನ ಜೊತೆಗೆ, ಮದುವೆ ಇನ್ನೊಬ್ಬನ ಜೊತೆಗೆ ಅದು ಸರಿಯಲ್ಲ. ಅದಕ್ಕೇ ಪ್ರೀತಿಸಲೇ ಬಾರದು..."

"ಪ್ರೀತಿ ಬಗ್ಗೆ ಯಾಕೆ ಅಷ್ಟು ಕಟುವಾಗಿ ಮಾತಾಡ್ತಿದೀಯ... ಅವನ್ಯಾರೋ ಏನೋ ಅವನ ಮಗಳ ಬಗ್ಗೆ ನಿನಗ್ಯಾಕೆ ಮರುಕ?" ಇದರಲ್ಲಿ ತಪ್ಪು ಯಾರದೋ...?"

"ತಪ್ಪು ಯಾರದ್ದೇ ಇರಲಿ, ಅನುಭವಿಸುವವರು ಮಕ್ಕಳು. ಈಗ ಆ ಹುಡುಗಿಯ ತಂದೆ ಯಾರು ಅಂತ ದೃಢೀಕರಿಸಬೇಕಾಗಿದೆ. ಆ ಹೊಣೆ ನನ್ನ ಮೇಲಿದೆ"

"ಆ ಹೊಣೇನ ನೀನ್ಯಾಕೆ ಹೊರಬೇಕು?..."

"ಡಾಕ್ಟರಾಗಿ, ನಾನು ಸಹಾಯ ಮಾಡಬೇಕಾಗಿದೆ. ಡಿ.ಎನ್.ಎ. ಟೆಸ್ಟ್ ಮಾಡಿಸಿದರೆ, ಖಚಿತವಾಗಿ ಗೊತ್ತಾಗುತ್ತೆ. ಇದು ಸರಿಯೋ ತಪ್ಪೋ ಅಂತ ಯೋಚಿಸ್ತಿದೀನಿ. ಹುಡುಗಿ ಬೆಳೆದಿದಾಳೆ. ಮದುವೆ ಗೊತ್ತಾಗಿದೆ. ಈಗ ಇದರ ಅಗತ್ಯ ಏನಿದೆ ಅಂತ. ಆ ಮನುಷ್ಯಂಗೆ ಅರ್ಥವೇ ಆಗುಲ್ಲ"

"ಸಧ್ಯಕ್ಕೆ ಆ ಯೋಚನೆ ಬಿಡು ಶಾರದಾ... ಶಶಾಂಕನ ಮದುವೆಯ ಕೆಲಸಗಳು ಬೇಕಾದಷ್ಟಿವೆ..."

"ನನ್ನನ್ನು ಶಾರದಾ ಅಂತಲೇ ಕರೀತೀರಲ್ಲ... ಶಾರೀ ಅಂತ ಕರೀಬೇಕು ಅಂತ ಅನ್ನಿಸಲೇ ಇಲ್ವಾ?... ನಿರ್ಮಲನ್ನ ನಿಮ್ಮಿ ಅಂತ ಕರೀತಾನೆ ಶಶಾಂಕ..."

"ಏನೋ ನಂಗೆ ಗೊತ್ತಾಗ್ಲೇ ಇಲ್ಲ. ನೀನು ಡಾಕ್ಟರಾಗಿದ್ದವಳು... ನಿನಗೆ ತಕ್ಕವನು ಹೌದೋ ಅಲ್ಲವೋ ಅನುಮಾನ ಇವತ್ತಿಗೂ ಇದೆ. ನನಗೆ ಸಲುಗೆ ಬರಲೇ ಇಲ್ಲ. ಸ್ವಲ್ಪ ಅಂತರವಿದ್ದೇ ಇದೆ..."

"ಅಂತರವನ್ನು ನೀವು ಇಟ್ಟುಕೊಂಡಿರಿ, ನಾನು ಬಯಸಲಿಲ್ಲ..."

"ಇರಬಹುದು... ವಿದ್ಯೆ, ಬುದ್ಧಿ, ಗುಣ, ನಡೆ, ನುಡಿಯಲ್ಲಿ ಸಾಕಷ್ಟು ಅಂತರವಿದೆ. ಅದು ಹತ್ತಿರವಾಗಲು ಅಡ್ಡಿಯಾಗಿರಬಹುದು"

"ಮದುವೆಯಾದ ಹೊಸತರಲ್ಲಿ ನೀವು ಹೀಗಿರಲಿಲ್ಲ..."

"ಅದೊಂದು ಥರದ ಆಕರ್ಷಣೆ, ಕಾವು... ಡಾಕ್ಟರಾದ ನಿನಗೆ ತಿಳಿಯದೇನಲ್ಲ. ಶಶಾಂಕ ಹುಟ್ಟಿದ ಮೇಲೆ, ನಾವು ಹತ್ತಿರವಾಗಲೇ ಇಲ್ಲ. ಇಲ್ಲದೇ ಇದ್ದಿದ್ದರೆ ಇನ್ನು ಒಂದೆರಡು ಮಕ್ಕಳು ಹುಟ್ಟಿರುತ್ತಿದ್ದವು. ಮನೆ ತುಂಬಿದಂತಿರುತ್ತಿತ್ತು..."

"ನಿಮಗೆ ಆಸೆ ಇದ್ದಿದ್ದರೆ ಹೇಳಿ ಬಿಡಬೇಕಾಗಿತ್ತು. ಯಾಕೆ ಹೇಳಲಿಲ್ಲ?"

"ಏನೋ ನಂಗೊತ್ತಿಲ್ಲ, ಇವತ್ತು ಯಾಕೆ ಇಷ್ಟು ಮಾತನಾಡ್ತಿದೀಯ...?"

"ನೀವು ತುಂಬಾ ಒಳ್ಳೆಯವರು. ನನಗೆ ತುಂಬಾ ಗೌರವವನ್ನು ಕೊಟ್ಟಿದೀರಿ. ಶಶಾಂಕನೂ ನಿಮ್ಮಿಯ ಜೊತೆ ಹೀಗೆ ಬಿಹೇವ್ ಮಾಡಬೇಕು..."

"ಶಶಾಂಕ ಕೆಟ್ಟವನು ಅಂತ ನಾನು ಹೇಳೋಲ್ಲ. ಆದರೆ ಮದುವೆಗೆ ಮುಂಚೆ ದೇಹ ಸಂಬಂಧ ಇಟ್ಟುಕೊಳ್ಳುವುದು ಸುತಾರಾಂ ಸರಿಯಲ್ಲ. ಸಂಯಮ, ಶಿಸ್ತು ಇರಬೇಕು. ಮಿತಿ ಮೀರಿದರೆ ಎಲ್ಲವೂ ಅಸಹ್ಯವೇ. ಒಂದು ವೇಳೆ ಮದುವೆ ಮುರಿದು ಬಿದ್ದರೆ, ನಾನಾ ಸಮಸ್ಯೆಗಳು ಹುಟ್ಟಿಕೊಳ್ಳುತ್ತವೆ..."

"ಹೌದು... ಈಗ ಸಮಾಜ ಇಂಥ ಅನೇಕ ಸಮಸ್ಯೆಗಳನ್ನು ಎದುರಿಸುತ್ತಿದೆ. ಅನೈತಿಕ ಸಂಬಂಧಗಳಿಂದ, ಅಬಾರ್ಷನ್ ಮಾಡಿಸಿಕೊಳ್ಳುವವರ ಸಂಖ್ಯೆ ಹೆಚ್ಚಾಗುತ್ತಿದೆ. ಅದಕ್ಕೆ ಸಂಬಂಧಿಸಿದ ಔಷಧಿಗಳ ದುಷ್ಪರಿಣಾಮದಿಂದ ಅನೇಕ ಖಾಯಿಲೆಗಳು ಹುಟ್ಟಿಕೊಂಡಿವೆ. ಅತ್ಯಾಚಾರ, ಅನಾಚಾರಗಳು ನಡೆಯುತ್ತಲೇ ಇವೆ. ಸಮಾಜದ ಬೆಳವಣಿಗೆ ಒಮ್ಮೊಮ್ಮೆ ಎತ್ತೆತ್ತಲೋ ಹೋಗುತ್ತಿದೆ ಅಂತನ್ನಿಸುತ್ತಿದೆ..."

"ಶಾರದಾ... ಇವತ್ತಿಂದ ಶಾರೀ ಅಂತ ಕರೀಲಾ... ನಿನಗೆ ಇಷ್ಟವಾದರೆ?"

"ಏನೂ ಬೇಡ, ನೀವು ಹೇಗೆ ಇದೀರೋ ಹಾಗೇ ಇರಿ. ಬದಲಾಗಬೇಡಿ... ನಿಮಗೆ ಅದೇ ಹೊಂದುತ್ತೆ"

"ಹೌದಲ್ವಾ? ಈಗ ಬದಲಾದರೇನು ಚೆನ್ನ! ಅಜ್ಜನಾಗುವ ವಯಸ್ಸು ಬಂತಲ್ಲ" ಶಂಕರ ನಕ್ಕ. ಶಾರದೆಯೂ ದನಿ ಸೇರಿಸಿದಳು.

"ಅಪ್ಪ ಎನ್ನಿಸಿಕೊಳ್ಳುವ ಆತುರ ನಿಮಗಿರಲಿಲ್ಲ. ಅಜ್ಜನೆನಿಸಿಕೊಳ್ಳಲು ಮಹಾ ಆತುರವನ್ನು ತೋರುತ್ತಿದೀರಿ" ಗೇಲಿ ಮಾಡಿದಳು.

"ಅಪ್ಪನಾಗ ಬೇಕಾದಾಗ, ನಿನ್ನ ಸಹಕಾರ ಬೇಕಾಗಿತ್ತು. ಅಜ್ಜನಾಗೋಕೆ ಹಾಗೇನಿಲ್ಲವಲ್ಲ"

"ಮಾತಿನಲ್ಲಿ ಜಾಣರು. ನಿದ್ದೆ ಬಂದಿದ್ದೋರನ್ನ ಎಬ್ಬಿಸಿದರೆ ಭಾಷಣಾನೇ ಬಿಗೀತೀರಿ..."

"ಆದರೂ ಈ ಸಮಯ ಚೆನ್ನಾಗಿತ್ತು ಶಾರದಾ... ನನ್ನೊಡನೆ ಮಾತನಾಡುಕ್ಕೆ

ನಿನಗೆ ಬಿಡುವು ಸಿಕ್ಕಿದೆ. ಈ ನಡುವೆ ನಾನು ಒಂಟಿಯಾಗಿ ಬಿಟ್ಟಿದ್ದೆ..."

"ಸಾರಿ... ಶಂಕರ್... ಇನ್ನು ಮುಂದೆ ಕ್ಲಿನಿಕ್‌ನ ಕೆಲಸವನ್ನು ಕಮ್ಮಿ ಮಾಡಿಕೊಂಡು, ಆದಷ್ಟು ಸಮಯವನನು ನಿಮ್ಮೊಡನೆ ಕಳೆಯಲು ಪ್ರಯತ್ನಿಸುತ್ತೇನೆ"

"ಪರವಾಗಿಲ್ಲ ಬಿಡು ಶಾರದಾ. ನಿನ್ನ ಅಗತ್ಯ ಸಮಾಜಕ್ಕಿದೆ. ನಿನ್ನಂಥವರಿಗೆ ಮೊದಲು ಆದ್ಯತೆ ಸಮಾಜಕ್ಕೆ... ನಂತರ ಸ್ವಂತಕ್ಕೆ... ಈಗ ಅನ್ನಿಸ್ತಿದೆ. ಶಶಾಂಕನೂ ಡಾಕ್ಟರಾಗಿದ್ದಿದ್ರೆ ಚೆನ್ನಾಗಿರ್ತಿತ್ತು. ಅಥವಾ ಸೊಸೆಯಾದರೂ ಡಾಕ್ಟರಾಗಿರಬಹುದಾಗಿತ್ತು"

"ಹೌದು... ನನಗೂ ಆ ಆಸೆ ಇತ್ತು. ಆದರೆ, ನಮ್ಮ ಎಲ್ಲಾ ಆಸೆಗಳೂ ನೆರವೇರಬೇಕಲ್ಲ. ಆದದ್ದೆಲ್ಲಾ ಒಳ್ಳೇದಕ್ಕೆ, ಪಾಲಿಗೆ ಬಂದದ್ದು ಪಂಚಾಮೃತ ಅಂತ ಅಂದುಕೊಳ್ಳಬೇಕು..." ಗುಡ್‌ನೈಟ್ ಎಂದು ಹೇಳಿ ದೀಪವಾರಿಸಿದಳು.

* * *

"ಮಮ್ಮೀ, ನಿಮ್ಮಿಗೆ ಸೀರಿಯಸ್ ಆಗಿ ನೆಗಡಿ ಕೆಮ್ಮು ಆಗಿಬಿಟ್ಟಿದೆ. ಒಂದು ಇಂಜೆಕ್ಷನ್ ಕೊಡ್ತೀಯಾ? ಶಶಾಂಕ ಕೇಳಿದಾಗ ಶಾರದಾ ಒಳಗೊಳಗೆ ನಕ್ಕಳು.

"ಹಾಗೆಲ್ಲಾ ಸುಮ್ಸುಮ್ನೆ ಇಂಜೆಕ್ಷನ್ ಕೊಡ್ಬಾರ್ದು. ಮೊದಲು ಥರೋ ಚೆಕಪ್ ಮಾಡಬೇಕು. ಮೊದಲೇ ನೀವು ವಿದೇಶಿಗಳು. ಇಲ್ಲಿಯ ವಾತಾವರಣಕ್ಕೆ ಹೊಂದಿಕೊಂಡಿಲ್ಲ. ಅಲರ್ಜಿ ಇರಬಹುದು. ಅವಳನ್ನು ಕರ್ಕೊಂಡು ಬಾ"

ಟ್ಯಾಕ್ಸಿಯಲ್ಲಿ ಮೂಗನ್ನು ಒರೆಸುತ್ತಾ ಕೂತಿದ್ದ ನಿಮ್ಮಿಯನ್ನು ಕರೆತಂದ.

"ನೀನು ಹೊರಗಿರು... ನಾನು ನೋಡ್ತೀನಿ"

"ಮಮ್ಮೀ... ಮದುವೆ ಹೊತ್ತಿಗೆ ಹುಶಾರಾಗ್ತಾಳೆ ತಾನೇ..."

"ಷೂರ್... ನೀನ್ಯಾಕೆ ಇಷ್ಟು ಟೆನ್ಷನ್ ಮಾಡ್ಕೊಳ್ತೀಯೋ?"

"ನನಗೂ ನೆಗಡಿ ಬಂದು ಬಿಟ್ಟರೇ..."

"ಅದೇನು ದೊಡ್ಡ ಖಾಯಿಲೆ ಅಲ್ಲ. ಕಾಮನ್ ಕೋಲ್ಡ್ ಅಂತ. ಸರ್ವೇಸಾಮಾನ್ಯ. ಡಾಕ್ಟರ ಮಗನಾಗಿ ಹೆದರ್ತೀಯಲ್ಲ"

"ಆಲ್ ದಿ ಬೆಸ್ಟ್ ನಿಮ್ಮಿ. ಟೇಕ್ ಕೇರ್" ಎಂದು ಹೇಳಿ ಹೊರ ನಡೆದ. ಶಾರದಾ ನರ್ಸಿಗೆ ಸಲಹೆಗಳನ್ನಿತ್ತು ಚೆಕಪ್ ನಡೆಸಿದಳು.

"ಹೆದರಬೇಡ ನಿರ್ಮಲಾ. ಅಲರ್ಜಿ ಆಗಿದೆ ಅಷ್ಟೇ. ಮೆಡಿಸನ್ ತಗೋತೀಯೋ, ಇಂಜೆಕ್ಷನ್ ತಗೋತೀಯೋ...?"

"ಇಂಜೆಕ್ಷನ್ ಕೊಟ್ಬಿಡಿ ಆಂಟಿ... ಬೇಗ ವಾಸಿಯಾಗುತ್ತೆ. ನೆನಪ್ನಲ್ಲಿಟ್ಕೊಂಡು ಮೆಡಿಸನ್ ಯಾರು ತಗೋತಾರೆ...?"

"ಓ...ಕೇ..." ನರ್ಸಿಗೆ ಇಂಜೆಕ್ಷನ್ ಕೊಡುವಂತೆ ಹೇಳಿ ಹೊರಬಂದಳು.

"ಅರ್ಧ ಗಂಟೆ ಬಿಟ್ಟು, ರಿಯಾಕ್ಷನ್ ನೋಡಿ, ಇಂಜೆಕ್ಷನ್ ಕೊಡಬೇಕು. ನೀವು ಇಲ್ಲೇ ಇರಬೇಕು. ಎದ್ದು ಹೊರಗೆ ಬರಬಾರದು" ನರ್ಸು ನುಡಿದಳು. ನಿಮ್ಮಿ ಕಣ್ಣು ಕಣ್ಣು ಬಿಟ್ಟಳು.

"ಮಮ್ಮೀ ನಾನು ನಿಮ್ಮ ಹತ್ರ ಕೂತಿರ್ಬಹುದಾ?"

"ಏನೂ ಅಗತ್ಯವಿಲ್ಲ. ಇಲ್ಲಿ ನಿಂಗೇನು ಕೆಲಸ... ಹೊರಗೆಲ್ಲಾದ್ರೂ ತಿರುಗಾಡಿಕೊಂಡು ಅರ್ಧಗಂಟೆ ಬಿಟ್ಟು ಬಾ. ಕರ್‍ಕೊಂಡು ಹೋಗೂವಂತೆ" ಶಶಾಂಕ ಮನಸ್ಸಿನಿಂದ ಹೊರಬಿದ್ದ

"ನಿರ್ಮಲಾ ಇವತ್ತೊಂದು ದಿನ ಮನೇಲೇ ರೆಸ್ಟ್ ತಗೋ. ಬೇಗ ವಾಸಿಯಾಗುತ್ತೆ" ಎಂದು ಹೇಳಿ ಕೆಲವು ಸಲಹೆಗಳನ್ನಿತ್ತಳು. ಅರೆನಿದ್ದೆಯಲ್ಲಿ ಓಲಾಡುತ್ತಿರುವವಳನ್ನು ಶಶಾಂಕ ತಬ್ಬಿಕೊಂಡು ಟ್ಯಾಕ್ಸಿಯ ಬಳಿಗೆ ಕರೆದುಕೊಂಡು ಹೋದ. ಶಾರದಾ ಅವರಿಬ್ಬರನ್ನೇ ನೋಡುತ್ತಾ ನಿಂತಳು. ನರ್ಸು ಕರೆದಾಗ ಎಚ್ಚರಗೊಂಡಳು. ನರ್ಸು ಕಲೆಕ್ಟ್ ಮಾಡಿಕೊಂಡಿದ್ದ ಬ್ಲಡ್‌ನ್ನು ಲೇಬಲ್ ಮಾಡಿ, ಪ್ರತ್ಯೇಕವಾಗಿ ತೆಗೆದಿರಿಸಿದಳು. ಅವಳು ಊಹಿಸಿದ್ದಂತೆ, ಕೆಲವೇ ಗಂಟೆಗಳಲ್ಲಿ ಪ್ರಭಾಕರ ಅವಳಿಗೆ ಫೋನು ಮಾಡಿದ್ದ. ಅವನಿಗೂ ಕ್ಲಿನಿಕ್‌ಗೆ ಬರುವಂತೆ ಹೇಳಿದಳು.

* * *

ಗಂಡಿನ ಮನೆಯವರನ್ನು ಎದುರುಗೊಳ್ಳಲು ಹೆಣ್ಣಿನವರು ಕನ್ನಡಿ ಕಲಶ, ಆರತಿ ತಟ್ಟೆಗಳೊಂದಿಗೆ ಸಿದ್ಧರಾಗಿ ನಿಂತಿದ್ದರು. ವಿಮಲ ತಲೆ ನೋವೆಂದು ಮಲಗಿದ್ದಳು. ವಾಸಂತಿ ಹೋಗಿ ಬಲವಂತವಾಗಿ ಎಬ್ಬಿಸಿಕೊಂಡು ಬಂದಿದ್ದಳು. ಏನೋಲಿ ಸಮಾಧಾನ ಅಂತ ಎಲ್ರೂ ಅಂದ್ಕೋತಾರೆ. ದಯವಿಟ್ಟು ಬನ್ನಿ" ಎಂದು ಹೇಳಿ ತಾನು ಹೊರಗೆ ಬಂದಿದ್ದಳು.

ಕಾರಿನಿಂದ ಇಳಿದ ಶಶಾಂಕನನ್ನು ಸುಮ್ಮನೆ ಎಂಬಂತೆ ನೋಡಿದಳು ವಿಮಲ. ಆದರೆ ಅವನ ಪಕ್ಕದಲ್ಲಿ ನಿಂತಿದ್ದ ವ್ಯಕ್ತಿಯನ್ನು ಎರಡೆರಡು ಬಾರಿ ನೋಡಿದಳು. "ಹೌದು ಇವನು ಶಂಕರನೇ... ಸಂಶಯವೇ ಇಲ್ಲ... ಈ ಮದುವೆಯ ಸಮಾರಂಭಕ್ಕೆ ಬಂದಿದಾನೆ... ಅವನ ಪಕ್ಕದಲ್ಲಿ ಅವನ ಹೆಂಡತಿ ಶಾರದಾ... ಶ್ರೀಹರಿ ಅವರ ಕೈಕುಲುಕಿ, ಹಾರ ಹಾಕಿ ಆರತಿ ಎತ್ತಿಸಿದ. ಹಾರ್ದಿಕ ವಾಗಿ ಮದುವೆ ಮನೆಗೆ ಬರಮಾಡಿಕೊಂಡ. ಶಶಾಂಕ ಶಂಕರನ ಮಗನಿರಲಾರ... ಅವನು ಮದುವೆಯನ್ನೇ ಆಗುವುದಿಲ್ಲ ಅಂತ ಹೇಳಿದ್ದನಲ್ಲ ಅಂತಂದು ಕೊಂಡರೂ, ಕೆಲವೇ ಕ್ಷಣಗಳಲ್ಲಿ ನಿಜ ತಿಳಿದಿತ್ತು. ನಿಂತಲ್ಲಿಯೇ ಕುಸಿದುಬಿದ್ದಳು, ಎಚ್ಚರ ತಪ್ಪಿದ್ದಳು. ಶಂಕರ ಅವಳನ್ನು ಗಮನಿಸಿರಲಿಲ್ಲ. ಆದರೆ ಶ್ರೀಹರಿಗೆ ಅರ್ಥವಾಗಿತ್ತು. ಅವಳನ್ನು ಒಳಗಿನ ರೂಮಿಗೆ ಎತ್ತಿಕೊಂಡು ಹೋಗಿ

ಮಲಗಿಸಿದರು. ಪ್ರಭಾಕರ, ಶಾರದಾಳ ಬಳಿಗೆ ಬಂದ. "ವಿಮಲ ಎಚ್ಚರ ತಪ್ಪಿ ಬಿದ್ದು ಬಿಟ್ಟಿದಾಳೆ. ಸ್ವಲ್ಪ ಬಂದು ನೋಡ್ತೀರಾ?" ಎಂದು ಕೇಳಿದ. ಅವಳು ಇಲ್ಲವೆನ್ನಲಾಗದೇ ರೂಮಿಗೆ ಬಂದಳು.

"ವಿಮಲ ನನ್ನ ಪತ್ನಿ. ಅವಳಿಗೆ ಮದುವೆಗೆ ಬರಲು ಇಷ್ಟವಿರಲಿಲ್ಲ. ಎಲ್ಲರೂ ಒಪ್ಪಿಸಿ ಕರ್ರೊಂಡು ಬಂದಿದ್ದರು. ಈಗ ನೋಡಿದರೆ..."

"ಬಿ. ಪಿ. ಏರಿರಬಹುದು... ಅಥವಾ ಏನೋ ಆಘಾತವಾಗಿರಬಹುದು. ನಾನು ಚೆಕ್ ಮಾಡ್ತೀನಿ. ಕಾರ್ನಲ್ಲಿ ನನ್ನ ಮೆಡಿಸಿನ್ ಕಿಟ್ ಇದೆ... ತರಿಸಿ..." ಎಂದಳು. ಪ್ರಭಾಕರ ತಾನೇ ಹೋಗಿ ಕಿಟ್‌ಬ್ಯಾಗ್ ತಂದ. ಶಾರದಾ ಕೂಲಂಕುಷ ವಾಗಿ ಚೆಕ್ ಮಾಡಿದಳು. ಶ್ರೀಹರಿ, ವಾಸಂತಿ ಆತಂಕದಿಂದ ಕಣ್ಣು ಕಣ್ಣು ಬಿಡುತ್ತಿದ್ದರು.

"ಯಾರೂ ಆತಂಕ ಪಟ್ಕೋಬೇಡಿ. ಇನ್ನು ಸ್ವಲ್ಪ ಹೊತ್ತಿಗೆ ಎಚ್ಚರ ಬರುತ್ತೆ. ಅವರಿಗೆ ಈ ಸದ್ದು ಗದ್ದಲ ಆಗುಲ್ಲ ಅಂತಿದ್ರೆ, ಅವರನ್ನು ಇಲ್ಲಿಂದ ಮನೆಗೆ ಕರೆದುಕೊಂಡು ಹೋಗುವುದು ವಾಸಿ..." ಪ್ರಭಾಕರನೆಡೆ ತಿರುಗಿ ನುಡಿದಳು.

"ಹಾಗೇ ಮಾಡೋಣ..." ವಾಸಂತ ತಕ್ಷಣವೇ ನುಡಿದಳು. ಶ್ರೀಹರಿಯೂ ಸಮ್ಮತಿಸಿದ. ಮದುವೆಯ ಕಾರ್ಯ ಮುಗಿಯುವವರೆಗೂ, ಅವಳು ಅಲ್ಲಿಂದ ದೂರ ಇರುವುದೇ ಸರಿ ಎಂದೆನಿಸಿತ್ತು...

ಶಾರದಾಳನ್ನು ಹುಡುಕಿಕೊಂಡು ಶಂಕರ ಅಲ್ಲಿಗೆ ಬಂದ. ಒಳಗೆ ಬರಲಿದ್ದವ ನನ್ನು ಶಾರದ ತಡೆದಳು.

"ನಿಮ್ಮಯ ಸೋದರತ್ತೆ ಎಚ್ಚರ ತಪ್ಪಿ ಬಿದ್ದು ಬಿಟ್ಟಿದಾರೆ..."

"ಹೌದಾ? ಏನಾಯ್ತು? ಹುಶಾರಿಲ್ವಾ?" ಅಲ್ಲಿಂದಲೇ ಬಾಗಿ ನೋಡಿದ. ಮಸುಕು ಮಸುಕಾಗಿ ವಿಮಲಳ ಮುಖ ಕಂಡಿತು. ಆದರೂ ಕಾತುರವನ್ನು ತಡೆದುಕೊಂಡ.

"ಶಾರದಾ... ಬಾ... ಅಲ್ಲಿ ನಮಗೋಸ್ಕರ ಎಲ್ರೂ ಕಾಯುತ್ತಿದಾರೆ..."

"ವಿಮಲನ ಹತ್ರ ಯಾರಾದ್ರೂ ಇರೋದು ಒಳ್ಳೇದು..." ವಿಮಲ ಎಂಬ ಹೆಸರು ಅವನ ಕಿವಿಗೆ ಬಿದ್ದೊಡನೆ ಮುಖ ವಿವರ್ಣವಾಯಿತು. ಆದರೂ ಯೋಚಿಸಿ ನುಡಿದ.

"ಯಾರು ವಿಮಲಾನಾ...?" ಎನ್ನುತ್ತಾ ಒಳ ಬಂದ. "ಶ್ರೀಹರಿಯ ತಂಗಿ..."

"ನಿಮಗೆ ಇವಳ ಪರಿಚಯ ಇದೆಯಾ...?"

"ಹೂಂ... ಶ್ರೀಹರಿ ನನ್ನ ಸ್ನೇಹಿತ... ಅವನ ತಂಗಿ ವಿಮಲ ಅಂತ

ಗೊತ್ತಿತ್ತು. ಆದರೆ ಇತ್ತೀಚೆಗೆ ಯಾರ ಕಾಂಟಾಕ್ಟ್ ಇರಲಿಲ್ಲ. ಯಾರನ್ನಾದ್ರೂ ಕಳಿಸೋಣ. ನಡೀ ನಾವು ಹೋಗೋಣ..." ಅವನು ಅವಳ ಕೈ ಹಿಡಿದು ಅಲ್ಲಿಂದ ಹೊರಕ್ಕೆ ಕರೆ ತಂದ. ಶ್ರೀಹರಿ ಶಂಕರನನ್ನೇ ನೋಡಿ ಕೇಳಿದ.

"ವಿಮಲ, ನನ್ನ ತಂಗಿ ನೆನಪಿದೆಯಾ...?"

"ಎಷ್ಟೋ ವರ್ಷಗಳ ನಂತರ ಈಗ ನೋಡಿದೆ... ತಕ್ಷಣವೇ ಗುರುತು ಸಿಗಲಿಲ್ಲ. ಈಗ ಎಲ್ಲಿದಾಳೆ...?"

"ಇದೇ ಊರಿನಲ್ಲಿದಾಳೆ ಯೂನಿವರ್ಸಿಟಿಯ ಕ್ವಾರ್ಟ್ರಸ್‌ನಲ್ಲಿದಾಳೆ. ಇವಳ ಗಂಡ ಪ್ರೊಫೆಸರ್ ಆಗಿದಾರೆ..."

"ಓ... ಮದುವೆ ಯಾವಾಗ ಆಯ್ತು? ಗೊತ್ತೇ ಇರಲಿಲ್ಲ"

"ಲವ್ ಮ್ಯಾರೇಜ್... ಪ್ರಭಾಕರ್ ತುಂಬಾ ಚೆನ್ನಾಗಿ ನೋಡ್ಕೊಳ್ತಿದಾರೆ" ಶಾರದಾ ಗಂಡನ ಕಡೆ ಓರೆಗಣ್ಣಿನಿಂದ ನೋಡಿದಳು. ಶಂಕರ ಅವಳ ಕಣ್ಣು ತಪ್ಪಿಸಿದ್ದ. ಶ್ರೀಹರಿ ಚುಚ್ಚುವಂತೆ ಶಂಕರನ ಕಡೆ ನೋಡಿದ್ದ. ಮಾತನ್ನಾಡುತ್ತಾ ಎಲ್ಲರೂ ಮಂಟಪದ ಬಳಿಗೆ ಬಂದರು.

"ವಿಮಲನ ಬಳಿ ಯಾರಾದ್ರೂ ಇರಲಿ. ಎಚ್ಚರ ಆದ ಕೂಡಲೇ ನನಗೆ ತಿಳಿಸಿ" ಶಾರದಾಳ ಮಾತಿಗೆ ಪ್ರಭಾಕರ ಎದ್ದ.

"ನಾನೇ ಇರ್ತೀನಿ..." ವಾಸಂತಿ ಹಗುರವಾದ ಉಸಿರನ್ನು ಬಿಟ್ಟಳು.

***

ವಿಮಲಳಿಗೆ ಎಚ್ಚರವಾಯಿತು. ಪ್ರಭಾಕರ ಅವಳ ಕೈಯನ್ನು ತನ್ನ ಕೈಯೊಳೆ ಹಿಡಿದು ವಿಶ್ವಾಸದಿಂದ ಕೇಳಿದ.

"ಈಗ ಹೇಗಿದೀಯ ವಿಮಲಾ? ಏನಾಯ್ತು?... ನೀನು ಬಹ ವೀಕ್ ಆಗಿ ಬಿಟ್ಟಿದೀಯಾ..." ಎನ್ನುತ್ತಾ ಕುಡಿಯಲು ಬಿಸಿ ಕಾಫಿಯನ್ನು ತರಿಸಿಕೊಟ್ಟ. ಬಿಸಿ ಕಾಫಿ ಹೊಟ್ಟೆಗೆ ಸೇರಿದ ಮೇಲೆ ಸ್ವಲ್ಪ ಮಂಪರು ಕಡಿಮೆ ಆಯಿತು. ಅಷ್ಟರಲ್ಲಿ ಪ್ರಭಾಕರ ಶಾರದಾಳಿಗೆ ಹೇಳಿ ಕಳಿಸಿದ್ದ.

"ಈಗ ಹೇಗಿದೀರಿ ವಿಮಲಾ? ಯಾಕೆ ಹಾಗಾಯ್ತು?" ಶಾರದಾ ಪಲ್ಸ್ ಹಿಡಿದು ವಿಚಾರಿಸಿದಳು.

"ಡಾಕ್ಟರ್... ನೀವು ಶಶಾಂಕನ ತಾಯಿ ತಾನೇ?..."

"ಹೌದು... ನಾನು ಶಶಾಂಕನ ತಾಯಿ. ನಿಧಾನವಾಗಿ ಮಾತನಾಡೋಣ. ನೀವು ಈಗ ರೆಸ್ಟ್ ತಗೊಳ್ಳಿ. ಏನಾದ್ರೂ ತಿಂತೀರಾ? ತರಿಸಿಕೊಡ್ತೀನಿ..."

"ಏನೂ ಬೇಡ ಡಾಕ್ಟರ್. ನಾನು ಮುಖ್ಯವಾದ ವಿಷಯವನ್ನು ನಿಮ್ಮ ಹತ್ರ ಮಾತಾಡ್ಬೇಕು. ಮೊದಲು ಈ ಮದುವೆಯನ್ನು ನಿಲ್ಲಿಸಿ..."

"ಏನೇನೋ ಮಾತಾಡ್ಬೇಡ ವಿಮಲಾ... ಈ ಮದುವೇನ ಯಾಕೆ

ನಿಲ್ಲಿಸಬೇಕು? ನಿಮ್ಮ ಲೈಫ್ ಹಾಳಾಗಿ ಹೋಗುತ್ತೆ..."

"ಇಲ್ಲ... ಪ್ರಭಾಕರ್..."

"ಈಗ ಎಕ್ಸೈಟ್ ಆಗ್ಬೇಡಿ... ನಿಧಾನವಾಗಿ ಮಾತನಾಡ್ಣೋಣ" ಎನ್ನುತ್ತಾ ಶಾರದಾ ಇಂಜೆಕ್ಷನ್ ಸಿರಿಂಜನ್ನು ಕೈಗೆತ್ತಿಕೊಂಡಳು. ಪ್ರಭಾಕರ ಅವಳ ಕೈಯನ್ನು ಬಲವಾಗಿ ಹಿಡಿದುಕೊಂಡ. ಶಾರದಾ ಇಂಜೆಕ್ಷನ್ ಚುಚ್ಚಿದಳು.

"ನನ್ನ ಮಾತು ಕೇಳಿ... ನನ್ಮಾತನ್ನ ಕೇಳಿ..." ವಿಮಲ ಹೇಳುತ್ತಲೇ ಇದ್ದಳು. ಎಂಜೆಕ್ಷನ್ ಬಹಳ ಬೇಗ ಪರಿಣಾಮವನ್ನು ಬೀರಿತು. ವಿಮಲ ನಿದ್ದೆಯ ಮಂಪರಿಗೆ ಇಳಿದಳು.

"ಅವರ ಮನಃಸ್ಥಿತಿ ಸರಿಯಿಲ್ಲ. ಈ ವಾತಾವರಣದಲ್ಲಿ ಅವರು ಮತ್ತೆ ಮತ್ತೆ ಉದ್ವೇಗಗೊಳ್ಳುತ್ತಲೇ ಇರುತ್ತಾರೆ. ಯಾವುದಾದರೂ ನರ್ಸಿಂಗ್ ಹೋಂಗೆ ಸೇರಿಸುವುದು ಒಳ್ಳೆಯದು" ಶಾರದಾ ಪ್ರಭಾಕರನಿಗೆ ಸಲಹೆಯನ್ನಿತ್ತಳು. ವಿಮಲಳ ಗಂಡು ಮಕ್ಕಳು ತಾಯಿಯ ಬಳಿಗೆ ಬಂದರು.

"ನಿಮ್ಮಮ್ಮನ ಬಿ.ಪಿ. ಹೆಚ್ಚಾಗಿದೆ. ಇಲ್ಲಿ ರೆಸ್ಟ್ ಸಿಗುಲ್ಲ. ನರ್ಸಿಂಗ್ ಹೋಂಗೆ ಸೇರಿಸೋಣ" ಪ್ರಭಾಕರ ಮಕ್ಕಳಿಗೆ ಹೇಳಿದ. ಕೆಲವೇ ಸಮಯದಲ್ಲಿ ವಿಮಲ ನರ್ಸಿಂಗ್ ಹೋಂನಲ್ಲಿದ್ದಳು.

ಹಸೆಮಣೆಯ ಮೇಲಿದ್ದ ಶಂಕರ ಚಡಪಡಿಸಿದ. ವಿಮಲಳ ಆರೋಗ್ಯದ ಬಗ್ಗೆ ಶಾರದಾಳನ್ನು ವಿಚಾರಿಸಿದ.

"ಸೀರಿಯಸ್ ಏನಿಲ್ಲ. ಏನೋ ಅಸಂಬದ್ಧ ಮಾತಾಡ್ತಾರೆ. ಅವರಿಗೆ ಈ ಮದುವೆ ನಡೆಯುತ್ತಿರುವುದು ಸರಿ ಕಾಣ್ತಿಲ್ಲವೇನೋ... ಮದುವೆ ನಿಲ್ಲಿಸಿ ಅಂತ ಹೇಳಿದರು, ಕಾರಣ ಗೊತ್ತಾಗಲಿಲ್ಲ" ಶಂಕರ ನಿರಾಳವಾಗಿ ಉಸಿರನ್ನು ಬಿಟ್ಟ ಆದರೂ, ಅವಳೇಕೆ ಹಾಗೆ ಹೇಳಿದಳು ತಿಳಿದುಕೊಳ್ಳಬೇಕೆಂದು ಎನ್ನಿಸಿತ್ತು. ಕಲಾಪಗಳೆಲ್ಲ ಮುಗಿಯುವವರೆಗೂ ಹಾಗೂ ಹೀಗೂ ಕಾಲ ಕಳೆದವನು, ಮೆಲ್ಲಗೆ ಎದ್ದು ವಿಮಲ ಮಲಗಿದ್ದ ರೂಮಿನ ಬಳಿಗೆ ಬಂದ. ಅಲ್ಲಿ ವಿಮಲ ಇರಲಿಲ್ಲ. ಬಾಗಿಲಲ್ಲಿ ಶ್ರೀಹರಿಯನ್ನು ಕಂಡ.

"ಇಲ್ಲೇನು ಹುಡುಕ್ತಿದೀಯೋ ಶಂಕ್ರಾ?"

"ವಿಮಲನ್ನ ಮಾತನಾಡಿಸೋಣ ಅಂತ ಬಂದೆ..." ಅತ್ತಿತ್ತ ನೋಡುತ್ತಾ ಹೇಳಿದ.

"ಅವಳನ್ನು ನರ್ಸಿಂಗ್ ಹೋಂಗೆ ಸೇರಿಸಿದಾನೆ ಅವಳ ಗಂಡ"

"ಯಾಕೆ? ಅಷ್ಟು ಸೀರಿಯಸ್ಸಾ? ಅಂಥದ್ದೇನಾಯ್ತು?"

"ಅವಳು ನಿನ್ನನ್ನು ಕಂಡಳು, ಮೂರ್ಛೆ ಬಿದ್ದಳು ಅಷ್ಟೇ"

"ಇದು ಅತಿ ಅತಿ ಆಯ್ತು ಅಂತ ಅನ್ನಿಸುಲ್ವಾ...?"

"ಆ ಮಾತು ಬೇಡ, ಮದುವೆ ಕಲಾಪಗಳು ಇನ್ನು ಮುಗಿದಿಲ್ಲ... ಅವಳ ಪಾಡಿಗೆ ಅವಳು ಅಲ್ಲಿರ್ತಾಳೆ. ನಿನಗ್ಯಾಕೆ ಚಿಂತೆ...?"

"ಈ ಮದುವೆ ಬೇಡ, ನಿಲ್ಲಿಸಿ ಅಂತ ಅಂದ್ಲಂತೆ. ಹಾಗಂದ್ರೆ ಏನರ್ಥ? ನನ್ನ ಮೇಲಿನ ಸಿಟ್ಟನ್ನು ಮಕ್ಕಳ ಮೇಲೆ ಯಾಕೆ ತೋರಿಸ್ಬೇಕು...?"

'ಅವಳ ಮನಸ್ಥಿತಿ ಸರಿ ಇಲ್ಲ. ಏನೇನೋ ಆಡ್ತಾಳೆ. ಅದನ್ನೆಲ್ಲ ಬಿಡು" ಶ್ರೀಹರಿ ಶಂಕರನನ್ನು ಇತ್ತ ಕರೆ ತಂದ. ಪ್ಲೀಸ್... ಶಂಕರಾ, ಈ ವಿಷಯಾನ ಯಾರಿಗೂ ಹೇಳಬೇಡ, ಯಾರನ್ನೂ ಕೇಳಬೇಡ. ಮದುವೆಯ ಕಾರ್ಯ ನಿರ್ವಿಘ್ನವಾಗಿ ನೆರವೇರಲಿ. ಇಲ್ಲದಿದ್ದರೆ ಮದು ಮಕ್ಕಳಿಗೆ ಕಷ್ಟವಾಗುತ್ತೆ..." ಶಂಕರ ಸುಮ್ಮನಾದ.

***

ಮದುವೆಯ ಕಾರ್ಯಗಳು ಸಾಂಗವಾಗಿ ನೆರವೇರಿದವು. ವೀಡಿಯೋ ಫ್ಲಾಶ್‌ಗಳು ಮತ್ತೆ ಮತ್ತೆ ಹೊಳೆದವು. ಶಶಾಂಕ ನಿಮ್ಮಿ ದಂಪತಿಗಳಾದರು. ಸಪ್ತಪದಿ ತುಳಿದರು. ಮುತ್ತೈದೆಯರು ಆರತಿ ಎತ್ತಿದರು. ಉಡುಗೊರೆಗಳ ರಾಶಿಯೇ ಬಿದ್ದಿತು. ನವದಂಪತಿಗಳು ಪಿಸುದನಿಯಲ್ಲಿ ಸಲ್ಲಾಪದ ಮಾತು ಗಳನ್ನಾಡುತ್ತಿದ್ದರು. ಶಂಕರ, ಪ್ರಭಾಕರ, ಶ್ರೀಹರಿ ಮೂರು ಜನವೂ ವಿಮಲಳ ಬಗ್ಗೆಯೇ ಚಿಂತಿಸುತ್ತಿದ್ದರು.

"ನಿಮ್ಮಿ ಶಶಾಂಕರ ಮದುವೆಗೆ ನಾನು ಸಮ್ಮತಿಸಿದ್ದು ಸರಿಯಿಲ್ಲವೆ?" ಶಂಕರ ಚಿಂತಿಸುತ್ತಿದ್ದ. ವಿಮಲ ಯಾಕೆ ಈ ಮದುವೆಯನ್ನು ನಿಲ್ಲಿಸುವ ಮಾತನ್ನಾಡಿದಳು?" ಪ್ರಭಾಕರ ಆಲೋಚಿಸುತ್ತಿದ್ದ. "ಶಶಾಂಕ ಶಂಕರನ ಮಗನಾಗದೇ ಇದ್ದಿದ್ದರೆ ಚೆನ್ನಾಗಿತ್ತು. ವಿಮಲ ಇನ್ನು ಏನೇನು ಗಲಾಟೆ ಮಾಡ್ತಾಳೋ?" ಶ್ರೀಹರಿ ಯೋಚಿಸುತ್ತಿದ್ದ.

ರಿಸೆಪ್ಶನ್ ಡಿನ್ನರ್ ಮುಗಿದ ನಂತರ, ನವ ದಂಪತಿಗಳು ಈ ಮುಂಚೆಯೇ ರಿಸರ್ವ್ ಮಾಡಿಸಿದ್ದ ಹೋಟೆಲ್ಲಿಗೆ ತೆರಳಿದ್ದರು. ಒಂದು ವಾರ ಅವರುಗಳು ಏಕಾಂತದಲ್ಲಿರಲು ನಿರ್ಧರಿಸಿದ್ದರು. ಶ್ರೀಹರಿ ದಂಪತಿಗಳು, ಶಂಕರ ಹಾಗೂ ಶಾರದಾಳನ್ನು ಗೌರವದಿಂದ ಉಡುಗೊರೆಗಳನ್ನಿತ್ತು ಕಳಿಸಿಕೊಟ್ಟರು.

"ಶಶಾಂಕ ಬಂದ... ಮದುವೆಯಾದ... ಎಷ್ಟು ಬೇಗ ಎಲ್ಲಾ ಕಾರ್ಯಕ್ರಮಗಳು ಮುಗಿದು ಹೋದವು. ಅವನಿನ್ನು ಅಂಬೆಗಾಲನ್ನಿಡುತ್ತಿದ್ದ ದಿನಗಳು ನೆನಪಿನಲ್ಲಿವೆ. ದಿನಗಳು ಎಷ್ಟು ಬೇಗ ಕಳೆದು ಹೋಗುತ್ತವೆ ಅಲ್ವಾ?" ಶಂಕರ ಹೆಂಡತಿಗೆ ಹೇಳಿದ.

"ಹೌದು ಶಂಕರ್... ಕಾಲ ಸವೆಯೋದೇ ಗೊತ್ತಾಗ್ತಿಲ್ಲ. ಹಿಂದೆಲ್ಲಾ ಹೀಗಿರಲಿಲ್ಲ. ಒಂದೊಂದು ದಿನವೂ ದೀರ್ಘ ಎನಿಸುತ್ತಿತ್ತು"

"ನಿನಗೂ ಹಾಗೆನ್ನಿಸುತ್ತಿತ್ತಾ? ಓದೋದು ಬರೆಯೋದು ಬೇಕಾದಷ್ಟು ಇರುತ್ತಿತ್ತಲ್ಲ. ಸ್ನೇಹಿತೆಯರು... ಸ್ನೇಹಿತರು... ಓಡಾಟ..."

"ಸ್ನೇಹಿತೆಯರು, ಹೊರಗೆ ಸುತ್ತಾಟ ಅವೆಲ್ಲಾ ಬಹಳ ಸೀಮಿತದಲ್ಲಿರುತ್ತಿತ್ತು. ಈಗ ನೆನೆಸಿಕೊಂಡರೆ, ಕಳೆದುಕೊಂಡಿದ್ದೇ ಹೆಚ್ಚು ಅಂತ ಅನ್ನಿಸುತ್ತೆ. ನಿಮಗೆ ಹಾಗೆ ಅನ್ನಿಸೋಲ್ವಾ ಶಂಕರ್...?"

"ಮಾಡಬೇಕೆಂದು ಕೊಂಡಿದ್ದ ಕೆಲಸಗಳನ್ನು ನಿರ್ವಹಿಸಲಾಗಲಿಲ್ಲವಲ್ಲ ಅಂತ ವ್ಯಥೆಯಾಗುತ್ತೆ. ಆದರೆ ನಿಜ ಹೇಳ್ತೀನಿ ಶಾರದಾ... ನೀನು ನನ್ನ ಬಾಳಿನಲ್ಲಿ ಬಂದ ಮೇಲೆ ನನ್ನ ಜೀವನದ ರೀತಿ ನೀತಿಗಳು ಬದಲಾಗಿ ಹೋದವು. ನಮಗೆ ಒಬ್ಬ ಮಗಳು ಇದ್ದಿದ್ದರೆ ಚೆನ್ನಾಗಿತ್ತು, ಅಂತ ಆಸೆಯಾಗ್ತಿದೆ"

"ಆಸೆ! ಈಗ! ಚೆನ್ನಾಗಿದೆ. ಶಶಾಂಕ ಒಬ್ಬ ಸಾಕು ಅಂತ ಆಗಲೇ ನಿರ್ಧರಿಸಿದ್ದೆವಲ್ಲ. ನಿಮ್ಮಿಯನ್ನೇ ನಮ್ಮ ಮಗಳು ಅಂತ ಅಂದುಕೊಳ್ಳೋಣ. ನಿಮಗೆ ಒಂದು ವಿಷಯ ಗೊತ್ತಾ? ನಿಮ್ಮಿ ಶ್ರೀಹರಿಯ ಸಾಕುಮಗಳು. ಅವಳ ಸ್ವಂತ ತಾಯಿ ವಿಮಲ..."

ಶಂಕರ ಮಲಗಿದ್ದವನು ಎದ್ದು ಕೂತ "ಯಾರು! ಶ್ರೀಹರಿಯ ತಂಗಿ... ವಿಮಲ... ನಮ್ಮ ನಿಮ್ಮಿಯ ತಾಯೀನಾ! ನಿನಗ್ಯಾರೂ ಹೇಳಿದರು?"

"ನೀವ್ಯಾಕೆ ಹೀಗೆ ಕುಣಿದಾಡ್ತೀರಿ? ಈ ವಿಷಯವನ್ನು ನಿಮ್ಮಿಯ ತಂದೆ ಪ್ರಭಾಕರನೇ ತಿಳಿಸಿದ್ದು, ಶ್ರೀಹರಿ ಯಾಕೆ ತಿಳಿಸಲಿಲ್ಲವೋ?"

"ತಿಳಿಸದೇ ಇದ್ದುದು ಒಳ್ಳೇದೇ ಆಯ್ತು. ಇಲ್ಲದೇ ಇದ್ದಿದ್ದರೆ, ನಾನು ಮದುವೆಗೆ ಒಪ್ಪುತ್ತಿರಲಿಲ್ಲವೇನೋ?"

"ಯಾಕೆ ಹೀಗಂತೀರಿ? ಅವರು ಪ್ರೀತಿಸುತ್ತಿದ್ದರು. ನಾವು ಬೇಡ ಅಂತ ಅಂದಿದ್ದರೂ, ವಿರೋಧಿಸಿ ಮದುವೆ ಆಗುತ್ತಿದ್ದರು"

"ಈ ಧೈರ್ಯ ನಮ್ಮ ಕಾಲದಲ್ಲಿ ಇರಲಿಲ್ಲ..."

"ಹೌದು... ವಿಮಲ ಯಾರನ್ನೋ ಪ್ರೀತಿಸುತ್ತಿದ್ದಳಂತೆ... ಅವನು ನಿರಾಕರಿಸಿ ದಾಗ ನಿರಾಸೆಯಿಂದ ಆತ್ಮಹತ್ಯೆಗೆ ಪ್ರಯತ್ನಿಸಿದಳಂತೆ... ಆಗ ಪ್ರಭಾಕರ ಅವಳನ್ನು ಉಳಿಸಿ ಅವಳಿಗೆ ಲೈಫ್ ಕೊಟ್ಟಿದಾನೆ..."

"ಒಳ್ಳೇದೇ ಆಯ್ತು... ಪ್ರಭಾಕರ ನಿಜವಾದ ಗಂಡಸು" ಇದ್ದಕ್ಕಿದ್ದಂತೆ ಶಾರದಾ ಸುಮ್ಮನಾಗಿ ಬಿಟ್ಟಳು.

"ಯಾಕೆ ಶಾರದಾ? ಪ್ರಭಾಕರನ್ನ ಹೊಗಳಿದೆ ಅಂತ ಹೊಟ್ಟೆಕಿಚ್ಚಾ...? ಒಂದು ವೇಳೆ ನಾನೇ ಇಂಥ ಪೌರುಷ ತೋರಿದ್ರೆ, ನಿನಗೆ ಹೆಮ್ಮೆ ಅಂತ ಅನ್ನಿಸುತ್ತಿರಲಿಲ್ವಾ...?"

"ಈಗ ಆ ಮಾತುಗಳೆಲ್ಲ ಬೇಡ, ಮಲಗೋಣ ಗುಡ್‌ನೈಟ್..."

"ಇದ್ದಕ್ಕಿದ್ದ ಹಾಗೆ ಮೂಡ್ ಬದಲಾಯ್ತಲ್ಲ ಯಾಕೆ?... ನನಗೆ ಇವತ್ತು ತುಂಬಾ ಮಾತನಾಡಬೇಕೆನಿಸಿದೆ. ಎಷ್ಟೋ ಮಾತುಗಳು ಅಂತರಂಗದಲ್ಲೇ ಉಳಿದು ಕೊರೀತಿರುತ್ತದೆ. ನನಗೆ ವಿಮಲನ ಬಗ್ಗೆ ಮರುಕವಾಗ್ತಿದೆ. ನಾನು ಅವಳ ಹತ್ತಿರ ಮಾತನ್ನಾಡಬೇಕು. ನಿನಗೆ ತೊಂದರೆ ಇಲ್ಲದಿದ್ದರೆ..."

"ನನಗೇನೂ ತೊಂದರೆ ಇಲ್ಲ. ಆದರೆ ವಿಮಲನ ಮನಸ್ಸು ಸೂಕ್ಷ್ಮವಾಗಿದೆ. ಅಲ್ಲದೇ ಈ ಮದುವೆ ನಿಲ್ಲಿಸಿ ಅಂತ ಹೇಳಿದ್ದಲ್ಲ ಯಾಕೆ ಅಂತ ಯೋಚಿಸ್ತಿದ್ದೆ. ನಿಮಗೆ ಹೇಗೂ ಹಳೆಯ ಪರಿಚಯ. ಸೂಕ್ಷ್ಮವಾಗಿ ತಿಳಿದುಕೊಳ್ಳಿ. ಕಾರಣ ಏನೂಂತ ಗೊತ್ತಾಗಬಹುದು"

"ಕಾರಣ ಏನೂಂತ ನಾನು ಊಹಿಸಿದೀನಿ..."

"ನೀವಾ? ಆಶ್ಚರ್ಯವೆ?... ನೀವು ಅವಳ ಹತ್ರ ಮಾತನ್ನೇ ಆಡಲಿಲ್ಲ... ಕಾರಣ ಏನು?"

"ನಾನು, ನಾನೇ ಕಾರಣ..."

"ನೀವಾ? ನೀವ್ಯಾಕೆ ಕಾರಣವಾಗ್ತೀರಿ?"

"ನನ್ನನ್ನು ನೋಡಿಯೇ ಅವಳು ಮೂರ್ಛೆ ಬಿದ್ದದ್ದು. ಅವಳು ನನ್ನನ್ನ ದ್ವೇಷಿಸ್ತಾಳೆ... ನಂಗೊತ್ತು..."

"ಅದ್ಯಾಕೆ ಅಂತ? ಸರಿಯಾಗಿ ಹೇಳಿ..."

"ಅವಳು ನನ್ನನ್ನು ಪ್ರೀತಿಸುತ್ತಿದ್ದಳು ಶಾರದಾ... ಆದರೆ ನಿಜ ಹೇಳ್ತೀನಿ... ನನಗೆ ಆ ಭಾವನೆಯೇ ಇರಲಿಲ್ಲ. ನಾವಿಬ್ಬರೂ ಸದರವಾಗಿ ಮಾತನಾಡು ತ್ತಿದ್ದುದು ನಿಜ. ಆದರೆ ಸಲುಗೆಯಲ್ಲಿ ಯಾವುದೇ ಕೆಟ್ಟ ಭಾವನೆಗಳಿರಲಿಲ್ಲ. ಆದರೆ ಅವಳು ತಪ್ಪಾಗಿ ಭಾವಿಸಿದಳು. ನನ್ನ ರೂಮಿಗೆ ಬಂದು ಗಂಟೆ ಗಟ್ಟಲೆ ಮಾತನ್ನಾಡುತ್ತಿದ್ದಳು. ನನ್ನ ಜೊತೆ ಜೊತೆಯಲ್ಲಿ ಸಮಾಜ ಸೇವೆಯ ಕಾರ್ಯಗಳಲ್ಲಿ ಭಾಗವಹಿಸುತ್ತಿದ್ದಳು. ಆದರೆ ನಾನೆಂದೂ, ಅವಳನ್ನು ಕೆಟ್ಟದಾಗಿ ನೋಡಿರಲಿಲ್ಲ, ಇದು ಸತ್ಯ"

"ನಾನು ನಂಬ್ತೀನಿ... ಆದರೆ ವಿಮಲ ಅವಳ ಗಂಡನಿಗೆ ಹೇಳಿರುವುದೇ ಬೇರೆ. ನಿಮ್ಮಿ ನಿಮ್ಮ ಮಗಳು ಅಂತ ಅವಳ ಭಾವನೆ..." ಶಾರದಾ ತಡವರಿಸಿದಳು.

"ಶಾರದಾ! ಇದೆಂಥಾ ಕಲ್ಪನೆ? ಛೀ..."

"ನಾನು ಕಲ್ಪಿಸಿದ್ದಲ್ಲ. ನಿಮ್ಮಿಬ್ಬರಲ್ಲೂ ದೇಹ ಸಂಬಂಧ ಇತ್ತು ಅಂತ ಅವಳ್ಯಾಕೆ ಸುಳ್ಳು ಹೇಳಿದಾಳೆ?"

"ಬಹುಶಃ ನನ್ನನ್ನು ಕೆಟ್ಟವನನ್ನಾಗಿ ಮಾಡುವುದಕ್ಕಿರಬಹುದು. ಅವಳ ಪ್ರೀತಿಯನ್ನು ನಾನು ತಿರಸ್ಕರಿಸಿದ್ದೆನಲ್ಲವೆ?"

"ಈ ವಿಷಯವನ್ನು ನೀವ್ಯಾಕೆ ನನ್ಗೆ ಹೇಳಲಿಲ್ಲ?"

"ಹೇಳದೇ ಇರುವಂಥ ತಪ್ಪನ್ನು ನಾನು ಮಾಡಿರಲಿಲ್ಲ. ಅದಕ್ಕೆ ಸಮಯವೂ ಒದಗಿರಲಿಲ್ಲ. ಅಲ್ಲದೇ... ನಿನ್ನ ಬಗ್ಗೆ ಗೌರವ ಆದರ ಎಲ್ಲಾ ಇತ್ತು... ನನ್ನ ಬಗ್ಗೆ ಹೇಳಿಕೊಳ್ಳಲು ಹೀನಾಯವೆನಿಸಿತ್ತು. ನಾನು ಏನೂ ತಪ್ಪು ಮಾಡಿಲ್ಲ, ಶಾರದಾ ನನ್ನನ್ನ ನಂಬು"

"ಹೇಳಿದ್ನಲ್ಲ, ನಾನು ನಂಬ್ತೀನಿ. ನಿಮ್ಮ ಬಗ್ಗೆಯೂ ನನಗೆ ಗೌರವಿದೆ. ಗಂಡಸರೇ ಮೋಸಗಾರರು ಅಂತ ನಾನಂದುಕೊಂಡಿದ್ದೆ. ಆದರೆ ಹೆಂಗಸರೂ ಇದಕ್ಕೆ ಹೊರತಲ್ಲ ಅಂತ ಈಗ ಅರ್ಥವಾಯ್ತು..."

"ವಿಮಲ ಎಷ್ಟು ಕೀಳು ಮಟ್ಟಕ್ಕೆ ಇಳೀತಾಳೆ ಅಂತ ನಾನಂದುಕೊಂಡಿರ ಲಿಲ್ಲ"

"ಆದಷ್ಟು ಬೇಗ ಶಶಾಂಕನ್ನ, ನಿಮ್ಮೀನ ವಾಪಸ್ಸು ಕಳಿಸಿ ಬಿಡೋಣ. ಇಲ್ಲದಿದ್ದರೆ ಏನು ಕಿತಾಪತಿ ಹಚ್ತಾಳೋ?"

"ನಾವ್ಯಾಕೆ ಅವಳಿಗೆ ಹೆದರಬೇಕು? ಅಂಥಾದ್ದೇನಾಗುಲ್ಲ. ಈ ವಿಷಯದಲ್ಲಿ ಪ್ರಭಾಕರನ ಸಹಕಾರವಿದೆ. ನಿಮ್ಮಿ ಅವರಿಬ್ಬರಿಗೇ ಹುಟ್ಟಿದ ಮಗಳು. ಸಧ್ಯದಲ್ಲೇ ಆ ರಿಪೋರ್ಟ್ ಬರಲಿದೆ"

"ಏನು ರಿಪೋರ್ಟ್? ಎಂಥಾ ರಿಫೋರ್ಟ್?"

"ಡಿ.ಎನ್.ಎ. ಟೆಸ್ಟ್‌ಗೆ ಎಲ್ಲರ ಬ್ಲಡ್ ಕಳಿಸಿದ್ದಾಗಿದೆ. ನಿಜ ಏನೂಂತ ತಿಳಿದೇ ತಿಳಿಯುತ್ತೆ"

"ಸಧ್ಯ... ನನ್ನ ಬ್ಲಡ್ ಟೆಸ್ಟ್ ಮಾಡಿಸ್ಬೇಕು ಅಂತ ಹೇಳಲಿಲ್ಲವಲ್ಲ ನೀನು. ಡಾಕ್ಟರುಗಳು ಬಹಳ ಬೇಗ ಹೆದರಿಸಿ ಬಿಡ್ತೀರಿ"

"ನಾನೆಲ್ಲಿ ಹೆದರಿಸಿದೆ? ನೀವೇ ಎಲ್ಲಾ ಹೇಳಿದ್ದು... ನಾನಾಗಿಯೇ ನಾನು ಏನಾದರೂ ಕೇಳಿದ್ನಾ...?"

"ವಿಮಲ ನಿನ್ನೊಡನೆ ಏನನ್ನಾದರೂ ಹೇಳುವ ಮೊದಲು, ನಾನು ನಿನಗೆ ಎಲ್ಲವನ್ನು ಹೇಳಿ ಬಿಡ್ಬೇಕು ಅಂತ ಅನ್ನಿಸ್ತು..."

"ವಿಮಲ ಹೇಳಿದ್ರೂ ನಾನು ನಂಬ್ತಿರಲಿಲ್ಲ..."

"ನೀನು ತುಂಬಾ ಒಳ್ಳೆಯವಳು ಶಾರದಾ..." ಪ್ರೀತಿಯಿಂದ ಅವಳ ಹೆಗಲ ಮೇಲೆ ಕೈ ಹಾಕಿದ.

ನೀವು ತಿಳಿದುಕೊಂಡಿರುವಷ್ಟು ನಾನು ಒಳ್ಳೆಯವಳಲ್ಲ ಅಂತ ಹೇಳ ಬೇಕೆಂದುಕೊಂಡರೂ, ಹೇಳಲು ಹಿಂಜರಿದಳು.

"ಅಬ್ಬಾ... ನನಗೀಗ ಯಾವ ಭಯವೂ ಇಲ್ಲ. ನೀನು ನನ್ನ ಹೆಂಡತಿಯಾಗಿ ಸಿಕ್ಕಿದ್ದು ನನ್ನ ಪುಣ್ಯ. ಆದರೆ ಪ್ರಭಾಕರನ ಬಗ್ಗೆ ಅಯ್ಯೋ ಅಂತ ಅನ್ನಿಸುತ್ತೆ. ವಿಮಲನಿಂದ ಅವನಿಗೆ ಯಾವ ಸುಖವೂ ಸಿಗುತ್ತಿಲ್ಲ"

"ಅದು ಸ್ವಯಂ ಕೃತಾಪರಾಧ... ಆದರ್ಶದ ಬೆನ್ನೇರಿ ಅವಳನ್ನು ತನ್ನ ಬಳಿಗೆ ಎಳೆದುಕೊಂಡಿದಾನೆ. ಈಗ ಚಿಂತಿಸಿ ಫಲವೇನು?"

"ಯಾಕೆ ಹೀಗೆ ಹೇಳ್ತಿದೀಯಾ...?"

"ಸುಮ್ಮನೇ ಹೀಗೇ ಹೇಳಿದೆ. ಈ ಪ್ರೀತಿ, ಪ್ರೇಮ, ಆದರ್ಶ, ಮದುವೆ ಎಲ್ಲಾ ಸಿಲ್ಲಿಯಾಗಿ ಕಾಣುತ್ತೆ. ಯಾವುದರಲ್ಲೂ ಅರ್ಥ ಇಲ್ಲ ಅಂತ ಅನ್ನಿಸುತ್ತೆ..."

"ಯಾಕೆ ಶಾರದಾ? ನನ್ನ ಮೇಲೆ ಕೋಪಾನಾ? ನೀನು ಎಂದೂ ಹೀಗೆ ಮಾತಾಡಿದವಳಲ್ಲ"

"ಇಲ್ಲ... ಕೋಪ ತಾಪ ಏನೂ ಇಲ್ಲ. ಆದರೂ, ನಾನು ಹೆಚ್ಚು ಹೆಚ್ಚು ಧ್ಯಾನ ಯೋಗ ಮಾಡಬೇಕು.. ಇಲ್ಲದಿದರೆ ನೆಮ್ಮದಿ ಕೆಡುತ್ತೆ"

"ನಿನ್ನ ಗುರು ಯಾರು?... ಯಾರ ಫೋಟೋನೂ ಇಲ್ಲ"

"ನನಗೆ ಯೋಗವನ್ನು ಹೇಳಿ ಕೊಟ್ಟ ಗುರು ಸರಿ ಇರಲಿಲ್ಲ. ಅದಕ್ಕೆ ಫೋಟೋ ಇಲ್ಲ ಪ್ರಭಾಕರನೊಂದಿಗೆ ಯೋಗಾಭ್ಯಾಸವನ್ನು ಮಾಡುತ್ತಿದ್ದ ದಿನಗಳು ನೆನಪಿಗೆ ಬಂದವು. ಯೋಗವನ್ನು ಹೇಳಿ ಕೊಡುವ ನೆವದಲ್ಲಿ ಅಂಗಾಂಗವನ್ನು ಸ್ಪರ್ಷಿಸುತ್ತಿದ್ದ. ಕಚಗುಳಿ ಇಟ್ಟು ನಗಿಸುತ್ತಿದ್ದ. ಒಮ್ಮೊಮ್ಮೆ ಎತ್ತಿ ಉಯ್ಯಾಲೆ ಆಡಿಸುತ್ತಿದ್ದ. ಪ್ರೀತಿಯ ಮಳೆಯಲ್ಲಿ ತೋಯಿಸುತ್ತಿದ್ದ. ನೀನು ಓದನ್ನು ನಿಲ್ಲಿಸು ಸಾಕು. ನಾವಿಬ್ಬರೂ ಬೇಗ ಮದುವೆಯಾಗೋಣ ಎಂದು ಪೀಡಿಸುತ್ತಿದ್ದ"

"ಇಲ್ಲ, ಪ್ರಭಾಕರ್ ನಾನು ಡಾಕ್ಟರಾಗಲೇ ಬೇಕು. ನನ್ನ ಮೇಲೆ ನಿಮಗೆ ಪ್ರೀತಿ ಇದ್ದರೆ ನನ್ನ ಓದು ಮುಗಿದು, ಪ್ರಾಕ್ಟೀಸ್ ಪ್ರಾರಂಭಿಸುವವರೆಗೂ ಕಾಯಲೇ ಬೇಕು" ಎನ್ನುತ್ತಿದ್ದಳು.

ಒಮ್ಮೊಮ್ಮೆ ಕೋಪಗೊಳ್ಳುತ್ತಿದ್ದ "ನೀನು ಪ್ರಾಕ್ಟೀಸ್ ಪ್ರಾರಂಭಿಸುವಷ್ಟರಲ್ಲಿ ನಾವಿಬ್ಬರೂನು ಮುದುಕರಾಗಿ ಬಿಡುತ್ತೇವೆ. ನನಗೆ ಕೆಸಲವಿದೆ, ನಾನು ನಿನ್ನನ್ನು ಸಾಕಬಲ್ಲೆ. ನೀನು ಸಂಪಾದಿಸಬೇಕಾಗಿಲ್ಲ" ಎನ್ನುತ್ತಿದ್ದ.

"ಸಂಪಾದನೆಗಾಗಿ ನಾನು ಈ ಕೋರ್ಸ್ ಮಾಡುತ್ತಿಲ್ಲ. ಜನಸೇವೆ ಮಾಡ ಬೇಕೆಂಬುದೇ ನನ್ನ ಗುರಿ. ಅದಕ್ಕೆ ನೀವು ಅಡ್ಡಿ ಬರಬೇಡಿ..." ನೀವೂ ಡಾಕ್ಟರಾ ಗಲು ಬಯಸಿದರೆ ಹೇಳಿ. ನಾನು ನಿಮ್ಮನ್ನು ಓದಿಸ್ತೀನಿ. ಇಬ್ಬರೂ ಸೇರಿ ಜನ ಸೇವೆ ಮಾಡೋಣ. ನರ್ಸಿಂಗ್ ಹೋಂ ಪ್ರಾರಂಭಿಸೋಣ. ಯೋಗಶಿಕ್ಷಣ ಕೇಂದ್ರವನ್ನು ಸಥಾಪಿಸೋಣ. ಇದರಿಂದ ನಾಲ್ಕು ಜನರಿಗೆ ಉಪಕಾರವಾಗುತ್ತದೆ. ಇಲ್ಲದಿದ್ದರೆ ಅದೆಂತಹ ಜೀವನ...? ನಮ್ಮ ಜೀವನದ ಸ್ವಲ್ಪ ಭಾಗವನ್ನಾದರೂ ಇತರರಿಗೆ ಮೀಸಲಿಡಬೇಕು. ಅದರಲ್ಲಿ ಆನಂದವಿರುತ್ತದೆ. ಅದರಲ್ಲಿ ಸುಖ ವಿರುತ್ತದೆ" ಉಪದೇಶ ಮಾಡುತ್ತಿದ್ದಳು.

"ನಿನ್ನಲ್ಲಿನ ಆಲೋಚನೆಗಳು ನನ್ನಲ್ಲಿಲ್ಲ ಶಾರೀ... ನಾನು ಸಾಮಾನ್ಯ ಮನುಷ್ಯ. ಊಟ ನಿದ್ದೆಗಳಲ್ಲಿ ತೃಪ್ತಿ ಪಡುವವನು. ನಿನ್ನ ದೊಡ್ಡ ಮಾತುಗಳು ನನಗೆ ಅರ್ಥವಾಗುವುದಿಲ್ಲ. ರಾಗ ಭೋಗ ಯೋಗಗಳಲ್ಲಿ ನಂಬಿಕೆಯುಳ್ಳವನು. ಯಾವುದೇ ಆದರ್ಶದ ಮಾತುಗಳು ನನಗೆ ಹಿಡಿಸುವುದಿಲ್ಲ"

ಹೀಗೆ ಹೇಳಿದ ಪ್ರಭಾಕರ ಕೋಪಗೊಂಡಿದ್ದ. ಅವಳು ರಮಿಸಿದ್ದಳು.

"ಓ.ಕೇ. ನಿಮಗೆ ಹೇಗೆ ಬೇಕೋ ಹಾಗೇ ಇರಿ. ಆದರೆ ಸಧ್ಯಕ್ಕೆ ಮದುವೆ ಬೇಡ... ಮದುವೆ ಆಗಿ, ಸಂಸಾರ ಪ್ರಾರಂಭಿಸಿ ಬಿಟ್ಟರೆ, ಹೀಗೆ ಹಾಯಾಗಿ ಇರುವುದಕ್ಕೆ ಆಗುವುದಿಲ್ಲ. ಈಗ ಯಾವ ನಿಬಂಧನೆಯೂ ಇಲ್ಲ. ಹಾಯಾಗಿ ದೀವಿ ಅಲ್ವಾ...?"

"ನಿಬಂಧನೆ ಇದೆ. ಹತ್ತಿರ ಬರುಕ್ಕೇ ಬಿಡುಲ್ಲ ನೀನು..."

"ಅದೊಂದು ಮಾತ್ರ ಬೇಡ... ಸಂಯಮ ಇರಬೇಕು. ಈಗಲೇ ಎಲ್ಲಾ ಮುಗಿಸಿ ಬಿಟ್ಟರೆ, ಮುಂದೆ ಜೀವನ ಸಪ್ಪೆಯಾಗಿ ಬಿಡುತ್ತದೆ. ನೀವು ಜಾಣ ಅಲ್ವಾ? ಎಂತೆಂತಹ ಯೋಗಾಸನಗಳಿವೆ. ಮನಸ್ಸನ್ನು ಸ್ಥಿಮಿತದಲ್ಲಿಟ್ಟು ಕೊಳ್ಳೋಕೆ..." ಅವನನ್ನು ಹೊಗಳಿದ್ದಳು. ಅವನು ಉಬ್ಬಿ ಹೋಗಿದ್ದ.

ಅವಳ ಓದು ವ್ಯಾಸಂಗಗಳಲ್ಲಿ ಅವಳು ನಿರತಳಾಗಿದ್ದಾಗ ಅವರ ಒಡನಾಟ ಕಡಿಮೆ ಆಗಿತ್ತು. ಒಮ್ಮೆ ಇದ್ದಕ್ಕಿದ್ದಂತೆ ಹಾಸ್ಟೆಲ್ಲಿಗೆ ಬಂದು, ಅವಳನ್ನು ಆಸ್ಪತ್ರೆ ಯೊಂದಕ್ಕೆ ಕರೆದುಕೊಂಡು ಹೋಗಿದ್ದ. "ಇಲ್ಲಿ ಮಲಗಿದಾಳಲ್ಲ ಆ ಯುವತಿ, ನೀರಿಗೆ ಬಿದ್ದು ಆತ್ಮಹತ್ಯೆಗೆ ಪ್ರಯತ್ನಿಸಿದ್ದಳು. ನಾನು ಅವಳ ಜೀವನವನ್ನು ಉಳಿಸಿದ್ದೇನೆ..." ಪರಾಕ್ರಮಿಯಂತೆ ಹೇಳಿಕೊಂಡ. "ಇವಳನ್ನು ಹುಡುಕಿಕೊಂಡು ಯಾರೂ ಬಂದಿಲ್ಲ. ಸಧ್ಯಕ್ಕೆ ಇವಳ ಜವಾಬ್ದಾರಿ ನನ್ನದೇ ಆಗಿದೆ" ಎಂದಿದ್ದ.

ಕೆಲವೇ ದಿನಗಳ ನಂತರ, ಬಂದವನು ಆಹ್ವಾನ ಪತ್ರಿಕೆಯನ್ನು ಕೊಟ್ಟು ಮದುವೆಗೆ ಕರೆದಿದ್ದ.

"ಆ ಯುವತಿಗೆ ನನ್ನ ಅವಶ್ಯಕತೆ ಇದೆ. ನಾನು ಅವಳಿಗೆ ಬಾಳನ್ನು ಕೊಡುತ್ತಿದ್ದೇನೆ. ಮದುವೆಗೆ ಖಂಡಿತಾ ಬರಬೇಕು" ಎಂದಿದ್ದ.

"ಏನು ಹೇಳ್ತಿದೀರಿ ಪ್ರಭಾಕರ್... ಹಾಗಾದರೆ ನಮ್ಮಿಬ್ಬರ ಪ್ರೀತಿಗೆ ಏನೂ ಅರ್ಥ ಇಲ್ವಾ?" ಅಂತ ಕೇಳಿದ್ದಳು.

"ನಿನಗೆ ನಿನ್ನ ಕ್ವಾಲಿಫಿಕೇಶನ್ ಇದೆ. ಪ್ರೊಫೆಷನ್ ಇದೆ. ನಿನ್ನ ಆದರ್ಶಗಳು ಇವೆ. ನಿನಗೆ ಕಷ್ಟವಾಗುವುದಿಲ್ಲ. ಅವಳ ಮನಃಸ್ಥಿತಿ ಸರಿ ಇಲ್ಲ. ಅವಳಿಗೆ ಆಸರೆಯ ಅಗತ್ಯವಿದೆ. ನನ್ನನ್ನು ಬಿಟ್ಟು ಕೊಡು..." ಕೇಳಿಕೊಂಡಿದ್ದ.

"ನನ್ನ ಪ್ರೀತಿಯನ್ನು ಮರೆತು, ದೊಡ್ಡ ಆದರ್ಶ ವ್ಯಕ್ತಿಯಾಗಲು ಹೊರಟಿದೀಯ... ಏನೇ ಆದರೂ ನಾನೂ ಒಬ್ಬಳು ಹೆಣ್ಣು. ನನ್ನಲ್ಲೂ

ಭಾವನೆಗಳಿವೆ. ಅದಕ್ಕೆ ಧಕ್ಕೆ ಬರುತ್ತೆ ಅಂತ ಅನ್ನಿಸುಲ್ವಾ..?" ಅಸಹನೆಯಿಂದ ನುಡಿದಳು.

"ಕಾಲ ಎಲ್ಲವನ್ನು ಸರಿ ಮಾಡುತ್ತದೆ. ನಿನಗಾಗಿ ಕಾಯುತ್ತಾ ಕೂತಿರುವ ಸಹನೆ ನನಗಿಲ್ಲ. ಆ ಯುವತಿ ನನಗಾಗಿ ಕಾದಿದ್ದಾಳೆ. ನಾನು ಬರ್ತೀನಿ" ಅಷ್ಟು ಹೇಳಿ ಹೊರಟೇ ಹೋಗಿದ್ದ.

ಅವನು ಹೇಳಿದ್ದು ನಿಜವಾಗಿತ್ತು. ಕ್ರಮೇಣ ಅವನನ್ನು ಮರತೇ ಅಂತ ಅಂದುಕೊಂಡಿದ್ದಳು. ಪ್ರಭಾಕರ ಸುಂದರನಾಗಿದ್ದ. ಸದೃಢ ಶರೀರದ ಆಕರ್ಷಣೆ, ಯೌವನ ಎಲ್ಲವೂ ಇತ್ತು. ಬಹುಶಃ ಆ ಯುವತಿ ನನಗಿಂತ ಸುಂದರಿಯಾಗಿರಬೇಕು. ಆದರ್ಶದ ಹೆಸರನ್ನು ಹೇಳಿ, ಇವಳ ಭಾವನೆಗಳನ್ನು ಕರಕಲು ಮಾಡಿ ಮರೆಯಾಗಿದ್ದ. ತನ್ನ ಕೆಲಸ ಕಾರ್ಯಗಳಲ್ಲಿ ಅವನ ಬಗ್ಗೆ ಚಿಂತಿಸುವುದನ್ನು ಬಿಟ್ಟಿದ್ದಳು. ಈ ಸಮಯದಲ್ಲಿ ಶಂಕರ ಇವಳ ಬಾಳಿನಲ್ಲಿ ಪ್ರವೇಶ ಮಾಡಿದ.

ಇವಳು ಓಡಿಸುತ್ತಿದ್ದ ಕಾರಿಗೆ ಶಂಕರ ಓಡಿಸುತ್ತಿದ್ದ ಮೋಟಾರ್ ಬೈಕ್ ಡಿಕ್ಕಿ ಹೊಡೆದು, ಶಂಕರನಿಗೆ ಸೀರಿಯಸ್ ಆಗಿತ್ತು. ಬಲಗಾಲಿಗೆ ತೀವ್ರವಾಗಿ ಪೆಟ್ಟಾಗಿತ್ತು. ಪ್ರಜ್ಞಾ ಶೂನ್ಯನಾಗಿ ಬಿದ್ದವನನ್ನು ಇವಳೇ ತನ್ನ ಕಾರಿನಲ್ಲಿ ಆಸ್ಪತ್ರೆಗೆ ಸೇರಿಸಿದ್ದಳು. ಅವನ ಆಪರೇಷನ್‌ಗೆ ಇವಳೇ ಖರ್ಚು ಮಾಡಿದಳು. ಕೆಲವು ಸ್ನೇಹಿತರನ್ನು ಹೊರತು ಅವನಿಗೆ ತಂದೆ ತಾಯಿ ಸಂಬಂಧಿಗಳು ಯಾರೂ ಇರಲಿಲ್ಲ. ಅವನನ್ನು ತನ್ನ ಮನೆಯ ಔಟ್ ಹೌಸಿನಲ್ಲಿಟ್ಟುಕೊಂಡು ಉಪಚರಿಸಿದಳು. ಕ್ರಮೇಣ, ಕೋಲನ್ನೂರಿಕೊಂಡು ನಡೆಯುವಷ್ಟರ ಮಟ್ಟಿಗೆ ಆದ. ದಿನಕ್ಕೊಮ್ಮೆ ಅವನನ್ನು ಕಂಡು ಮಾತನಾಡಿಸಿ ಬರುತ್ತಿದ್ದಳು. ನೀರಸವಾಗಿದ್ದ ಜೀವನದಲ್ಲಿ ಸ್ವಲ್ಪ ಉತ್ಸಾಹ ಮೂಡಲಾರಂಭಿಸಿತ್ತು. ಅವನ ಮಾತುಕತೆ, ನಡೆ ನುಡಿಗಳು ಅವಳನ್ನು ಆಕರ್ಷಿಸಿದ್ದವು. ಹೆಚ್ಚು ಓದಿಲ್ಲದ, ನಿರುದ್ಯೋಗಿಯಾಗಿದ್ದ, ಶಂಕರ ಸಮಾಜ ಸೇವೆ ಮಾಡುತ್ತಿದ್ದ ಎಂದು ತಿಳಿದು, ಅವನ ಬಗ್ಗೆ ಗೌರವ ಮೂಡಿತು.

ಅವನ ಜೀವನೋಪಾಯಕ್ಕೆ ಏನಾದರೂ ಸಹಾಯ ಮಾಡಿ, ಅವನಿಗೆ ಒಂದು ನೆಲೆಯನ್ನು ಕೊಡಬೇಕು ಎಂದು ಅನ್ನಿಸಿ, ಅವನನ್ನು ತನ್ನ ಊರಿಗೆ ಕರೆದುಕೊಂಡು ಹೋಗಿ, ತನ್ನ ತಾಯಿ ತಂದೆಗೂ, ಅಣ್ಣಂದಿರಿಗೂ ಪರಿಚಯಿಸಿದಳು. ಕುಂಟಿಕೊಂಡು ನಡೆಯುವವನಿಂದ ಏನು ಉಪಯೋಗ ಎನ್ನುವಂತೆ ಅಣ್ಣಂದಿರು ಉದಾಸೀನವಾಗಿ ಮಾತನಾಡಿದರು. ಬೇಸರಗೊಂಡ ಶಾರದಾ ವಾಪಸ್ಸು ಅವನನ್ನು ಕರೆದುಕೊಂಡು ಸಿಟಿಗೆ ಬಂದು ಬಿಟ್ಟಳು.

ಮನೆಯಲ್ಲಿ ಅಡಿಗೆಯವರು, ಕೆಲಸದವರು ಎಲ್ಲರೂ ಇದ್ದರು. ಇವಳು ಆಸ್ಪತ್ರೆಗೆ ಹೊರಟು ಹೋದರೆ ಇವನು ಒಂಟಿ. ನಾನು ಎಷ್ಟು ದಿನ ಹೀಗೆ

ನಿಮಗೆ ಹೊಣೆಯಾಗಿರಲಿ? ನಾನು ಎಲ್ಲಾದರೂ ಹೋಗ್ತೀನಿ... ಹೋಗಲು ಬಿಡಿ" ಕೇಳಿಕೊಂಡಿದ್ದ.

"ಎಲ್ಲಿಗೆ ಹೋಗ್ತೀರಿ? ನಿಮ್ಮ ಈ ಸ್ಥಿತಿಗೆ ನಾನೇ ಕಾರಣ. ನಾನು ನಿಮಗೆ ಎಲ್ಲಿಯಾದರೂ ಕೆಲಸ ಕೊಡಿಸಲು ಪ್ರಯತ್ನಿಸುತ್ತೇನೆ. ಅಲ್ಲಿಯವರೆಗೆ ನಮ್ಮ ಮನೆಯಲ್ಲಿ ಇರಬಹುದು. ಇಲ್ಲದಿದ್ದರೆ ನಾನು ನಿಮಗೆ ವಂಚನೆ ಮಾಡಿದಂತಾಗುತ್ತದೆ"

"ಹಾಗೆಂದುಕೊಳ್ಳೇಡಿ, ಈಗಾಗಲೇ ನಿಮ್ಮ ಉಪಕಾರದ ಋಣ ಸಾಕಷ್ಟು ಭಾರಿಯಾಗಿದೆ. ನನಗೆ ವಿದ್ಯಾಭ್ಯಾಸದ ಅರ್ಹತೆ ಇಲ್ಲ. ಉದ್ಯೋಗದ ಅನುಭವವಿಲ್ಲ. ನನಗೆ ಸುಲಭದಲ್ಲಿ ಕೆಲಸ ಸಿಗುವುದಿಲ್ಲ. ಈಗಾಗಲೇ, ಇಲ್ಲಿ ತಿಂದುಂಡುಕೊಂಡು ಸಾಕಷ್ಟು ಸೋಮಾರಿಯಾಗಿದೀನಿ. ಕೂಲಿ ನಾಲಿ ಮಾಡಿಕೊಂಡು ಜೀವಿಸುವುದೂ ಕಷ್ಟವೇ..." ಆರಡಿಯ ದೇಹದ ಶಂಕರ ನೊಂದು ನುಡಿದಾಗ, ಅವಳಿಗೆ ತಪ್ಪೆಲ್ಲಾ ತನ್ನದೇ ಅಂತ ಅನ್ನಿಸಿತ್ತು. ಅವನು ಅಲ್ಲಿರತೊಡಗಿದ ಮೇಲೆ ಅವನ ಸ್ನೇಹಿತರು ಬರುವುದು ಕಡಿಮೆ ಆಗಿತ್ತು. ಊರಿನಿಂದ ಬಂದಿದ್ದ ಅಣ್ಣ, ಶಂಕರನನ್ನು ಮನೆಯಲ್ಲಿಟ್ಟುಕೊಂಡಿದ್ದರ ಬಗ್ಗೆ ಕೀಳಾಗಿ ಮಾತನಾಡಿದ್ದ.

"ಯೋಗ ಕಲಿಯುವ ನೆವದಲ್ಲಿ, ನಿನ್ನ ಬಾಯ್‌ಫ್ರೆಂಡ್ ಜೊತೆ ತಿರುಗಾಡುತ್ತಿದ್ದುದನ್ನು ಅನೇಕರು ನೋಡಿದಾರೆ. ಈಗ ನೋಡಿದರೆ ಹೀಗೆ... ಪರದೇಶಿಯನ್ನು ಮನೆಯಲ್ಲಿಟ್ಟುಕೊಂಡಿದೀಯ... ನಿನ್ನಂಥೋಳಿಂದ ನಮಗೆಲ್ಲಾ ತಲೆ ಎತ್ತದ ಹಾಗಾಗಿದೆ. ಅವನನ್ನು ಮನೆಯಿಂದ ಆಚೆ ಕಳಿಸು. ಅಪ್ಪ ನಿನಗೆ ವರನನ್ನು ಹುಡುಕುತ್ತಿದಾರೆ" ಎಂದಿದ್ದ.

"ಇವರಿಗೆ ಕಾಲು ಊನವಾಗಿದೆ. ಅದಕ್ಕೆ ನಾನೇ ಕಾರಣ. ಸಧ್ಯಕ್ಕೆ ಇವರಿಗೆ ನನ್ನನ್ನು ಬಿಟ್ಟರೆ ಬೇರೆ ಯಾರೂ ಇಲ್ಲ. ಆಫೀಸಿನ ಕೆಲಸ ಗೊತ್ತಿಲ್ಲ. ಕೂಲಿ ಕೆಲಸ ಮಾಡಕ್ಕಾಗುತ್ತಾ?... ಅವರ ಪಾಡಿಗೆ ಅವರಿದಾರೆ... ಅವರಿಗೆ ಊಟ ಹಾಕಿದರೆ ನನಗೆ ಬಡತನ ಬರುಲ್ಲ. ನನ್ನ ಪ್ರಾಯಶ್ಚಿತ್ತವೂ ಆಗುತ್ತೆ"

"ಜನ ಬಾಯಿಗೆ ಬಂದ ಹಾಗೆ ಮಾತಾಡ್ತಾರೆ"

"ಆಡೋರೆ ಬಾಯನ್ನು ಮುಚ್ಚಿಸುಕ್ಕೆ ಆಗುಲ್ಲ. ನಿನಗೆ ಅಷ್ಟು ಮುತುವರ್ಜಿ ಇದ್ದರೆ, ನೀನೂ ನಿನ್ನ ಸಂಸಾರ ಸಮೇತ ಬಂದು ಇಲ್ಲಿ ಕಾವಲಿರು. ಅಥವಾ ಅವರಿಗೆ ಒಂದು ಸರಿಯಾದ ಉದ್ಯೋಗವನ್ನು ಹುಡುಕಿಕೊಡು" ಅಣ್ಣ ಹೊರಟು ಹೋಗಿದ್ದ.

ಅಣ್ಣ ತಂಗಿಯರ ಮಾತುಗಳನ್ನು ಕೇಳಿಸಿಕೊಂಡಿದ್ದ ಶಂಕರ ಮನೆ ಬಿಟ್ಟು ಹೊರಟು ಹೋಗಿದ್ದ. ಅವನಿಲ್ಲದ ಮನೆ ಭಣ ಭಣ ಎನ್ನುತ್ತಿತ್ತು.

ಅವನ ನೆನಪು ಒತ್ತಿಕೊಂಡು ಬರುತ್ತಿತ್ತು. ಪೋಲೀಸ್ ಕಂಪ್ಲೆಂಟ್ ಕೊಟ್ಟು ಅವನನ್ನು ಹುಡುಕಿಸುವ ಪ್ರಯತ್ನ ಮಾಡಿದಳು. ಪೇಪರ್ರಿನಲ್ಲಿ ಪ್ರಕಟಣೆ ಕೊಡಿಸಿದಳು.

ಪೋಲಿಸರು ಅವನು ಸಿಕ್ಕಿರುವ ವಿಷಯವನ್ನು ತಿಳಿಸಿದರು. ಶಾರದಾ ಅವನನ್ನು ಮತ್ತೆ ಕರೆತಂದಳು. "ಇಲ್ಲಿ ನಿಮ್ಮ ಜೊತೆ ಇದ್ದರೆ ನಿಮಗೆ ಅಪವಾದ. ಇಲ್ಲಿ ಇರಲು ನನಗೆ ಯಾವ ಅಧಿಕಾರವೂ ಇಲ್ಲ. ಇಲ್ಲಿ ನಾನು ಹೇಗಿರಲಿ?" ಕೇಳಿದ.

"ಸ್ನೇಹಿತನಂತೆ ಇಲ್ಲಿ ಇರಬಹುದಲ್ಲ..."

"ನಾನು ಗಂಡಸು, ನೀನು ಹೆಂಗಸು. ನಮ್ಮ ಸ್ನೇಹಕ್ಕೆ ಸಮಾಜ ಕಟ್ಟುವ ಕತೆಯೇ ಬೇರೆ. ಈಗಾಗ್ಲೇ ನನ್ನಿಂದ ನಿಮಗೆ ತೊಂದರೆ ಆಗಿದೆ. ನಾನು ಯಾವುದಾದರೂ ಆಶ್ರಮದಲ್ಲಿ ಇರ್ತೀನಿ... ಹೇಗೋ ಜೀವನ ನಡೆಯುತ್ತೆ"

"ಕಾಳನ್ನು ಕಾಲಿನಿಂದ, ಕಸದಲ್ಲಿ ಕೆದಕಿ ಹುಡುಕಿ ತೆಗೆಯುವ ಕೋಳಿಯ ಕಾಲನ್ನೇ ಕತ್ತರಿಸಿದಂತಾಗಿದೆ ನಿಮ್ಮ ಪರಿಸ್ಥಿತಿ. ಯಾರು ಏನಾದ್ರೂ ಹೇಳಲಿ, ನೀವು ಇಲ್ಲಿಂದ ಕದಲ ಕೂಡದು"

"ಬೇಡ ಡಾಕ್ಟರ್, ನಿಮ್ಮ ಈ ನಿರ್ಧಾರದಿಂದ ನಿಮಗೆ ಕೇಡು"

"ನನಗೆ ನಾನು ಕೇಡನ್ನು ತಂದುಕೊಳ್ಳುವುದಿಲ್ಲ. ಇದಕ್ಕೆ ಬೇರೆಯೇ ಪರಿಹಾರವಿದೆ. ನಾವಿಬ್ಬರೂ ಮದುವೆಯಾಗೋಣ" ಶಂಕರ ತನ್ನ ಕಿವಿಗಳನ್ನು ತಾನೇ ನಂಬದವನಂತೆ ಬಾಯಿ ಬಿಟ್ಟು ನಿಂತ.

"ಹೌದು ಶಂಕರ್... ಬರೀ ಬಾಯಲ್ಲಿ ಮಾತನಾಡಿದರೆ ಪ್ರಯೋಜನವಿಲ್ಲ. ಈ ಪರಿಹಾರ ಅನುಚಿತವಾಗಿದೆ. ಇದರಿಂದ ಯಾರಿಗೂ ತೊಂದರೆ ಇಲ್ಲ. ಮಾತನಾಡುವಂತೆ ಇಲ್ಲ. ನೀವು ಇದಕ್ಕೆ ಒಪ್ಪಿಕೊಳ್ಳಲೇ ಬೇಕು"

"ನಿಮ್ಮ ಘನತೆ, ಅಂತಸ್ತೇನು... ನಿಮಗೆ ನಾನು ಸರಿ ಸಮಾನನಲ್ಲ"

"ನಾನು ನಿರ್ಧರಿಸಿದ ಮೇಲೆ ಆಯ್ತು... ನೀವು ಓಡಿ ಹೋಗದಂತೆ ಕಟ್ಟಿ ಹಾಕಿ ನಿಮ್ಮನ್ನು ಮದುವೆಯಾಗ್ತೀನಿ" ಅವಳು ನಕ್ಕಳು. ಅವನು ಹೆದರಿದ.

ಸರಳವಾಗಿ ರಿಜಿಸ್ಟ್ರಾರರ ಆಫೀಸ್ನಲ್ಲಿ ಮದುವೆಯಾದರು. ಶಂಕರ ಸಂಕೋಚದಿಂದ ದೂರ ದೂರವೇ ಇದ್ದ. ಅವಳೇ ಅಧಿಕಾರವನ್ನು ಚಲಾಯಿಸಿ ಅವನನ್ನು ಹತ್ತಿರಕ್ಕೆ ಸೆಳೆದಳು. ವರ್ಷದೊಳಗೆ ಶಶಾಂಕ ಹುಟ್ಟಿದ. ಗಂಡನಿಗೆ ಮಗನನ್ನು ತೋರಿ ಥ್ಯಾಂಕ್ಸ್ ಎಂದಿದ್ದಳು. ಶಶಾಂಕನ ಜವಾಬ್ದಾರಿಯನ್ನು ಗಂಡನಿಗೆ ವಹಿಸಿ, ಅವಳು ಕ್ಲಿನಿಕ್‌ನಲ್ಲಿ ಹೆಚ್ಚು ಹೆಚ್ಚು ಹೊತ್ತು ಇರಲಾರಂಭಿಸಿದ್ದಳು. ಶಂಕರ, ಶಶಾಂಕ, ಹಾಗೂ ಈ ಕ್ಲಿನಿಕ್ ತನ್ನ ಆಸ್ತಿ... ಶಂಕರನಂಥ ನಿಷ್ಠಾವಂತ ಪತಿ, ಶಶಾಂಕನಂಥ ಮುದ್ದುಗಾರ ಮಗ, ತನ್ನದೇ ಆದ ಸ್ವಂತ

ಕ್ಲಿನಿಕ್... ಇನ್ನೇನು ಬೇಕು!

"ನಿದ್ದೆ ಬಂತಾ?" ಪಕ್ಕದಲ್ಲಿ ಮಲಗಿದ್ದ ಗಂಡನನ್ನು ಕೇಳಿದಳು ಉತ್ತರವಿಲ್ಲ.

"ನೀವೀಗ ಸರಿಯಪ್ಪಾ... ಸುಖತ್ತಾಗಿ ನಿದ್ರೆ ಮಾಡ್ತೀರಿ... ನನಗೆ ನಿದ್ದೆಯ ಮಾತ್ರೆಯಿಲ್ಲದೇ ನಿದ್ದೆ ಬರುವುದಿಲ್ಲ" ಎಂದುಕೊಂಡು, ಮಾತ್ರೆಯನ್ನು ನುಂಗಿದಳು.

ಬೆಳಗಿನ ಝಾವದ ಹೊತ್ತಿಗೆ ಚೆನ್ನಾಗಿ ನಿದ್ದೆ ಹತ್ತಿತ್ತು. ಫೋನು ರಿಂಗಾದಾಗ ಶಂಕರನೇ ಎತ್ತಿಕೊಂಡ. ಅತ್ತಲಿಂದ ಶ್ರೀಹರಿ ಮಾತಾಡಿದ್ದ. "ವಿಮಲನ ಕಂಡೀಷನ್ ಚೆನ್ನಾಗಿಲ್ಲ. ನಾನು ಸ್ವಲ್ಪ ಡಾಕ್ಟರ ಹತ್ರ ಮಾತನಾಡ್ಬೇಕಾಗಿತ್ತು".

"ರಾತ್ರಿ ತುಂಬಾ ಹೊತ್ತಾಗಿತ್ತು ಮಲಗಿದಾಗ, ಈಗ ಮಲಗಿದಾಳೆ. ಚೆನ್ನಾಗಿ ನಿದ್ದೆ ಹತ್ತಿದೆ, ಎಬ್ಬಿಸ್ಲೇ ಬೇಕಾ? ಡಾಕ್ಟರ್ಸ್ ಏನಂತಾರೆ?"

"ವಿಮಲ ಏನೇನೋ ಆಡಿ ಬಿಡ್ತಾಳೆ. ನನಗೆ ಅದೇ ಭಯ. ನಿಮ್ಮಿಯ ಲೈಫ್ ಹಾಳಾಗಬಾರ್ದು"

"ಹಾಗೇನು ಆಗುಲ್ಲ ಶ್ರೀಹರಿ, ವರಿ ಮಾಡ್ಕೋಬೇಡ..."

"ನಿಜ ಏನೂಂತ ಯಾರ್ಗೂ ಗೊತ್ತಿಲ್ಲ. ನೀನಾದ್ರೂ ಹೇಳ್ಬಾರ್ದಾ... ನಿನಗೂ ಅವಳಿಗೂ ದೇಹ ಸಂಬಂಧ ಇತ್ತಾ? ನಿಮ್ಮಿ ನಿನ್ನ ಮಗಳಾ...?"

"ಇಲ್ಲ, ಶ್ರೀಹರಿ... ನಿನಗೆ ನನ್ನ ಮೇಲೆ ನಂಬಿಕೆ ಇರಲಿಲ್ವಾ? ನಿನ್ನ ತಂಗಿ, ನನ್ಮೇಲೆ ಅಪವಾದ ಹೊರಿಸಿದಾಳೆ"

"ನಿನ್ನ ಮಿಸೆಸ್‌ಗೆ ಈ ವಿಷಯ ತಿಳಿಯೋದು ಬೇಡ... ಇದರಿಂದ ಎಲ್ಲರಿಗೂ ಕಷ್ಟ ಆಗುತ್ತೆ. ನಾನು ಡಾಕ್ಟರ ಹತ್ರ ಮಾತಾಡ್ಬೇಕು, ನಾನೇ ಬರ್ತೀನಿ" ಶ್ರೀಹರಿ ಅತ್ತಲಿಂದ ಮಾತನ್ನು ಮುಗಿಸಿದ್ದ.

"ಯಾರದ್ದು ಫೋನು?" ಶಾರದಾ ಎಚ್ಚರವಾಗಿದ್ದಳು.

"ಶ್ರೀಹರೀದು... ಅವನು ನಿನ್ನ ಹತ್ರ ಮಾತಾಡ್ಬೇಕಂತೆ, ಬರ್ತಾನಂತೆ"

"ಬರಲಿ ಬಿಡಿ, ನಿಮಗ್ಯಾಕೆ ಟೆನ್ಷನ್?"

"ಎಲ್ಲಾ ಹಳೇ ಕತೆ. ಮತ್ತೆ ಮತ್ತೆ ಯಾಕೆ ಕೆದಕಬೇಕು? ಅವನಿಗೆ ಅವನ ಮಗಳ ಚಿಂತೆ. ಶಶಾಂಕನ ಮೇಲೆ ನಂಬಿಕೆ ಬೇಡ್ವಾ?" ಹೀಗೆ ಅಂತ ಮೊದಲೇ ಗೊತ್ತಾಗಿದ್ದಿದ್ರೆ ಚೆನ್ನಾಗಿತ್ತು"

"ಗೊತ್ತಾಗಿದ್ದಿದ್ರೆ ಮದುವೇನ ನಿಲ್ಲಿಸೋಕೆ ಆಗ್ತಿರಲಿಲ್ಲ. ಹೋಗ್ಲಿ ಬಿಡಿ... ಅವರವರ ಹಣೇಲಿ ಹೇಗೆ ಬರೆದಿದೆಯೋ ಹಾಗೇ ನಡೆಯುತ್ತೆ"

"ನೀನೂ ಇದನ್ನೆಲ್ಲ ನಂಬ್ತೀಯಾ?..."

"ಕೆಲವು ಸಾರಿ ನಂಬಲೇ ಬೇಕಾಗುತ್ತೆ... ನೀವು ವಿಮಲನ ಆಸೆಗೆ ಬೆಲೆ ಕೊಟ್ಟು ಅವಳನ್ನೇ ಮದುವೆ ಆಗಿದ್ದಿದ್ರೆ ನಂಗೆಲ್ಲಿ ಸಿಗ್ತಿದ್ರಿ? ವಿಮಲ ಪ್ರಭಾಕರನ

ಹೆಂಡತಿಯಾಗಬೇಕಾಗಿತ್ತು. ಅದಕ್ಕೆ ಇದನ್ನು ತಪ್ಪಸಿದ. ಆ ದೇವರು..."

"ಆದದ್ದೆಲ್ಲಾ ಒಳ್ಳೆಯದಕ್ಕೇ ಅಂತಾರೆ... ಹಾಗೇ ಅಂದ್ಕೋಬೇಕು..."

*****

ಶ್ರೀಹರಿ ಕ್ಲಿನಿಕ್‌ಗೇ ಬಂದ. ಶಾರದಾ ಅವನೊಡನೆ ಮಾತನಾಡಿದಳು.

"ಸಧ್ಯದಲ್ಲೇ ರಿಪೋರ್ಟ್ ಬರಲಿದೆ. ಆಗ ನಿಜ ಏನೂಂತ ತಾನಾಗಿಯೇ ಗೊತ್ತಾಗುತ್ತೆ. ನಿಮ್ಮ ತಂಗಿಗೆ ಸಮಾಧಾನ ಹೇಳಿ..."

"ಅವಳು ಯಾರ ಮಾತನ್ನು ಕೇಳುವ ಸ್ಥಿತಿಯಲ್ಲಿಲ್ಲ. ನನಗೆ ಅದೇ ಭಯ"

"ಈಗ ಮದುವೆ ನೆರವೇರಿದೆಯಲ್ಲ, ಇನ್ನ್ಯಾತರ ಭಯ?..."

"ನಿಮಗೆ ಗೊತ್ತಿಲ್ಲದ ವಿಷಯ ಒಂದಿದೆ. ನಿಮಗೆ ಹೇಗೆ ತಿಳಿಸ್ಬೇಕೋ ಗೊತ್ತಾಗ್ತಿಲ್ಲ. ನಿಮ್ಮ ಗಂಡ ಬಂದು ಒಂದು ಸಾರಿ ಮಾತಾಡಿದರೆ, ಅವಳ ಸಂಶಯ ನೀಗಬಹುದು..." ಅವಳು ಸಮಾಧಾನವಾಗಿ ನಕ್ಕಾಗ ಅವನು ಅಚ್ಚರಿಗೊಂಡ.

"ನನಗೆ ಎಲ್ಲಾ ವಿಷಯ ತಿಳಿದಿದೆ, ಎಲ್ಲವನ್ನು ಹೇಳಿದ್ದಾರೆ..."

"ಹೌದಾ? ಹಾಗಾದ್ರೆ ನಿಮಗೆ ನನ್ನ ತಂಗಿಯ ಮೇಲೆ ಬೇಸರವಿಲ್ವಾ?"

"ಇದರಲ್ಲಿ ಶಂಕರ್‌ದು ಏನೂ ತಪ್ಪು ಇಲ್ಲದಿರುವಾಗ ನಾನೇಕೆ ಬೇಸರ ಪಟ್ಟುಕೊಳ್ಳಲಿ? ನಿಮ್ಮ ತಂಗಿ ಯಾವುದೋ ಭ್ರಮೆಯಲ್ಲಿದ್ದಾರೆ. ಅವರಿಗೆ ಚಿಕಿತ್ಸೆ ಕೊಡಿಸಿ. ಡಿ.ಎನ್.ಎ. ರೀಪೋರ್ಟ್ ನೋಡಿದ ಮೇಲೆ ಅವರು ನಿಜವನ್ನು ಒಪ್ಪಿಕೊಳ್ಳಲೇ ಬೇಕು..."

"ನನಗೂ ಶಂಕರ ಮೇಲೆ ಕೋಪ ಇತ್ತು"

"ಹಾಗಾದ್ರೆ ಮದುವೆಗೆ ಒಪ್ಪಿಗೆ ಹೇಗೆ ಕೊಟ್ರಿ?"

"ಪ್ರೀತಿಸಿ ಮದುವೆಯಾಗದಿದ್ದರೆ, ಏನೇನು ಅನಾಹುತಗಳಾಗಬಹುದು ಎನ್ನುವುದಕ್ಕೆ ವಿಮಲಂಗಿಂತ ಬೇರೆ ಸಾಕ್ಷಿ ಬೇಕಾ? ಶಂಕರ ಸಲುಗೆಯಿಂದ ಇದ್ದುದು ನಿಜ. ಶಶಾಂಕ ನಿಮ್ಮಿಯ ಸ್ನೇಹ ತುಂಬಾ ಮುಂದುವರೆದಿತ್ತಲ್ಲ... ನಾವು ಒಪ್ಪದೇ ಇದ್ದಿದ್ದರೆ ಏನು ಅನಾಹುತವಾಗುತ್ತೋ ಅಂತ ಹೆದರಿದೆ. ಅಲ್ಲದೇ ಶಂಕರನನ್ನ ಪ್ರತ್ಯಕ್ಷವಾಗಿ ನೊಡುವವರೆಗೂ ಅವನೇ ಶಶಾಂಕನ ತಂದೆ ಅಂತ ಗೊತ್ತಿರಲಿಲ್ಲ" ಪೆಚ್ಚಾಗಿ ನಕ್ಕ.

"ಈ ವಿಷಯಗಳನ್ನು ಇಷ್ಟಕ್ಕೆ ಬಿಡುವುದು ಒಳ್ಳೆಯದು. ಮಕ್ಕಳ ಕಿವಿಗೆ ಬೀಳುವುದು ಬೇಡ. ತಾಯಿ ಮಗಳು ಭೇಟಿಯಾಗದಿದ್ದರೇ ಒಳ್ಳೆಯದು. ಹೇಗೂ ಮಗಳು ಎನ್ನುವ ಮಮತೆಯೇ ಇಲ್ಲ ಅಂತೀರಿ"

"ಹೌದು ಹೋಟೆಲ್ಲಿನಿಂದ ಬಂದವರು, ಸೀದಾ ಊರಿಗೆ ಹೋಗುವುದೇ ಕ್ಷೇಮ"

"ಅಷ್ಟು ಹೆದರುವ ಅಗತ್ಯವಿಲ್ಲ. ಈಗ ನೀನು ನನ್ನ ಮಗಳು ಅಲ್ಲ ಅಂತ ಹೇಳಿದರೂ ನಿಮ್ಮಗೆ ನಂಬಿಕೆ ಬರುವುದಿಲ್ಲ. ಸಂಬಂಧ ಕೆಡುತ್ತೆ ಸುಮ್ಮನಿರು ಅಂತ ನಿನ್ನ ತಂಗಿಗೆ ಬುದ್ಧಿ ಹೇಳಿ. ನಿಮ್ಮ ಕೈಲಾಗದಿದ್ದರೆ, ಶಂಕರನೊಂದಿಗೆ ನಾನೇ ಬಂದು ಮಾತಾಡ್ತೀನಿ. ನಮ್ಮಿಬ್ಬರನ್ನು ಒಟ್ಟಿಗೇ ನೋಡಿದ ಮೇಲೆ, ನಿಮ್ಮ ತಂಗಿ ಹಳೆಯದೆಲ್ಲವನ್ನು ಮರೆಯಲೇ ಬೇಕು. ಹಳೆಯದನ್ನು ಮರೆಯದಿದ್ದರೆ, ಮುಂದಿನ ದಾರಿಯಲ್ಲಿ ಸಾಗುವುದು ಹೇಗೆ? ಈಗಾಗಲೇ ಕಾಲ ಮೀರಿದೆ"

"ಹೌದು ಡಾಕ್ಟರ್, ನೀವು ಹೇಳೋದು ನಿಜ. ಥ್ಯಾಂಕ್ಸ್ ಬರ್ತೀನಿ" ಕೈ ಮುಗಿದು ಹೊರ ನಡೆದ. ಶಾರದಾ ಅವನ ಬೆನ್ನನ್ನೇ ನೋಡಿದಳು. ತನ್ನಲ್ಲೇ ಹೇಳಿಕೊಂಡಳು.

"ನಾನು ಪ್ರಭಾಕರನನ್ನು ಮರೆಯದೇ ಇದ್ದಿದ್ದರೆ, ಈ ಕ್ಲಿನಿಕ್ ಇರುತ್ತಿರಲಿಲ್ಲ. ಶಂಕರನ ಪ್ರೀತಿ, ಶಶಾಂಕನಂಥ ಮಗ... ನಿಮ್ಮಿಯಂತಹ ಸೊಸೆ... ಯಾವುದೂ ಇರುತ್ತಿರಲಿಲ್ಲ. ಜೀವನ ಮುಂದುವರೆಯುತ್ತಿರಲಿಲ್ಲ... ಆದದ್ದೆಲ್ಲಾ ಒಳ್ಳೆಯದಕ್ಕೇ...

* * * * *

## ಹೃದಯ ಹಾಡಿದ ಹೊಸಗೀತೆ...

"ಪುಣ್ಯಾ... ಏನು ಯೋಚಿಸ್ತಿದೀಯಾ?" ಇಂದಿರಾ ಮೈ ಮುಟ್ಟಿ ಎಚ್ಚರಿಸಿದಾಗ ಪುಣ್ಯ ಬೆಚ್ಚಿ ಎಚ್ಚೆತ್ತಳು. "ಏನು ಯೋಚಿಸ್ತಿದೀಯಾ ಅಂತಂದೆ. ನನಗೂ ಹೇಳ್ದೇ ಇರೋ ಅಂಥ ವಿಷಯ ಆದರೆ ಬೇಡ ಬಿಡು"

"ಏನೂ ಇಲ್ಲ, ಡ್ಯಾಡಿಯ ಬಗ್ಗೆ ಯೋಚಿಸ್ತಿದ್ದೆ"

"ಯಾಕೆ? ಹುಶಾರಾಗಿದಾರೆ ತಾನೇ...?

"ಹುಂ... ಹುಶಾರಾಗಿದಾರೆ... ಆದರೆ..."

"ನಿನಗೆ ಹೇಳುಕ್ಕೆ ಇಷ್ಟವಿಲ್ಲದಿದ್ರೆ ಹೇಳ್ಬೇಡ ಬಿಡು..."

"ಹಾಗಲ್ಲ ಇಂದು... ನಾನೊಂದು ಇಕ್ಕಟ್ಟಿಗೆ ಸಿಕ್ಕಿ ಬಿದ್ದಿದೀನಿ... ನಾನೊಬ್ಬ ಹುಡುಗನ್ನ ಪ್ರೀತಿಸ್ತಾ ಇದೀನಿ..."

"ಆ ವಿಷಯಾನ ಡ್ಯಾಡಿಗೆ ಹೇಳಿಲ್ಲ... ಮಮ್ಮೀಗೆ ಹೇಳು... ಮಮ್ಮಿ ಒಪ್ಪಿಸ್ತಾರೆ..." ಪುಣ್ಯ ಪೆಚ್ಚಾದಳು.

"ನಂಗೆ ಮಮ್ಮಿ ಇದ್ದಿದ್ರೆ ನಾನು ಇಷ್ಟು ಯೋಚ್ನೇನೇ ಮಾಡ್ತಿರ್ಲಿಲ್ಲ"

"ಐ ಆಮ್ ಸಾರೀ... ನಂಗೆ ಈ ವಿಷಯ ಗೊತ್ತಿರ್ಲಿಲ್ಲ, ನೀನು ಹೇಳ್ಲೇ ಇಲ್ಲ"

"ಈಗ ಎರಡು ವರ್ಷಗಳ ಹಿಂದೆ ಮಮ್ಮಿ ಮತ್ತೆ ಪ್ರೆಗ್ನೆಂಟ್ ಆಗಿದ್ರು... ಡೆಲಿವರಿ ಆಗೋಕೆ ಮುಂಚೇನೇ..." ಪುಣ್ಯ ಬಿಕ್ಕಿದಳು.

"ಸಮಾಧಾನ ಮಾಡ್ಕೋ ಪುಣ್ಯಾ..."

"ನನಗೆ ನೆಮ್ಮದೀನೇ ಇಲ್ಲದ ಹಾಗಾಗಿದೆ ಇಂದು. ನನ್ನ ಮದುವೆಯ ಬಗ್ಗೆ ಹೇಗೆ ಮಾತಾಡ್ಲೀ?... ನಾನು ಮದುವೆಯಾಗಿ ಹೊರಟು ಹೋದರೆ ಡ್ಯಾಡಿ ಒಂಟಿಯಾಗಿ ಬಿಡ್ತಾರೆ... ನನಗೆ ಅದೇ ಚಿಂತೆ..."

"ಅಂದ್ರೇ... ನಿನ್ನನ್ನ ಪ್ರೀತಿಸ್ತಾ ಇರೋನು ನಿಮ್ಮ ಮನೇಲೇ ಇರೋಕೆ ಇಷ್ಟ ಪಡುಲ್ವಾ?"

"ಅವನು ಅಮೆರಿಕಾದಲ್ಲಿದಾನೆ... ನಾನೇನು ಮಾಡ್ಲೀ?" ಇಂದಿರಾ

ನಕ್ಕು ಬಿಟ್ಟಳು.

"ನೀನು ನಗಬೇಡ, ನಿನಗೆ ನನ್ನ ಕಷ್ಟ ಅರ್ಥ ಆಗುಲ್ಲ"

"ಹೌದು, ನನಗೆ ಇಂಥ ಕಷ್ಟಗಳು ಅರ್ಥ ಆಗುಲ್ಲ. ನಾನು ಯಾರನ್ನು ಪ್ರೀತಿಸ್ಲಿಲ್ಲ. ಮದುವೆ ಮಾಡಿಕೊಂಡು ಗಂಡನ ಮನೆಗೆ ಹೋಗುವ ಯೋಗ ಕೂಡಾ ನನಗೆ ಇದೆಯೋ ಇಲ್ಲವೋ...?" ಪುಣ್ಯ ಪೆಚ್ಚಾಗಿ ನೋಡಿದಳು. "ನಾನು ನಿನ್ನ ಹಾಗೆ ಒಬ್ಬಳೇ ಮಗಳಲ್ಲ. ನನಗೆ ಒಬ್ಬ ಅಣ್ಣನಿದ್ದಾನೆ, ಅವನಿಗೆ ಒಬ್ಬ ತಮ್ಮನಿದಾನೆ. ಇಬ್ಬರೂ ಹೊರದೇಶದಲ್ಲಿದಾರೆ. ನನಗೆ ಒಬ್ಬಳು ತಂಗಿ ಇದಾಳೆ. ಈಗ ಮನೆಯ ಜವಾಬ್ದಾರಿ ನನ್ನ ಮೇಲಿದೆ. ನನ್ನ ತಂಗಿಯ ವಿದ್ಯಾಭ್ಯಾಸ ಮುಗಿಯುವವರೆಗೂ ನಾನು ಯಾವ ಬೇರೆ ಯೋಚನೆ ಮಾಡುವಂತಿಲ್ಲ".

"ಯಾಕೆ? ನಿನ್ನ ಅಣ್ಣಂದಿರು ಹಣ ಕಳಿಸುಲ್ವಾ?"

"ಒಬ್ಬ, ಅಲ್ಲಿಯೇ ಮದುವೆಯಾಗಿ ನಮ್ಮಿಂದ ದೂರವಾಗಿ ಬಿಟ್ಟಿದಾನೆ. ಇನ್ನೊಬ್ಬ ಕಳಿಸ್ತೀನಿ ಅಂತಂದ್ರೂ ಅಪ್ಪ ಬೇಡ ಅಂತಂದ್ರು. ತಂಗಿ ಇಂಜಿನಿಯರಿಂಗ್ ಓದನ್ನು ಮುಗಿಸಿ, ಕೆಲಸಕ್ಕೆ ಸೇರಿಕೊಂಡು ಸಂಪಾದಿಸ್ತೀನಿ ಅಂತ ಅಂತಾಳೆ. ಅಮ್ಮಂಗೆ ಯಾವುದೂ ಇಷ್ಟವಿಲ್ಲ. ಅಪ್ಪ ಯಾಕೋ ಮೌನವಾಗಿ ಬಿಟ್ಟಿದಾರೆ... ಬಿಡು ನಮ್ಮ ಮನೆಯ ತಾಪತ್ರಯ ವಿಪರೀತ. ನೀನು ಡ್ಯಾಡಿಯ ಮುದ್ದಿನ ಮಗಳಾಗಿ ಈ ಟೀಚರ್ ಕೆಲಸಕ್ಕೆ ಯಾಕೆ ಸೇರ್ಕೊಂಡೆ?..."

"ಮನೇಲಿ ಬೋರ್ ಆಗುತ್ತೆ. ಅಪ್ಪನೂ ಆಫೀಸ್ಗೆ ಹೊರಟು ಹೋದರೆ, ಸಾಯಂಕಾಲದ ತನಕ ಅಷ್ಟು ದೊಡ್ಡ ಮನೇಲಿ ನಾನು ಹೇಗಿರಲಿ?"

"ನಿನ್ನ ಲವರ್ ಮಹಾಶಯ ಏನಂತಾನೆ?"

"ನನ್ನ ಅವನ ಪರಿಚಯವಾದದ್ದು ಇ-ಮೇಲ್ ಮುಖಾಂತರ ನಮ್ಮ ಸಂಭಾಷಣೆ ಏನಿದ್ರೂ ಚಾಟ್‌ನಲ್ಲಿ... ಇಂಟರ್‌ನೆಟ್‌ನಲ್ಲಿ ಅವನ ಫೋಟೋ ನೋಡಿದೆ. ಚೆನ್ನಾಗಿದಾನೆ ಅಂತನ್ನಿಸ್ತು. ನನ್ನನ್ನ ಪ್ರಪೋಸ್ ಮಾಡ್ಕೊಂಡೆ. ಅವನಿಗೂ ನಾನು ಇಷ್ಟವಾದೆ... ಒಬ್ಬರನ್ನೊಬ್ಬರು ಪ್ರೀತಿಸ್ತ ಇದೀವಿ. ತಮಾಷೆ ಅನ್ನಿಸುತ್ತೆ ಅಲ್ವಾ?"

"ಮತ್ತಿನ್ನೇನು? ಎದುರಿಗೆ ಗಂಟೆಗಟ್ಟಲೆ ಕೂತು, ಉಪ್ಪಿಟ್ಟು ಸಜ್ಜಿಗೆ ತಿಂದು ಕಾಫಿ ಕುಡಿದು, ಕೆಲಸಕ್ಕೆ ಬಾರದ ಪ್ರಶ್ನೆಗಳನ್ನೆಲ್ಲ ಕೇಳಿ ಮನೆಗೆ ಹೋದ ನಂತರ ಒಪ್ಪಿಗೆ ಅಂತ ಹೇಳೋಕೂ ಮುಹೂರ್ತ ನೋಡ್ತಾರೆ ವರ ಮಹಾಶಯರು... ಅಂಥಾದ್ರಲ್ಲಿ ಇಂಟರ್‌ನೆಟ್‌ನಲ್ಲಿ ಛಟ್ ಅಂತ ಹೇಗೆ ಒಪ್ಕೊಂಡ?"

"ನನ್ನ ಬಯೋಡೇಟಾ ನೋಡ್ದ. ನನ್ನ ನೇಚರ್ ಬಗ್ಗೆ ತಿಳ್ಕೊಂಡ... ನನ್ನ ಹಾಬೀಸ್‌ಗಳನ್ನು ಕೇಳ್ಕೊಂಡ. ಇಷ್ಟ ಆಯ್ತು ಅಂತಂದ..."

"ಎಲ್ಲ ಆ ಇಷ್ಟವಾದೋನು ಅಲ್ಲೇ ಯಾಕೆ ಇದಾನಂತೆ? ಇಲ್ಲೇ ನಿನ್ನ ಜೊತೆಯಲ್ಲಿ ಬಂದು ಇದ್ದರೆ ಎಲ್ಲಾ ಪ್ರಾಬ್ಲಂ ಸಾಲ್ವ್ ಆಗುತ್ತೆ..."

"ಬೇಡ ಇಂದು, ಅವನು ಮನೆ ಅಳಿಯನಾಗಿರಲಿ ಅಂತ, ಅಮೆರಿಕಾನ ಬಿಟ್ಟು ಬರೋದು ಬೇಡ. ನಂಗೂ ಅಮೆರಿಕಾಕ್ಕೆ ಹೋಗಬೇಕು ಅಂತ ಆಸೆ..."

"ಹಾಗಾದ್ರೆ ನಿಮ್ಮ ಡ್ಯಾಡೀನ್ನ ನಿನ್ನ ಜೊತೆ ಕರ್ಕೊಂಡು ಹೋಗು... ಸಿಂಪಲ್"

"ಬರುಲ್ಲ ಅಂತಂದ್ರೆ? ಡ್ಯಾಡೀ ಒಂಥರಾ ಸ್ಟ್ರಿಕ್ಟ್..."

"ಎಲ್ಲಾರ ಡ್ಯಾಡೀನೂ ಸ್ಟ್ರಿಕ್ಟೇ... ಈಗ ನಿಮ್ಮಿಬ್ಬರಲ್ಲಿ ಒಬ್ಬರು ತ್ಯಾಗ ಮಾಡ್ಲೇಬೇಕು ಅಥವಾ ನಿಮ್ಮಿಬ್ಬರಿಗೋಸ್ಕರ ಆ ಹುಡುಗ ತ್ಯಾಗ ಮಾಡ್ಬೇಕು. ನೀನು ಅವನ ಹತ್ರ ಮಾತಾಡು. ಅಲ್ಲ ಅಲ್ಲ ಚಾಟ್ ಮಾಡು... ಇರೋ ವಿಷಯಾನ ಹೇಳು..."

"ಇಲ್ಲ ಇಂದು, ಈ ವಿಷಯದಲ್ಲಿ ನಾನು ಯಾರ ಹತ್ತಿರವೂ ಮಾತನಾಡುಕ್ಕೆ ಆಗುಲ್ಲ. ನಾನೊಂದು ಥರ ಫಜೀತಿಗೆ ಸಿಕ್ಕಿ ಬಿದ್ದು ಬಿಟ್ಟಿದೀನಿ..."

"ಅಷ್ಟು ಬೇಸರ ಮಾಡ್ಕೋಬೇಡ ಪುಣ್ಯಾ... ಎಲ್ಲಾ ಸಮಸ್ಯೆಗೂ ಒಂದು ಪರಿಹಾರ ಇದ್ದೇ ಇರುತ್ತೆ"

"ಐ ಹೋಪ್ ಸೋ..." ಪುಣ್ಯ ಗೆಳತಿಯ ಕೈ ಹಿಡಿದಳು.

*****

ಎರಡು ಮೂರು ದಿನಗಳಾದರೂ ಪುಣ್ಯ ಸ್ಕೂಲಿಗೆ ಬರದಿದ್ದಾಗ ಇಂದಿರಾ ಅವಳ ಮನೆಗೆ ಬಂದಳು. ಮುಂಬಾಗಿಲಿನಲ್ಲಿ ಅವಳಿಗೆ ಎದುರಾದ ವ್ಯಕ್ತಿಯನ್ನೇ ನೋಡಿದಳು. ಸುಂದರ ಮುಖದ, ಒಪ್ಪವಾಗಿ ತಲೆಗೂದಲನ್ನು ಬಾಚಿದ್ದ, ಓರಣವಾದ ಉಡುಗೆಗಳನ್ನು ಧರಿಸಿದ್ದವನನ್ನು ಮೆಚ್ಚುಗೆಯಿಂದ ನೋಡಿದಳು.

"ಯಾರು ಬೇಕಾಗಿತ್ತು?" ದಪ್ಪ ದನಿಯಲ್ಲಿ ಆ ವ್ಯಕ್ತಿ ಪ್ರಶ್ನಿಸಿದ. ಬೆಚ್ಚಿದಳು.

"ನಾನು ಇಂದಿರಾ ಅಂತ... ಪುಣ್ಯಾಳನ್ನು ನೋಡಬೇಕಾಗಿತ್ತು..."

"ಅವಳಿಗೆ ಹುಶಾರಿಲ್ಲ... ಜ್ವರ ಬಂದಿದೆ..."

"ಹೌದಾ?... ಎಲ್ಲಿದಾಳೆ?... ಈಗ ಹೇಗಿದಾಳೆ?..."

"ಜ್ವರ ಬಿಟ್ಟಿಲ್ಲ ಮಲಗಿದಾಳೆ..." ಬಾಗಿಲಲ್ಲೇ ನಿಲ್ಲಿಸಿ ಉತ್ತರಿಸುತ್ತಿದ್ದವನನ್ನು ಕಂಡು ಬೇಸರವೆನಿಸಿತ್ತು. ಅವನು ತನ್ನನ್ನು ತಿರಸ್ಕಾರದಿಂದ ನೋಡುತ್ತಿರ ಬಹುದೆಂಬ ಭಾವನೆ ಕಾಡಿತು. ತನ್ನ ವೇಷ ಭೂಷಣಗಳು ಕಳಪೆಯಾಗಿರ ಬಹುದೇ ಅಂತಂದುಕೊಂಡಾಗ ಮನ ಮುದುಡಿತು. ಎರಡು ಹೆಜ್ಜೆ ಹಿಂದೆ ಸರಿದಳು.

"ನಾನು ಬಂದಿದ್ದೆ ಅಂತ ಹೇಳ್ಬಿಡಿ..." ಅವಳು ಹಿಂತಿರುಗುವುದರಲ್ಲಿ

ಒಳಗಿನಿಂದ ಅಡಿಗೆಯ ಹೆಂಗಸು ಹೊರ ಬಂದಳು. ಇಂದಿರಾ ನಿಂತಳು.

"ಬೇಬಿ ನಿಮ್ಮನ್ನು ಕರೀತಿದೆ..." ಆತ ಒಳಕ್ಕೆ ಹೋದ. ಅಡಿಗೆಯ ಹೆಂಗಸು ಇಂದಿರಾಳನ್ನೇ ಸುಮ್ಮನೇ ನೋಡಿದಳು.

"ನಾನು ಇಂದಿರಾ ಅಂತ. ಪುಣ್ಯಾಳ ಸ್ನೇಹಿತೆ. ಹುಶಾರಿಲ್ಲ ಅಂತ ತಿಳೀತು"

"ಒಳಗೆ ಬಂದು ನೋಡದೇ ಹಾಗೇ ಹೋಗ್ತೀರಾ?"

"ಬನ್ನಿ ಅಂತ ಅವರು ಹೇಳಲಿಲ್ಲ, ಸಂಕೋಚ ಆಯ್ತು..."

"ಇರಲಿ ಬನ್ನಿ. ಅವರಿಗೆ ಸರಿಯಾಗಿ ಗೊತ್ತಾಗಿಲ್ಲ. ಬೇಬಿಗೆ ಹುಶಾರಿಲ್ಲ ಅಂತ ಬಹಳ ಆತಂಕಗೊಂಡಿದಾರೆ..." ಇಂದಿರಾ ಅನುಮಾನಿಸುತ್ತಾ ಒಳ ಬಂದಳು. ರೂಮಿನಿಂದ ಹೊರ ಬಂದ ಆತ, ಇಂದಿರಾಳ ಕಡೆ ನೋಡಿದಂತೆ ಮಾಡಿ, ಪಕ್ಕದಲ್ಲೆಲ್ಲೋ ಮರೆಯಾಗಿ ಹೊರಟು ಹೋದ.

ಪುಣ್ಯಾ, ಇಂದಿರಾಳನ್ನು ಕಂಡು ಎದ್ದು ಕೂತು ಕ್ಷೀಣವಾಗಿ ನಕ್ಕಳು. "ಏನೇ ಹುಶಾರಿಲ್ಲದೇ ಮಲಗಿದೀಯ. ಲೀವ್ ಲೆಟರ್‌ನ್ನು ಕಳಿಸ್ಲಿಲ್ಲ. ಏನೂಂತ ತಿಳ್ಕೋಬೇಕು?" ನಯವಾಗಿ ಗದರಿದಳು.

"ಬಾಯ್‌ಫ್ರೆಂಡ್ ಜೊತೆ ಓಡಿ ಹೋದ್ನೇನೋ ಅಂತ ಗಾಬರಿಯಾದ್ಯಾ?"

"ಸಾಕು ತಮಾಷೆ. ಡಾಕ್ಟರ ಹತ್ರ ಹೋಗಿದ್ಯಾ?"

"ವೈರಲ್ ಫಿವರ್ ಅಂತ ಅಂದ್ರು ಸುಸ್ತಾಗ್ತಿದೆ. ಜೊತೆಗೆ ಬೇಜಾರು..."

"ಬೇಗ ಹುಶಾರಾಗು... ಸ್ಕೂಲಿಗೆ ಬರೋಕೆ ಶುರು ಮಾಡಿದ್ರೆ ಬೇಜಾರು ತಾನೇ ತಾನಾಗಿ ಕಡಿಮೆ ಆಗುತ್ತೆ"

"ಡ್ಯಾಡಿ ಸ್ಕೂಲ್‌ನ ಬಿಡು ಅಂತ ಉಪದೇಶ ಮಾಡ್ತಾನೇ ಇದಾರೆ. ಅವರಿಗೆ ನನ್ನ ಮೇಲೆ ಕೋಪ"

"ನಿನ್ನ ಬಾಯ್‌ಫ್ರೆಂಡ್ ವಿಷಯಾನ ಹೇಳಿದ್ಯಾ?"

"ಇಲ್ಲ ಇಂದಿರಾ... ಅವನು ಊರಿಗೆ ಬಂದಾಗ ಮಾತಾಡ್ತೀನಿ. ಈಗ್ಯಾಕೋ ಧೈರ್ಯಾನೇ ಬರ್ತಿಲ್ಲ"

"ಯಾವಾಗ ಬರ್ತಾನಂತೆ...?"

"ಮುಂದಿನ ತಿಂಗಳಿಗೆ ಬರ್ತಾನಂತೆ. ಈಗ್ಲಿಂದ್ಲೇ ನನ್ನ ಎದೆ ಹೊಡೆದು ಕೊಳ್ತಿದೆ"

"ಲವ್ ಮಾಡೋರ್ಗೆ ಧೈರ್ಯ ಬೇಕು ಪುಣ್ಯಾ..."

"ಬೇಬಿ ಡಾಕ್ಟರ್ರು ಬಂದಿದಾರೆ..." ಅಡಿಗೆಯಾಕೆ ಬಂದು ಹೇಳಿದಾಗ, ಇಂದಿರಾ ಎದ್ದಳು. ಪುಣ್ಯ ಮಲಗಿದಳು. ಡಾಕ್ಟರು ಅಲ್ಲಿರುವಾಗ ತಾನು ಅಲ್ಲಿ ಇರುವುದು ಸರಿಯಲ್ಲ ಎಂದುಕೊಂಡು ಇಂದಿರಾ ಹೊರಬಂದಳು. ಹೊರಬಾಗಿಲಲ್ಲಿ ಡಾಕ್ಟರೊಡನೆ ಮಾತನಾಡುತ್ತಾ ನಿಂತಿದ್ದ ಪುಣ್ಯಳ ತಂದೆಯ

ಕಡೆ ನೋಡಿದಳು. ಅವನೂ ಇವಳನ್ನೇ ನೋಡುತ್ತಿರುವಂತೆ ಅನ್ನಿಸುತ್ತಿತ್ತು. ಮುಜುಗರಗೊಂಡು, ಸರಸರನೆ ಹೊರ ಬಂದಳು. ತಾನು ಅಲ್ಲಿಯೇ ಇರಬೇಕೋ ಬೇಡವೋ ಎಂದು ಅನುಮಾನಿಸುತ್ತಿದ್ದವಳ ಬಳಿಗೆ ಆತ ಬಂದ.

"ಆಗಾಗ್ಗೆ ಬರ್ತಾ ಇರಿ... ಬೇಬಿ ತುಂಬಾ ಅಪ್ಸೆಟ್ ಆಗಿದಾಳೆ... ಅವಳಿಗೆ ಸ್ವಲ್ಪ ತಿಳುವಳಿಕೆ ಹೇಳಿ..."

"ನಾನಾ?... ಏನಂತ...?" ಅವಳು ಗೊಂದಲಗೊಂಡಿದ್ದಳು.

"ತಾಯಿಯಿಲ್ಲದವಳು ಅಂತ ಮುದ್ದು ಮಾಡಿ ಬಿಟ್ಟಿದೀನಿ. ಈ ಸ್ಕೂಲು ಗೀಲು ಎಲ್ಲಾ ಅವಳಿಗೆ ಯಾಕೇ ಅಂತ. ಬಿಟ್ಟುಬಿಡಲಿ. ಪ್ಲೀಸ್ ಹೇಳ್ತೀರಾ?"

"ಅವನ ದೈನ್ಯದ ನುಡಿ ಅವನ ಬಗ್ಗೆ ಅನುಕಂಪವನ್ನು ಹುಟ್ಟಿಸಿತು. ಕತ್ತೆತ್ತಿ ಅವನನ್ನೇ ನೋಡಿ, ಆಗಲಿ ಎನ್ನುವಂತೆ ತಲೆಯಾಡಿಸಿದಳು.

"ನಾನೀಗ ಬರ್ತೀನಿ. ನಾನು ನಾಳೆ ಮತ್ತೆ ಬರ್ತೀನಿ" ಅವನು ತಲೆ ಯಾಡಿಸಿದ. ಅವಳು ಅಲ್ಲಿಂದ ಹೊರಟಳು.

*****

ಮಾರನೇ ದಿನ ಸಾಯಂಕಾಲ ಇಂದಿರಾ ಬಂದಾಗ, ಅವಳಿಗೋಸ್ಕರವೇ ಕಾಯುತ್ತಿದ್ದವನಂತೆ, ಬಾಗಿಲಲ್ಲಿ ಅವಳಿಗೆ ಎದುರಾದ. ಮುಖದಲ್ಲಿ ಕಂಡೂ ಕಾಣದಂಥ ಮುಗುಳ್ನಗೆ ಹೊಮ್ಮಿತು. "ಬನ್ನಿ" ಎಂದ. ಹಿಂದಿನ ದಿನಕ್ಕಿಂತ ಭಿನ್ನವಾಗಿ ಕಂಡವನ ಬಗ್ಗೆ ಕುತೂಹಲ ಮೂಡಿತು.

"ಪುಣ್ಯ ಮಲಗಿದಾಳಾ...?"

"ಮಲಗಿದ್ರೆ ಎಬ್ಬಿಸಿ ಮಾತನಾಡ್ಸಿ. ಅದಕ್ಕೇನಂತೆ?" ಅವನ ಮಾತಿಗೆ ಮುಗುಳ್ನಕ್ಕು ಅವಳು ಒಳಗಿನ ರೂಮಿಗೆ ಬಂದಳು.

"ಸಧ್ಯ ಬಂದ್ಯಾ ಪುಣ್ಯಾತ್ಗಿತ್ತಿ... ನಿಂಗೋಸ್ಕರನೇ ಕಾಯ್ತಿದ್ದೆ..."

"ನಂಗೋಸ್ಕರ ನಿಮ್ಮ ಡ್ಯಾಡೀನೂ ಕಾಯ್ತಿದ್ರು ಅಂತ ಕಾಣ್ಸುತ್ತೆ"

"ರಿಯಲೀ..." ಅವಳ ಕಣ್ಣುಗಳು ಮಿಂಚಿದವು" ಇಂಟರೆಸ್ಟಿಂಗ್... ಯಾಕೇಂತ ಗೊತ್ತಾಗ್ಲಿಲ್ಲ"

"ನಿಮ್ಮ ಡ್ಯಾಡಿಗೆ ನಿನ್ನದೇ ಚಿಂತೆ... ನಂಗೆ ಒಂದು ಕೆಲಸ ವಹಿಸಿದಾರೆ... ನಿನಗೆ ತಿಳುವಳಿಕೆ ಹೇಳಬೇಕಂತೆ"

"ಬೇಡ ತಾಯೀ... ನೀನೂ ನಂಗೆ ಬುದ್ಧಿ ಹೇಳ್ಬೇಡ... ನಮ್ಮ ಫ್ರೆಂಡ್‌ಷಿಪ್ ಹಾಳಾಗುತ್ತೆ..."

"ಆದರೆ, ನಿಮ್ಮ ತಂದೆ ಹೇಳೋದ್ರಲ್ಲೂ ಅರ್ಥ ಇದೆ ಪುಣ್ಯಾ..."

"ಡ್ಯಾಡಿಯ ಮೇಲೆ ರೆಸ್ಪೆಕ್ಟ್ ಇದೆ. ನಿನ್ನ ಜೊತೆ ಸ್ನೇಹ ಇದೆ. ಆದರೆ, ನಾನೂ ದೊಡ್ಡವಳಾಗಿದೀನಿ ಇಂದೂ, ನನ್ನದೇ ಆದ ಸ್ವಂತ ಮನಸ್ಸು

ನನಗೊಂದಿದೆ"

"ಹೌದು... ಆದರೂ..."

"ಪ್ಲೀಸ್..."

"ರೈಟ್... ಬಿಡು, ಬೇರೆ ಮಾತನ್ನಾಡೋಣ. ಈಗ ಹೇಗಿದೀಯ? ನೆನ್ನೆ ಡಾಕ್ಟರು ಏನಂದ್ರು?"

"ಹುಶಾರಾಗಿದೀನಿ, ಜ್ವರ ಇಲ್ಲ. ಬಗೆ ಬಗೆಯ ತಿಂಡಿಗಳನ್ನು ತಿನ್ನಬೇಕು ಅಂತ ಅನ್ನಿಸ್ತಿದೆ. ಲಿಸ್ಟ್ ಬರೆದು ಅಡಿಗೆಯವರಿಗೆ ಕೊಟ್ಟಿದೀನಿ ಗೊತ್ತಾ?" ಇಬ್ಬರೂ ಜೋರಾಗಿ ನಕ್ಕರು. ಅಡಿಗೆಯವರು, ಇಬ್ಬರಿಗೂ ಬಿಸಿ ಬಿಸಿ ಹಾಲನ್ನು ಕುಡಿಯಲು ತಂದಿತ್ತಳು.

"ಧಾಯರು ನಿಮ್ಮ ಹತ್ರ ಮಾತಾಡ್ಬೇಕಂತೆ. ಹೋಗುವಾಗ ಹೇಳ್ಬಿಟ್ಟು ಹೋಗ್ಬೇಕಂತೆ" ಆಕೆ ಹೇಳಿದಾಗ ಇಂದಿರಾ ಗಂಭೀರಳಾದಳು. ಪುಣ್ಯ ಅವಳ ಕಡೆ ನೋಡಿ ಕಣ್ಣು ಮಿಟುಕಿಸಿ ನಕ್ಕಳು.

"ಇಂಟರೆಸ್ಟಿಂಗ್... ವೆರಿ ಇಂಟರೆಸ್ಟಿಂಗ್" ಎಂದಳು.

"ಪುಣ್ಯಾ..." ಇಂದಿರಾ ಹಗುರವಾಗಿ ಗದರಿದಳು.

"ಡ್ಯಾಡಿ, ನನ್ನ ಯಾವ ಫ್ರೆಂಡ್ ಹತ್ರಾನೂ ಮಾತಾಡ್ದೋರೆ ಅಲ್ಲ... ಈಗ ತುಂಬಾ ಆಶ್ಚರ್ಯ ಅನ್ನಿಸ್ತಿದೆ"

"ಅವರು ನಿನ್ನ ಬಗ್ಗೇನೇ ಮಾತಾಡ್ತಿರೋದು... ಇದರಲ್ಲಿ ಏನಾಶ್ಚರ್ಯ?"

"ಎನಿವೇ... ಡ್ಯಾಡಿಗೆ ಈಗ್ಲಾದ್ರೂ ನನ್ನ ಬಗ್ಗೆ ಯೋಚಿಸುಕ್ಕೆ ಸಮಯವಿದೆ ಅಂತಾಯ್ತು. ಮೀಡಿಯೇಟರ್ ನೀನಿದೀಯ... ನನಗೆ ಒಳ್ಳೇದೇ..."

"ನಾನು ನಿನ್ನ ಬಾಯ್‌ಫ್ರೆಂಡ್ ಬಗ್ಗೆ ಹೇಳ್ಲಾ?" ಇಂದಿರಾ ಹೆದರಿಸಿದಳು.

"ಈಗ್ಲೇ ಬೇಡ. ಆದರೆ ಸ್ಕೂಲ್ಗೆ ಹೋಗಿ ಬರಲಿ ಅಂತ ಹೇಳ್ಬೇಕು. ಇಲ್ದಿದ್ರೆ ನೋಡ್ತಿರು..."

"ಏನ್ಮಾಡ್ತೀಯ? ನೀನು ಮದುವೆ ಮಾಡ್ಕೊಂಡು ಹೊರಟು ಹೋದ್ರೆ, ನಿನ್ನ ಡ್ಯಾಡಿ ನಿನ್ನ ಯಾವ ವಿಷಯಕ್ಕೂ ಬರುಲ್ಲ. ಆಗ ನೀನು ಅವರನ್ನು ತುಂಬಾ ಮಿಸ್ ಮಾಡ್ಕೋತೀಯ..."

ಇದ್ದಕ್ಕಿದ್ದಂತೆ ಪುಣ್ಯ ಬಿಕ್ಕಿ ಬಿಕ್ಕಿ ಅಳಲು ಪ್ರಾರಂಭಿಸಿದಾಗ, ಇಂದಿರಾ ಹೆದರಿದಳು. ಅವಳ ತಲೆಯನ್ನು ತನ್ನ ಎದೆಗೆ ಆನಿಸಿಕೊಂಡಳು. "ಹುಶ್... ಅಳ್ಬೇಡ ಅತ್ತರೆ ಸುಸ್ತು ಹೆಚ್ಚಾಗುತ್ತೆ. ನಿಮ್ಮ ಡ್ಯಾಡಿ ಇಬ್ಬರನ್ನು ಬೈತಾರೆ ಅಷ್ಟೇ..."

"ಬೇಬೀ... ಏನಿದು ಯಾಕೆ ಅಳ್ತಿದೀಯ?... ಇಂದಿರಾ ಹಿಂತಿರುಗಿ ನೋಡಿ ಎದ್ದು ನಿಂತಳು. ರೂಮಿನ ಬಾಗಿಲಲ್ಲಿ ಅವಳ ತಂದೆ ನಿಂತಿದ್ದರು.

ಪುಣ್ಯ ಕಣ್ಣೊರೆಸಿಕೊಂಡಳು.

"ನಾನು ಸ್ವಲ್ಪ ಅರ್ಜೆಂಟಾಗಿ ಯಾರನ್ನೋ ಮೀಟ್ ಮಾಡಬೇಕಾಗಿದೆ. ನಾನು ವಾಪಸ್ಸು ಬರೋವರ್ಗೂ ಇವಳ ಜೊತೇಲಿ ಇರ್ತೀರಾ?" ಆತ ಕೇಳಿದಾಗ ಇಂದಿರಾ ಅವಳನ್ನೇ ಮಿಕಿ ಮಿಕಿ ನೋಡಿದಳು.

"ಹೂಂ... ಡ್ಯಾಡಿ ಇರ್ತಾಳೆ. ಪುಣ್ಯ ಇಂದಿರಾಳ ಕೈಯನ್ನೆತ್ತಿದಳು. ಕೆಲವೇ ನಿಮಿಷಗಳಲ್ಲಿ ಕಾರು ಹೊರಟ ಸದ್ದು ಕೇಳಿಸಿತು. ಪುಣ್ಯ ಎದ್ದು ಕಂಪ್ಯೂಟರ್ ಮುಂದೆ ಕುಳಿತಳು. ತನ್ನ ಇಂಟರ್‌ನೆಟ್ ಬಾಯ್‌ಫ್ರೆಂಡ್ ಬಗ್ಗೆ ಹೇಳುತ್ತಾ, ಸ್ಕ್ರೀನ್ ಮೇಲೆ ಮೂಡಿದ ಅವನ ಚಿತ್ರವನ್ನು ತೋರಿದಳು.

"ಇಂದೂ, ನೋಡು... ಆನಂದ್ ಚೆನ್ನಾಗಿದಾರೆ ಅಲ್ವಾ?" ಇಂದಿರಾ ಸ್ಕ್ರೀನ್ ಕಡೆ ನೋಡಿದಳು. ಅಲ್ಲಿ ಕಂಡ ಆನಂದನ ಚಿತ್ರವನ್ನು ನೋಡಿಯೇ ನೋಡಿದಳು ಮಾತಿಲ್ಲದಾದಳು. ಪುಣ್ಯ ಹೇಳುತ್ತಲೇ ಇದ್ದಳು. ಇಂದಿರಳಿಗೆ ಅವಳ ಮಾತಿನ ಮೇಲೆ ಗಮನವಿರಲಿಲ್ಲ. ಪುಣ್ಯ ಕಂಪ್ಯೂಟರ್‌ನ್ನು ಆರಿಸಿ, ಮತ್ತೆ ಮಂಚದ ಮೇಲೆ ಮಲಗಿದಳು.

"ಯಾಕೇ ಇಂದೂ ಮಾತಾಡ್ತಾನೇ ಇಲ್ಲ. ಆನಂದ್ ಬಗ್ಗೆ ನೀನೇನೂ ಹೇಳ್ಲೇ ಇಲ್ಲ. ಹ್ಯಾಂಡ್ಸಮ್ ಆಗಿದಾನೆ ಅಲ್ವಾ? ನನ್ನ ಅವನ ಜೋಡಿ ಹೇಗಿರುತ್ತೆ ಯಾಕೇ ಒಂಥರಾ ಮುಖ ಮಾಡ್ತಿದೀಯ? ಆರ್ ಯೂ ಜಲಸ್ಸ್?"

ಇಂದಿರಾ ಕ್ಷೀಣವಾಗಿ ನಕ್ಕಳು. "ನಾನು ಬರ್ತೀನೇ ಪುಣ್ಯಾ... ಹೇಗೂ ಅಡಿಗೆಯವರು ಇದಾರಲ್ಲ" ಇಂದಿರಾ ಹೊರಡಲು ಎದ್ದಳು.

"ಡ್ಯಾಡಿ ಬರೋವರ್ಗೂ ನೀನು ನನ್ನ ಜೊತೇಲೇ ಇರ್ಬೇಕು. ಇಲ್ದಿದ್ರೆ ಅವರಿಗೆ ಕೋಪ ಬರುತ್ತೆ"

"ನಿನ್ನ ಡ್ಯಾಡಿಗೆ ನಾನ್ಯೇಕೆ ಹೆದರ್ಬೇಕು?... ನಂಗೆ ಹೊತ್ತಾಗುತ್ತೆ"

"ಸರಿ ನಿನ್ನಿಷ್ಟ ನೀನ್ಯಾಕೋ ಅಪ್ಸೆಟ್ ಆಗಿರುವಂತಿದೆ. ಅದೇನೂಂತ ಹೇಳ್ಬಿಟ್ಟು ಹೋಗು"

"ಇನ್ನೆಂದಾದ್ರೂ ಹೇಳ್ತೀನಿ. ಈಗ ನಿಜವಾಗಿಯೂ ನನ್ನ ಮೂಡ್ ಚೆನ್ನಾಗಿಲ್ಲ" ಅವಳು ರೂಮಿನ ಬಾಗಿಲನ್ನು ದಾಟುವಷ್ಟರಲ್ಲಿ ಕಾರು ನಿಂತ ಸದ್ದು ಕೇಳಿಸಿತ್ತು.

"ಡ್ಯಾಡಿ ಬಂದ್ರು" ಪುಣ್ಯ ಅವಳ ಕೈ ಹಿಡಿದೆಳೆದು ಕೂರಿಸಿದಳು. ಆತ ಒಳ ಬಂದ. ಇಂದಿರಾ ಎದ್ದು ಹೊರಟಳು.

"ಥ್ಯಾಂಕ್ಸ್ ಇಂದಿರಾರವರೇ..."

"ಡ್ಯಾಡೀ ಅವಳನ್ನು ಮನೆಗೆ ಡ್ರಾಪ್ ಮಾಡಿ ಬನ್ನಿ, ಹೊತ್ತಾಗಿದೆ"

"ಪರವಾಗಿಲ್ಲ, ನಾನು ಬಸ್ನಲ್ಲಿ ಹೋಗ್ತೀನಿ"

"ನೋ ನೋ... ಬೇಬಿ ಹೇಳಿದ್ಮೇಲೆ ಆಯ್ತು. ಬನ್ನಿ ಡ್ರಾಪ್ ಕೊಡ್ತೀನಿ"

"ಪರವಾಗಿಲ್ಲ, ನಿಮಗ್ಯಾಕೆ ತೊಂದ್ರೆ"

"ಬೇಬಿ ಹೇಳಿದ್ಮೇಲೆ ನಾನೂ ನೀವೂ ಇಬ್ಬರೂ ಒಪ್ಲೇ ಬೇಕು. ಇಲ್ದಿದ್ರೆ ಅವಳಿಗೆ ಕೋಪ ಬರುತ್ತೆ" ಇಂದಿರಾ ಆತನ ಹಿಂದೆ ಹೊರಟಳು.

****

"ನೀವು ನನಗೊಂದು ಫೇವರ್ ಮಾಡ್ಬೇಕು" ಕಾರನ್ನು ಓಡಿಸುತ್ತಾ ನುಡಿದ. ನೀವು ಅವಳ ಆಪ್ತ ಸ್ನೇಹಿತರು ಅಂತ ಹೇಳ್ತಾ ಇದೀನಿ. ಅವಳಿಗೀಗ ಇಪ್ಪತ್ತಾರು ವರ್ಷ. ಅವಳ ಅಮ್ಮ ಬದುಕಿದ್ದಿದ್ರೆ ಮದುವೆ ಮಾಡಿರುತ್ತಿದ್ದಳು. ಮುಂದಿನ ವಾರ ಒಬ್ಬ ವರ ಬರುತ್ತಿದ್ದಾನೆ. ನೀವೇ ಅವಳಿಗೆ ವಿಷಯವನ್ನು ತಿಳಿಸಿ, ಅವಳು ಇಂಟರ್‌ವ್ಯೂಗೆ ರೆಡಿಯಾಗುವಂತೆ ಒಪ್ಪಿಸಬೇಕು"

ಇಂದಿರಾ ಬೆವೆತಳು. ಕನ್ನಡಿಯಲ್ಲಿ, ಅರೆಬರೆ ಬೆಳಕಿನಲ್ಲಿ ಕಂಡ ಅವನ ಮುಖವನ್ನು ನೋಡಿದಳು.

"ಯಾಕೆ ಮಾತಾಡ್ತಿಲ್ಲ ಮಿಸ್ ಇಂದಿರಾ... ಅವಳು ನನ್ನ ಮಗಳೇ ಆದರೂ ಈ ವಿಷಯದಲ್ಲಿ ನಾನು ತಂದೆ, ಗಂಡಸು... ಹುಡುಗಿಯ ಸೂಕ್ಷ್ಮ ಮನಸ್ಸು ನನಗೆ ಹೇಗೆ ತಿಳಿಯುತ್ತೆ? ಅದಕ್ಕೇ... ನಾನು ರಿಕ್ವೆಸ್ಟ್ ಮಾಡ್ಕೊಳ್ತೀನಿ..."

"ಸರಿ, ಆಡ್ತೀನಿ... ಇಲ್ಲೇ ಸಮೀಪದಲ್ಲೇ ನಮ್ಮ ಮನೆ... ನಿಲ್ಲಿಸಿ..."

ಅವನು ಕಾರನ್ನು ನಿಲ್ಲಿಸಿ ಅವಳ ಕಡೆ ನೋಡಿ, ಥ್ಯಾಂಕ್ ಯೂ" ಎಂದ. ಸಮೀಪದಲ್ಲಿದ್ದರೂ, ಕತ್ತಲೆಯಲ್ಲಿ ಅವನ ಮುಖ ಸರಿಯಾಗಿ ಕಾಣ ದಿದ್ದರೂ, ಅವನ ಬಿಸಿ ಉಸಿರು ಅವಳನ್ನು ತಾಕಿತು. ಅವನನ್ನು ಹತ್ತಿರದಿಂದ, ಬೆಳಕಿನಲ್ಲಿ ಸರಿಯಾಗಿ ನೋಡಬೇಕೆಂಬ ಹಂಬಲ ಇಣುಕಿತು. ಅವನು ಕಾರಿನ ಬಾಗಿಲನ್ನು ತೆಗೆದ. ಅವಳು ಕೆಳಗಿಳಿದು "ಬನ್ನಿ ಇಲ್ಲೇ ನಮ್ಮ ಮನೆ" ಎಂದು ಕರೆದಳು.

'ಮತ್ತೆಂದಾದ್ರೂ... ಈಗ ಬೇಬಿ ಒಬ್ಬಳೇ ಇದಾಳೆ..." ಅವಳು ಥ್ಯಾಂಕ್ಸ್ ಹೇಳುತ್ತಿದ್ದಂತೆಯೇ ಕಾರನ್ನು ಸ್ಟಾರ್ಟ್ ಮಾಡಿದ. ಮತ್ತೆ ಅವನ ಮುಖ ಸರಿಯಾಗಿ ಕಾಣಲಿಲ್ಲ. ಮನೆಗೆ ಬಂದವಳು ಮೊದಲು ಕನ್ನಡಿಯ ಮುಂದೆ ನಿಂತು ತನ್ನ ಮುಖವನ್ನು ನೋಡಿಕೊಂಡಳು. ಹಿಂದೆ ಬಂದು ನಿಂತಿದ್ದ ತಂಗಿ ರೇಗಿಸಿದಳು.

"ಕತ್ತಲೆ ಹೊತ್ನಲ್ಲಿ ಕನ್ನಡೀಲಿ ಯಾಕೆ ಮುಖಾನ ನೋಡ್ಕೋತಿದೀಯ?... ಏನಾಯ್ತು ಇವತ್ತು?"

"ನೀನು ಹೋಗು ಸುಮ್ನೆ. ನನ್ನನ್ನೇನು ಸ್ಪೈ ಮಾಡ್ತಿದೀಯ?"

"ಹೂಂ... ಯಾರವನು? ಕಾರ್ನಲ್ಲಿ ಬಿಟ್ಟು ಹೋದ್ನಲ್ಲ" ಇಂದಿರಾ ಬೆಚ್ಚಿ ತಂಗಿಯ ಕಡೆ ತಿರುಗಿದಳು. ತಂಗಿ ನಕ್ಕಂತೆ ಅನ್ನಿಸಿತು.

"ನನ್ನ ಕಲೀಗ್ ಪುಣ್ಯ ಇದಾಳಲ್ಲ, ಅವಳ ತಂದೆ... ಅವಳಿಗೆ ಹುಶಾರಿಲ್ಲ. ಅವಳನ್ನ ನೋಡೋಕೆ ಹೋಗಿದ್ದೆ"

"ಸರಿ... ಅದಕ್ಯಾಕೆ ಬೆಚ್ಚಿ ಬೀಳ್ತೀಯ? ಅವರ ಮನೇಲಿ ಡ್ರೈವರ್ ಇಲ್ವಾ?"

"ನಮಗೇನು ಗೊತ್ತು ಇದಾನೋ ಇಲ್ವೋ ಅಂತ. ನೀನು ವಿಪರೀತ ಪ್ರಶ್ನೆ ಕೇಳ್ತೀಯಾ ಪದ್ಮಿನಿ. ನಂಗೆ ಇದೆಲಾ ಸರಿ ಹೋಗುಲ್ಲ"

"ಅಮ್ಮಂಗೆ ಗೊತ್ತಾದ್ರೆ ಎಲ್ಲಾ ಸರಿ ಹೋಗುತ್ತೆ"

"ಹೇಳ್ಕೋ ಹೋಗೇ, ಹೆದರಿಸ್ತಾಳೆ. ನಾನು ಹೊರಗೆ ಹೋಗಿ ದುಡೀತೀನಿ. ನನ್ನ ಬಗ್ಗೆ ನಿಮಗೆಲ್ಲಾ ಸಂಶಯ. ನೀನೂ ಕಾಲೇಜಿಗೆ ಹೋಗ್ತೀಯಲ್ಲ. ಎಂದಾದ್ರೂ ನಿನ್ನ ಬಾಯ್‌ಫ್ರೆಂಡ್ ಯಾರು ಅಂತ ಕೇಳಿದೀನಾ? ಎಲ್ಲಿಗೆ ಹೋಗ್ತೀಯಾ? ಯಾರ ಜೊತೆ ಹೋಗ್ತೀಯ ಅಂತ ಪ್ರಶ್ನಿಸಿದೀನಾ?... ಬಂದ ಸಂಬಳನ್ನೆಲ್ಲಾ ಇಲ್ಲೇ ತಂದು ಕೊಡ್ತೀನಿ. ನನ್ನನ್ನ ಪ್ರಶ್ನಿಸುವ ಹಕ್ಕು ಯಾರಿಗೂ ಇಲ್ಲ ತಿಳೀತಾ?" ಅವಳ ಎತ್ತರದ ಧ್ವನಿಗೆ ತಾಯಿ ಒಳಬಂದಳು.

"ಏನೇ ಇಂದೂ ಏನಾಯ್ತೇ? ಯಾಕೆ ಹೀಗೆ ರೇಗ್ತಿದೀಯಾ?"

"ನನ್ನನ್ನ ಏನೂ ಕೇಳ್ಬೇಡ. ಅವಳನ್ನೇ ಕೇಳು" ತಂಗಿಯ ಕಡೆ ನೋಡಿ ಇಂದಿರಾ ರೂಮಿನಿಂದ ಹೊರಗೆ ಬಂದು ಬಾಲ್ಕನಿಯಲಲಿ ನಿಂತಳು. ಕಣ್ಣುಗಳು ನೀಲಿಯಾಕಾಶದ ಕಡೆಗೆ ಇತ್ತು. ನೋಟದಲ್ಲೇ ಮಿನುಗುತ್ತಿದ್ದ ನಕ್ಷತ್ರಗಳನ್ನು ಎಣಿಸುತ್ತಿದ್ದಳು. ಆದರೆ ಮನಸ್ಸು ಮಾತ್ರ ಅಂಕೆಗೆ ಸಿಗದೇ ಬೇರೇನನ್ನೋ ಯೋಚಿಸುತ್ತಿದ್ದವು.

"ಸಾರಿ ಕಣೆ ಅಕ್ಕಾ... ತಮಾಷೆ ಮಾಡ್ದೆ ಅಷ್ಟೇ..." ಹಿಂದಿನಿಂದ ಪದ್ಮಿನಿ ಅವಳನ್ನು ತಬ್ಬಿದಾಗ, ಅವಳು ಕೈಗಳನ್ನು ಸರಿಸಿದಳು.

"ಇವತ್ತೇ ಕಡೆ, ಹೀಗೆಲ್ಲಾ ಜೋಕ್ಸ್ ಮಾಡ್ಬೇಡ. ನಂಗೆ ಇಷ್ಟವಾಗುಲ್ಲ. ನಡೀ ಊಟ ಮಾಡೋಣ" ತಂಗಿಯೊಡನೆ ಕೆಳಗಿಳಿದು ಬಂದಳು.

*****

"ಪುಣ್ಯಾ... ಡ್ಯಾಡಿ ನಿನಗೊಬ್ಬ ಹುಡುಗನನ್ನ ನೋಡಿದಾರಂತೆ. ಮುಂದಿನ ವಾರ ಬರ್ತಾ ಇದಾನೆ. ಇಂಟರ್‌ವ್ಯೂಗೆ ಸಿದ್ಧವಾಗಿರು"

"ಆರ್ ಯೂ ಜೋಕಿಂಗ್... ನಾನು ಯಾವ ಇಂಟರ್‌ವ್ಯೂಗೂ ರೆಡಿಯಾಗುಲ್ಲ"

"ಹಠ ಮಾಡ್ಬೇಡ ಪುಣ್ಯಾ ನಿನ್ನ ಡ್ಯಾಡಿಗೆ ಬೇಸರ ಆಗುತ್ತೆ"

"ಹಾಗಂತ ನನಗೆ ಇಷ್ಟವಿಲ್ಲದಿದ್ರೂ ಇಂಟರ್‌ವ್ಯೂಗೆ ಕೂತ್ಕೋಬೇಕಾ?"

"ಆಮೇಲೆ ಒಪ್ಗೆ ಆಗ್ಲಿಲ್ಲ ಅಂತ ಹೇಳಿದ್ರಾಯ್ತು. ಮೊದ್ಲೇ ಯಾಕೆ ನಿನ್ನ ಡ್ಯಾಡಿಗೆ ಬೇಸರ ಮಾಡ್ಬೇಕು?"

"ನೀನು ನನ್ನ ಪರಾನೋ, ನನ್ನ ಡ್ಯಾಡಿಯ ಪರನೋ?"

"ಗೊತ್ತಿಲ್ಲ, ಅವರು ಹೇಳೋದ್ರಲ್ಲೂ ತಪ್ಪಿಲ್ಲ. ನೀನು ಆಡೋದ್ರಲ್ಲೂ ತಪ್ಪಿಲ್ಲ"

"ಅದೆಲ್ಲಾ ಸರಿ ಇಲ್ಲ ಇಂದೂ, ಮೊದಲು ನಾನು ನಿನ್ನ ಫ್ರೆಂಡ್. ಆಮೇಲೆ ನಿನಗೆ ಡ್ಯಾಡಿಯ ಪರಿಚಯವಾದದ್ದು"

"ಎಸ್... ಒಪ್ಕೋತೀನಿ. ಆದರೆ ನಿನ್ನ ಸ್ನೇಹಿತೆ ಅನ್ನೋ ಕಾರಣದಿಂದಲೇ, ನಿನ್ನ ಡ್ಯಾಡಿ ನನಗೆ ಈ ಕೆಲಸವನ್ನು ವಹಿಸಿರುವುದು"

"ಅವರ್‍ಯಾರು ನಿನಗೆ ಈ ಕೆಲಸವನ್ನು ವಹಿಸೋಕೆ? ನೀನೇನೂ ಅವರ ಹೆಂಡತಿ ಅಲ್ಲ" ಎಂದು ಬಿಟ್ಟಳು. ಇಂದಿರಾಳ ಮುಖ ಕೆಂಪಾಗಿತ್ತು, ಎದ್ದು ನಿಂತಳು. ಪುಣ್ಯಲಿಗೆ ತನ್ನ ತಪ್ಪಿನ ಅರಿವಾಗಿತ್ತು. ಕೈ ಹಿಡಿದು 'ಸಾರಿ' ಕೇಳಿದಳು.

"ಐ ಆಮ್ ರಿಯಲೀ ಸಾರಿ ಇಂದೂ... ನಾನು ಬೇಗ ಅಪ್ಸೆಟ್ ಆಗಿ ಬಿಡ್ತೀನಿ. ನಾನು ಮೊದಲು ಹೀಗಿರಲಿಲ್ಲ... ಅಮ್ಮ ಇದ್ದಿದ್ರೆ ಹೀಗಾಗ್ತಿರಲಿಲ್ಲ" ಅವಳ ಭುಜಕ್ಕೆ ಒರಗಿ ಅಳತೊಡಗಿದಳು.

"ನೀನು ಮಾತು ಮಾತಿಗೂ ಅಳ್ಬೇಡ. ನಾನು ಇನ್ಮುಂದೆ ನಿಮ್ಮ ಮನೆಗೇ ಬರುಲ್ಲ. ಆಗ ನಿನ್ನ ಡ್ಯಾಡಿ ಅವರೇ ನಿನ್ಹತ್ರ ನೇರವಾಗಿ ಮಾತಾಡ್ತಾರೆ. ನೀವು ನೀವೇ ಡಿಸೈಡ್ ಮಾಡ್ಕೊಳ್ಳಿ"

"ಪ್ಲೀಸ್... ಹಾಗ್ಮಾತ್ರ ಮಾಡ್ಬೇಡ ಇಂದೂ, ನಾನು ಸತ್ತೇ ಹೋಗ್ತೀನಿ ಅಷ್ಟೇ"

"ಹಾಗಾದ್ರೆ ನನ್ನ ಮಾತಿಗೆ ಬೆಲೆ ಕೊಡು. ಈ ಇಂಟರ್‍ವ್ಯೂ ಬೇಡ ಅನ್ಬೇಡ. ಆಮೇಲೆ ರಿಜೆಕ್ಟ್ ಮಾಡಿದ್ರಾಯ್ತು. ಆಗ ಯಾರೂ ಬಲವಂತ ಮಾಡುಕ್ಕೆ ಆಗುಲ್ಲ" ಪುಣ್ಯ ಕೆಟ್ಟ ಮುಖ ಮಾಡಿ ತಲೆಯಾಡಿಸಿದಳು.

*****

ಇಂಟರ್‍ವ್ಯೂ ದಿನ ಇಂದಿರಾ ಸ್ಕೂಲಿಗೆ ರಜ ಹಾಕಿ, ಪುಣ್ಯಾಳ ಮನೆಗೆ ಬಂದಳು. ಅವನು ಅವಳನ್ನು ಕೃತಜ್ಞತೆಯಿಂದ ನೋಡಿದ. ಇಂದಿರಾ, ಪುಣ್ಯ ಸಿದ್ಧಳಾಗಲು ಸಹಾಯಕಳಾದಳು.

"ನಾನು ಚೂಡಿದಾರ್ ಹಾಕ್ಕೋತೀನಿ, ಸೀರೆ ಬೇಡ"

"ನಿನ್ನಿಷ್ಟ..."

"ಚೂಡಿದಾರ್ ಹಾಕ್ಕೊಂಡ್ರೆ ಕಾಲೇಜ್ ಗರ್ಲ್ ಥರ ಕಾಣ್ತೀನಿ. ಸೀರೆ ಉಟ್ಟರೆ ಗರತಿ ಥರ ಕಾಣ್ತೀನಿ ಅಲ್ವಾ?"

"ಈಗ ಯಾವ ಥರ ಕಂಡರೆ ಏನು? ನೀನೇನು ಆ ಹುಡುಗನನ್ನ

ಮೆಚ್ಚುಸುತ್ತಿಲ್ಲವಲ್ಲ"

"ನಾನು ಅವನೊಬ್ಬನನ್ನು ಮೆಚ್ಚಿಸಿದಾರೆ ಸಾಕು..." ದೃಷ್ಟಿ ಕಂಪ್ಯೂಟರ್ ಕಡೆ ಇತ್ತು.

"ಪುಣ್ಯಾ... ಅವನನ್ನು ಪರ್ಸನರ್ ಆಗಿ ನೋಡ್ದೇ ಯಾವ ತೀರ್ಮಾನಕ್ಕೂ ಬರಬೇಡ. ಎಷ್ಟಾಗ್ಲೀ ಅವನು ಹೊರದೇಶದಲ್ಲಿರುವವನು".

"ಅವನು ಒಳ್ಳೆಯವನು ಅಂತ ನನ್ನ ಹೃದಯ ಹೇಳುತ್ತೆ. ಅವನೂ ನನ್ನನ್ನು ಇಷ್ಟ ಪಡ್ತಾನಲ್ಲ... ಆದರೆ ಒಂದೇ ಬೇಜಾರು... ಈ ಡ್ಯಾಡೀನ ಒಂಟಿಯಾಗಿ ಬಿಟ್ಟು ಹೋಗೋದು ಹೇಗೆ? ವೃದ್ಧಾಶ್ರಮಕ್ಕೆ ಸೇರಿಸೋಣ ಅಂತಂದ್ರೆ... ಹೀ ಈಸ್ ನಾಟ್ ದಟ್ ಮಚ್ ಓಲ್ಡ್..."

"ವೃದ್ಧಾಶ್ರಮಕ್ಕಾ...? ಇಂಥಾ ಐಡಿಯಾ ಬಂದುದಾದ್ರೂ ಹೇಗೆ?"

"ಸಾರೀ... ನನಗೂ ಯೋಚಿಸಿ ಯೋಚಿಸಿ ಸಾಕಾಗಿದೆ. ಇಲ್ದಿದ್ರೆ ನಾನೇ ನನ್ನ ಮದುವೆ ಐಡಿಯಾನ ಬಿಟ್ಟು ಬಿಡ್ಬೇಕು"

"ನಾನೊಂದು ಐಡಿಯಾ ಹೇಳ್ಲಾ? ನೀನು ನಗಬಾರದು"

"ಓ.ಕೇ. ಹೇಳು..."

"ನಿಮ್ಮ ಡ್ಯಾಡಿಗೆ ಮತ್ತೆ ಮದುವೆ ಮಾಡಿ ಬಿಡು..."

"ವ್ಹಾ... ವ್ಹಾಟ್ ಎ ಗುಡ್ ಐಡಿಯಾ... ನಂಗೆ ಇದು ಹೋಲದೇ ಇರಲಿಲ್ಲ. ಖುಷಿಯಲ್ಲಿ ಇಂದಿರಾಳ ಕೆನ್ನೆಗಳನ್ನು ಚುಂಬಿಸಿದಳು.

"ಪ್ಲೀಸ್ ಇಷ್ಟು ಎಕ್ಸೈಟ್ ಆಗ್ಬೇಡ ಪುಣ್ಯಾ... ಮೊದಲು ಸರಿಯಾಗಿ ಯೋಚಿಸು. ನಿಮ್ಮ ಡ್ಯಾಡೀನ ಒಪ್ಪಿಸು... ಅವರ ಒಪ್ಪಿಗೆ ಮುಖ್ಯ"

"ಹೌದು ಕರೆಕ್ಟ್... ಆದರೆ ನನಗೆ ಸ್ಟೆಪ್ ಮದರ್ ಬರ್ತಾಳಲ್ಲ. ದಟ್ ಇರಿಟೇಟ್ಸ್ ಮಿ"

"ಹಾಗಂದ್ರೆ ಹೇಗೆ? ನೀನೇನೂ ಇಲ್ಲಿ ಇರುಲ್ಲವಲ್ಲ. ಇದರಿಂದ ನಿನಗೆ ಲಾಭವೇ ತಾನೆ, ನಷ್ಟವೇನೂ ಇಲ್ಲವಲ್ಲ..."

"ಆದರೂ, ಮಮ್ಮಿಯ ಪ್ಲೇಸ್‌ನಲ್ಲಿ ಇನ್ನೊಬ್ಬ ಹೆಂಗಸನ್ನು ನೋಡಬೇಕಲ್ಲ, ಮಮ್ಮೀಗೆ ಮೋಸ ಮಾಡಿದಂತಾಗುಲ್ವಾ?"

"ಹಾಗಾದ್ರೆ ಫರ್ಗೆಟ್ ಇಟ್. ಐಡಿಯಾ ಚೆನ್ನಾಗಿದೆ ಅಂತಂದೆ... ಕೆನ್ನೆ ನೋಯ್ತಾ ಇದೆ'

"ಸಾರೀ... ಇಂದೂ" ಎನ್ನುತ್ತಾ ಕೆನ್ನೆಗಳನ್ನು ಸವರಿದಳು. ಅಷ್ಟರಲ್ಲಿ ರೂಮಿನ ಬಾಗಿಲನ್ನು ಬಡಿದು ಸದ್ದು ಕೇಳಿಸಿತು. ಇಂದಿರಾ ಬಾಗಿಲನ್ನು ತೆರೆದಳು. ಹೊರಬಾಗಿಲಲ್ಲಿ ನಿಂತಿದ್ದ ಆತನನ್ನೇ ಎವೆ ಇಕ್ಕದೇ ನೋಡಿದಳು. ಅತಿಥಿಗಳನ್ನು ಸ್ವಾಗತಿಸಲು ಆತ ಸಿದ್ಧನಾಗಿದ್ದ. ಉತ್ಸಾಹಿತನಾಗಿದ್ದವನು

ಹೊಸಬನಂತೆ ಕಂಡ.

"ಬೇಬೀ ರೆಡಿನಾ?... ಒಳಕ್ಕೆ ಬಂದವನು ಹುಬ್ಬು ಗಂಟಿಕ್ಕಿದ. ಸೀರೇ ಇಟ್ಕೋಬಾರ್ದಾಗಿತ್ತಾ? ಯಾವಾಗ ನೋಡಿದ್ರೂ ಈ ಡ್ರೆಸ್..."

"ಯಾಕೆ ಡ್ಯಾಡ ನನಗೆ ಈ ಡ್ರೆಸ್ ಒಪ್ಪುಲ್ವಾ? ನಾನು ಎಷ್ಟು ಯಂಗಾಗಿ ಕಾಣ್ತೀನಿ. ನಂಗೆ ಇಪ್ಪತ್ತಾರು ವರ್ಷ ಅಂತ ಯಾರೂ ಹೇಳುಕ್ಕಾಗುಲ್ಲ"

"ಪ್ಲೀಸ್ ಇಂದಿರಾರವರೇ... ಸೀರೇನ ಉಡಿಸಿ... ಅವರುಗಳು ಸ್ವಲ್ಪ ಹಳೇ ಸಂಪ್ರದಾಯದವರು..." ಅವನು ಹೊರಗೆ ಹೊರಟು ಹೋದ. ಪುಣ್ಯ ಮುಖ ಊದಿಸಿಕೊಂಡಳು.

"ಈ ಡ್ಯಾಡೀ ಯಾವಾಗ್ಲೂ ಹೀಗೇ... ಇವರಿಗೆ ಸರಿಯಾಗಿ ಬುದ್ಧಿ ಕಲಿಸ್ತೀನಿ. ಚೂಡಿದಾರ್ ಹಾಕ್ಕೊಳ್ಳೋ ಹೆಂಡ್ತೀನೇ ಹುಡುಕ್ತೀನಿ. ಆಗ ಅವರು ಏನ್ಮಾಡ್ತಾರೆ?"

ಇಂದಿರಾ ಗೊಳ್ಳನೆ ನಕ್ಕಳು "ಹೆಂಡತಿಯಾಗಿ ಬಂದವಳು ನಿಮ್ಮ ಡ್ಯಾಡಿ ಹೇಳಿದ ಹಾಗೆ ಕೇಳ್ಬೇಕಾಗುತ್ತೆ. ನೀನೂ ಅಷ್ಟೇ... ನಿನ್ನ ಮದುವೆ ಆದ್ಮೇಲೆ, ನಿನ್ನ ಗಂಡಂಗೆ ಯಾವ ಡ್ರೆಸ್ ಇಷ್ಟವೋ ಅದನ್ನೇ ಹಾಕ್ಕೋ ಬೇಕಾಗುತ್ತೆ"

"ಅವನು ಫಾರಿನ್‌ನಲ್ಲಿರೋನು... ಜೀನ್ಸ್‌ಪ್ಯಾಂಟ್... ಟಾಪ್ ಯಾವ್ದಾದ್ರೂ ಸರಿ... ಚೂಡಿದಾರ್ ಕೂಡಾ ಇಷ್ಟವಾಗುಲ್ಲ ಅವನಿಗೆ..."

"ಹಾಗೆ ಹೇಳ್ಬೇಡ... ಮೊದಲು ಅವನ ಇಷ್ಟ ಏನು ಅಂತ ತಿಳ್ಕೋ ಆಮೇಲೆ ದಿನಾ ಇದೇ ವಿಷಯಕ್ಕೆ ಜಗ ಆಡ್ಬೇಡಿ..." ಪುಣ್ಯ ಎತ್ತಿಟ್ಟ ಸೀರೆಗಳಲ್ಲಿ ಒಂದನ್ನು ಆಯ್ಕೆ ಮಾಡಿ, ಸೀರೆ ಉಡಲು ಸಹಾಯ ಮಾಡಿದಳು. ಕನ್ನಡಿಯ ಮುಂದೆ ನಿಂತ ಪುಣ್ಯ ಮೂತಿ ಸೊಟ್ಟಗೆ ಮಾಡಿದಳು.

"ಈಗ ಟಿಪಿಕಲ್ ಗೌರಮ್ಮನ ಥರ ಕಾಣ್ಬೇಕು. ಬಿಗಿಯಾಗಿ ಜಡೆ ಹೆಣೆದು, ತಲೆ ತುಂಬಾ ಹೂ ಮುಡಿದು, ಹಣೆಗೆ ಅಗಲವಾದ ಕುಂಕುಮವನ್ನು ಇಟ್ಟು ಮೂವತ್ತೈದು ವರ್ಷದ ಹೆಂಗಸಿನಂತೆ ಹುಡುಗನ ಎದುರಿಗೆ ಕೂತು, ಆಕಳಿಸಬೇಕು. ಆಗ ಡ್ಯಾಡಿಗೆ ಅರ್ಥವಾಗುತ್ತೆ"

"ನೀನು ನಿನ್ನ ಡ್ಯಾಡೀನ ಹೇಟ್ ಮಾಡ್ತೀಯೋ ರೆಸ್ಪೆಕ್ಟ್ ಮಾಡ್ತಿಯೋ ಗೊತ್ತಾಗುಲ್ಲ. ಅವರಿಗೆ ನಿನ್ನನ್ನ ಕಂಡ್ರೆ ಪ್ರೀತಿ ಜಾಸ್ತಿ..."

"ಈ ಪ್ರೀತಿಯೆಲ್ಲಾ ಇನ್ನೆಷ್ಟು ದಿನ? ಹೆಂಡ್ತಿ ಬಂದ ಮೇಲೆ, ಮಗಳೊಬ್ಬು ಇದ್ದಳು ಅನ್ನೋದೂ ಮರೆತು ಹೋಗಬಹುದು" ಇಬ್ಬರೂ ಜೋರಾಗಿ ನಕ್ಕರು. ಮತ್ತೆ ಬಾಗಿಲ ಬಡಿದ ಸದ್ದಾಯಿತು. ಪುಣ್ಯಳೇ ಬಾಗಿಲನ್ನು ತೆರೆದಳು. ಎದುರಿಗೆ ಅಡಿಗೆಯಾಕೆ ನಿಂತಿದ್ದರು.

"ಬೇಬಿ, ನಿಮ್ಮ ಡ್ಯಾಡಿ ಕರೀತಿದಾರೆ. ಅವರೆಲ್ಲಾ ಬಂದಾಯ್ತು..."

"ಎಷ್ಟು ಜನ ಬಂದಿದಾರೆ? ಹುಡುಗ ಹೇಗಿದಾನೆ?"

"ನೀನೇ ನೋಡು ಬಾ ಬೇಬಿ..."

"ಪ್ಲೀಸ್, ಎಲ್ಲರ ಎದುರಿಗೆ ಬೇಬಿ ಅಂತ ಮಾತ್ರ ಕರೀ ಬೇಡಿ..." ಪುಣ್ಯ ಮತ್ತೊಮ್ಮೆ ಕನ್ನಡಿಯ ಮುಂದೆ ನಿಂತಳು.

"ನೀನೂ ಬಾರೇ ಇಂದಿರಾ... ನನ್ನ ಕೈ ಕಾಲು ನಡುಗುತ್ತಿದೆ"

"ಸಿಲ್ಲಿ ಹಾಗೆ ಮಾತಾಡ್ಬೇಡ... ಇದು ನಿನ್ನ ಇಂಟರ್‌ವ್ಯೂ... ನಾನು ಅಲ್ಲಿಗೆ ಬರುವುದು ಸರಿಯಲ್ಲ"

"ಅವರು ನಿನ್ನನ್ನ ಮೆಚ್ಚಿಕೊಂಡ್ರೆ ಒಳ್ಳೇದೇ ಆಯ್ತು..."

"ನಿಮ್ಮ ಡ್ಯಾಡಿ ಇಬ್ಬರನ್ನು ಬೈತಾರೆ ಅಷ್ಟೇ... ಈಗ ಹೋಗು... ನಾನು ಆಮೇಲೆ ಬರ್ತೀನಿ" ಪುಣ್ಯಾ ಅಡಿಗೆಯಾಕೆಯ ಜೊತೆಯಲ್ಲಿ ಹೋದಳು. ಸ್ವಲ್ಪ ಹೊತ್ತಿನ ನಂತರ ಅಡಿಗೆಯಾಕೆ ಬಂದು ಇಂದಿರಾಳನ್ನು ಕರೆದಳು. ಇಂದಿರಾ ಆಕೆಯೊಡನೆ ಹಾಲಿಗೆ ಬಂದಳು. ಆತ ಆಕೆಯ ಪರಿಚಯ ಮಾಡಿಸಿದ.

"ಇವರು ಮಿಸ್ ಇಂದಿರಾ... ನನ್ನ ಮಗಳ ಸ್ನೇಹಿತೆ..." ಇಂದಿರಾ ಎಲ್ಲರಿಗೂ ನಮಸ್ಕರಿಸಿ ಕೈ ಮುಗಿದಳು. ಪುಣ್ಯಾಳ ಪಕ್ಕದಲ್ಲಿ ಕುಳಿತಳು. ಕಾಫಿ ತಿಂಡಿಯ ಉಪಚಾರಗಳಾದವು. ಲೋಕಾಭಿರಾಮದ ಮಾತುಗಳಾದವು. ಬಂದಿದ್ದವರು ಹೊರಟೂ ಹೋದರು. ಪುಣ್ಯಾ ಹಾಯಾಗಿ ಉಸಿರನ್ನು ಬಿಟ್ಟು ಅಲ್ಲಿದ್ದ ದೀವಾನದ ಮೇಲೆ ಒರಗಿದಳು.

ಇಂದಿರಾ ಹೊರಡ್ತೀನಿ ಅಂತಂದಾಗ ಅವನು ಅವಳನ್ನು ಮನೆ ತನಕ ಬಿಟ್ಟು ಬರಲು ಹೊರಟ. "ನೀನೂ ಬರ್ತೀಯಾ ಬೇಬಿ" ಕೇಳಿದ.

"ಇಲ್ಲ ಡ್ಯಾಡ್ ನೀವು ಬಿಟ್ಟು ಬನ್ನಿ... ನನಗೆ ಇಮೇಲ್ ಚೆಕ್ ಮಾಡೋದಿದೆ" ಇಂದಿರಾ ಕಣ್ಣುಗಳನ್ನು ಅರಳಿಸಿದಳು. ಪುಣ್ಯಾ ಕಣ್ಣು ಸನ್ನೆ ಮಾಡಿದಳು.

ಕಾರನ್ನು ಸ್ಟಾರ್ಟ್ ಮಾಡಿ, ಅವಳ ಕಡೆ ತಿರುಗಿ "ಥ್ಯಾಂಕ್ಸ್" ಅಂತಂದ.

"ಪರವಾಗಿಲ್ಲ" ಅವಳು ಸಂಕೋಚದಿಂದ ನುಡಿದಳು.

"ನಂಗೆ ಬೇಬೀದೇ ಚಿಂತೆ. ಅವಳು ಗಂಡನ ಮನೇಲಿ ಹೇಗೆ ನಿಬಾಯಿಸ್ತಾಳೋ... ನೀವು ಸ್ವಲ್ಪ ಅವಳನ್ನು ಟೇಮ್ ಮಾಡ್ಬೇಕು"

ಇಂದಿರಾ ನಕ್ಕಳು "ಅದರ ಅಗತ್ಯವಿಲ್ಲ, ಎಲ್ಲಾ ಜವಾಬ್ದಾರಿ ತಾನೇ ತಾನಾಗಿ ಬರುತ್ತೆ"

"ಆದರೂ ಅವಳು ಚೈಲ್ಡಿಷ್ ಅಂತ ಅನ್ನಿಸುತ್ತೆ. ನಿಮ್ಮ ಹಾಗೆ ತಿಳುವಳಿಕೇನೇ ಇಲ್ಲ".

"ಅದು ಅವರವರು ಬೆಳೆದು ಬಂದ ರೀತಿ. ನಮ್ಮ ಮನೇಲಿ ನಾವು

ನಾಲ್ಕು ಜನ ಮಕ್ಕಳು. ಮನೆ ತುಂಬಾ ಜನ ಇದೀವಿ. ಪುಣ್ಯಾ ರಾಜ ಕುಮಾರಿಯ ಥರ ಒಬ್ಬಳೇ ಬೆಳೆದಿದಾಳೆ. ಆದರೂ ಪುಣ್ಯ ಒಳ್ಳೆಯ ಹುಡುಗಿ. ಎಲ್ಲರೊಂದಿಗೆ ಹೊಂದ್ಕೋತಾಳೆ"

"ಏನು ಹೊಂದ್ಕೋತಾಳೋ... ನನಗೆ ಭಯ ಆಗುತ್ತೆ. ಅವಳ ಮಮ್ಮಿ ಇದ್ದಿದ್ದರೆ ನನಗೆ ಆತಂಕವಿರಲಿಲ್ಲ. ಈಗ ನೀವೇ ಅವಳಿಗೆ ತಿಳುವಳಿಕೆ ಹೇಳ್ಬೇಕು"

"ಹಾಗಾದ್ರೆ ಹುಡುಗ ಒಪ್ಪಿಕೊಂಡು ಬಿಟ್ಟಿದಾನಾ?"

"ಹುಂ... ಫೋಟೋ ನೋಡಿಯೇ ಒಪ್ಪಿಕೊಂಡಿದ್ದ. ನಮಗೆ ಎಲ್ಲಾ ರೀತಿಯಲ್ಲೂ ಸೂಕ್ತನಾಗಿದಾನೆ. ಇವಳದ್ದು ವಿಶಾಖಾ ನಕ್ಷತ್ರ. ಮೈದುನನಿಲ್ಲದ ಮನೆ ಆಗಬೇಕು. ಹುಡುಗ ಒಬ್ಬನೇ ಮಗ... ಇವಳಿಗೂ ಇಪ್ಪತ್ನಾಲ್ಕು ವರ್ಷ ತುಂಬಿದೆ"

"ಹಾಗಂತ ಬಲವಂತ ಮಾಡುಕ್ಕೆ ಆಗುತ್ತಾ ಸಾರ್...?"

"ನನ್ನ ಹೆಸರು ರಮೇಶ್ ಅಂತ... ಹಾಗೇ ಕರೀರಿ ಪರವಾಗಿಲ್ಲ... ಬಹುಶಃ ನೀವು ಒಬ್ಬರೇ ಅವಳ ಆಪ್ತರು. ಈ ವಿಷಯದಲ್ಲಿ ನೀವು ನನಗೆ ಸಹಾಯ ಮಾಡ್ಬೇಕು"

"ನಾನು ಬಲವಂತ ಮಾಡ್ಲಾರೆ... ಅವಳ ಇಷ್ಟ ಏನೂಂತ ತಿಳ್ಕೋಬೇಡ್ವೆ?"

"ಹೋಗ್ಲೀ ಅವಳ ಮನಸ್ನಲ್ಲಿ ಏನಿದೆ ಅಂತ ನನಗೆ ತಿಳಿದು ಹೇಳ್ತೀರಾ?"

"ಪ್ರಯತ್ನ ಪಡ್ತೀನಿ"

"ಪ್ರಯತ್ನ ಅಲ್ಲ, ನಂಗೆ ರಿಸಲ್ಟ್ ಬೇಕು. ನನಗೂ ವಯಸ್ಸಾಗ್ತಿದೆ... ಇವಳ ಮದುವೆ ಮಾಡಿ ಬಿಟ್ಟರೆ ನನ್ನ ಜವಾಬ್ದಾರಿ ಮುಗೀತು..."

"ಆಮೇಲೆ ನೀವು ಒಬ್ಬರೇ ಆಗಿ ಬಿಡ್ತೀರಲ್ಲ" ಮಾತು ತಟ್ಟನೆ ಬಂದಿತ್ತು.

"ನನ್ನ ಹೆಂಡತಿ ತೀರಿ ಹೋದ ನಂತರ ನಾನು ಒಂಟಿಯೇ... ಈ ಜೀವನ ನನಗೆ ಅಭ್ಯಾಸವಾಗಿದೆ. ಮಗಳು ನನ್ನ ಜೊತೆಗೇ ಇರಲಿ ಅನ್ನುವಷ್ಟು ಸ್ವಾರ್ಥಿ ನಾನಲ್ಲ"

"ಪುಣ್ಯಾಳ ಚಿಂತೆಯೂ ಇದೇ ಆಗಿದೆ. ನಿಮ್ಮನ್ನು ಒಂಟಿಯಾಗಿ ಬಿಟ್ಟು ಹೋಗಲು ಅವಳ ಮನಸ್ಸು ಒಪ್ಪುತ್ತಿಲ್ಲ"

"ಹಾಗಂತ... ಜೀವಮಾನವೆಲ್ಲಾ ಅವಳು ನನ್ನ ಜೊತೇಲೇ ಇರುಕ್ಕಾಗುತ್ತಾ?"

"ಇಲ್ಲ... ಆದರೆ ಬೇರೆ ಒಂದು ಉಪಾಯವಿದೆ. ನೀವ್ಯಾಕೆ ಮತ್ತೆ ಮದುವೆ ಯಾಗಬಾರದು?" ಕಾರು ಗಕ್ಕನೆ ನಿಂತಿತು. ಅವನು ಅವಳೆಡೆ ನೋಡಿದ. ಅವಳ ಎದೆ ನಡುಗಿತು. ಆದರೆ ಒಂದು ಗಳಿಗೆ ತಳೆದು ಕಾರನ್ನು ಮತ್ತೆ ಓಡಿಸಿದ. ಮತ್ತೆ ಇಬ್ಬರೂ ಮಾತನಾಡಲಿಲ್ಲ. ಅವಳ ಮನೆಯ ಮುಂದೆ

ಕಾರು ನಿಂತಿತ್ತು. ಅವಳು ಇಳಿಯುವ ಮುನ್ನ ಥ್ಯಾಂಕ್ಸ್ ಎಂದಳು. ಅವನು ತಲೆಯಾಡಿಸಿ 'ವೆಲ್‌ಕಂ' ಎಂದ. ಬೆನ್ನು ತಿರುಗಿಸಿ ಹೋದವಳನ್ನೇ ಅರೆಕ್ಷಣ ನೋಡಿ ಕಾರನ್ನು ಮತ್ತೆ ಸ್ಟಾರ್ಟ್ ಮಾಡಿದ.

*****

"ಏನು ಯೋಚಿಸಿದೆ ಬೇಬಿ? ಮದುವೆ ಯಾವಾಗ ಇಟ್ಟುಕೊಳ್ಳೋಣ? ಅವರು ಫೋನು ಮಾಡಿದ್ದರು?" ಊಟಕ್ಕೆ ಕುಳಿತಾಗ ಕೇಳಿದ.

"ಇಲ್ಲ, ಡ್ಯಾಡಿ, ನಂಗೆ ಈ ಮದುವೆ ಇಷ್ಟವಿಲ್ಲ"

"ಯಾಕೆ ಇಷ್ಟವಿಲ್ಲ...? ಅವರು ಎಲ್ಲಾ ರೀತಿಯಿಂದಲೂ ನಮಗೆ ತಕ್ಕವರಾಗಿದಾರೆ. ಅವನು ನಿನ್ನನ್ನು ಇಷ್ಟ ಪಟ್ಟಿದಾನೆ"

"ಈ ವಿಷಯದಲ್ಲಿ ನನ್ನನ್ನು ಬಲವಂತ ಮಾಡಬೇಡಿ... ನಂಗೆ ಯೋಚಿಸುಕ್ಕೆ ಸ್ವಲ್ಪ ಸಮಯಬೇಕು"

"ಸರಿ... ಆದರೆ ತುಂಬಾ ನಿಧಾನಿಸಬಾರದು... ನಿನ್ನ ಫ್ರೆಂಡ್ ಇಂದಿರಾಗೆ ಎಷ್ಟು ವರ್ಷ? ಅವಳಿಗ್ಯಾಕೆ ಮದುವೆಯಾಗಿಲ್ಲ?"

"ಅದು ಅವರ ಮನೆಯ ಪ್ರಾಬ್ಲಂ... ನಾನು ಕೇಳಿಲ್ಲ... ನಿಮಗೆ ಯಾಕೆ ಕುತೂಹಲ?"

"ಕುತೂಹಲ ಅಲ್ಲ... ಹುಡುಗನ ಮನೆಯವರು ವಿಚಾರಿಸಿದ್ರು... ಅದಕ್ಕೇ ಕೇಳ್ದೆ..."

"ಅವಳೂ ಮದುವೆಯಾಗಿ ಹೊರಟು ಹೋದ್ರೆ ನಾನು ಒಂಟಿಯಾಗಿ ಬಿಡ್ತೀನಿ" ನನಗೆ ಅವಳೊಬ್ಬಳೇ ಸ್ನೇಹಿತೆ..." ಸ್ವಾರ್ಥಿಯಂತೆ ಮಾತನಾಡಿದಳು.

"ನಂಗೊತ್ತು... ಅವಳು ನಿನ್ನ ಕಲೀಗ್... ಆದ್ರೂ ಗಾಢ ಸ್ನೇಹ... ಹೇಗೆ?"

"ಅವಳು ತುಂಬಾ ಒಳ್ಳೆಯವಳು ಡ್ಯಾಡ್... ನನಗೆ ಅವಳು ಹಿಡಿಸಿದಳು. ಎಷ್ಟೋ ವಿಷಯಗಳಲ್ಲಿ ಅವಳು ನನಗೆ ಸಹಾಯ ಮಾಡ್ತಾಳೆ"

"ನಿನಗೆ... ಅವಳ ಮೇಲೆ ತುಂಬಾ ವಿಶ್ವಾಸ ಅಲ್ವಾ?"

"ಹೌದು ಡ್ಯಾಡ್... ನಿಮಗೆ ಹೇಗೆ ಗೊತ್ತಾಯ್ತು? ಅವಳು ಹೇಳಿದ್ಲಾ?"

"ನಾನೇ ಕಂಡು ಹಿಡಿದೆ. ಅವಳನ್ಯಾಕೆ ಕೇಳಲಿ?"

"ಡ್ಯಾಡೀ... ನಾನೊಂದು ವಿಷಯಾನ ಹೇಳಬೇಕಾಗಿತ್ತು..."

"ನನ್ನ ಮದುವೆ ವಿಷಯಾ ತಾನೇ? ಮೊದಲು ನಿನ್ನ ಮದುವೆಯಾಗಲಿ. ಆಮೇಲೆ ಮಾಡ್ಕೋತೀನಿ. ನಿನಗೆ ಮಲತಾಯಿಯನ್ನು ತರುವ ಯೋಚನೆ ನನಗೆ ಇಲ್ಲ" ಪುಣ್ಯಾ ಅವಕ್ಕಾದಳು.

"ಡ್ಯಾಡೀ... ನೀವು ಮತ್ತೆ ಮದುವೆ ಆಗ್ತೀರಾ?... ಈ ಐಡಿಯಾವನ್ನು ನಿಮಗೆ ಕೊಟ್ಟೋರು ಯಾರು?" ಈಗ ಅವನು ಗಲಿಬಿಲಿಗೊಂಡ.

"ಸುಮ್ಮನೇ ತಮಾಷೆ ಮಾಡಿದ ಬೇಬಿ. ನನಗೆ ಮದುವೆಯಾಗುವ ವಯಸ್ಸಾ? ಆಗ್ತೀನಿ ಅಂದ್ರೂ ಯಾರು ಹೆಣ್ಣು ಕೊಡ್ತಾರೆ? ನಾನು ಒಂಟಿಯಾಗಿ ರ್ತೀನಿ ಅನ್ನೋ ಚಿಂತೆ ನಿನಗಿದೆ ಅಂತ ನನಗೆ ಗೊತ್ತು..."

"ಹಾಗಾದ್ರೆ ಮೊದಲು ನಿಮ್ಮ ಮದುವೆ. ಆಮೇಲೆ ನೋಡೋಣ..."

"ಇಲ್ಲ. ಮೊದಲು ನಿನ್ನ ಮದುವೆ. ಆಮೇಲೆ ನೋಡೋಣ."

"ಹಾಗಾದ್ರೆ ಟಾಸ್, ಹಾಕೋಣ..." ಉತ್ಸಾಹದಿಂದ ಹೇಳಿದಳು.

"ಟಾಸೂ ಬೇಡ, ಏನೂ ಬೇಡ. ಊಟ ಮುಗಿಸಿ ಏಳು, ಹೊತ್ತಾಗಿದೆ. ನಾಳೆ ಬೆಳಿಗ್ಗೆ ಸ್ಕೂಲಿಗೆ ಹೋಗ್ಬೇಕಲ್ಲ"

"ಎಸ್. ನಾನು ಇಂದೂ ಹತ್ರ ಈ ನ್ಯೂಸ್ ಹೇಳ್ಲೇ ಬೇಕು. ಅವಳಿಗೆ ಬಹಳ ಖುಷಿಯಾಗುತ್ತೆ" ಅವನು ಇಂದಿರಾಳ ಬಗ್ಗೆ ಚಿಂತಿಸಿದ.

"ನಿನ್ನ ಐಡಿಯಾ ಕ್ಲಿಕ್ ಆಯ್ತು ಇಂದೂ, ಡ್ಯಾಡಿ ಮದುವೆ ಮಾಡ್ಕೋತೀನಿ ಅಂತ ಹೇಳಿದ್ರು. ಆದರೆ ಈಗ ಒಂಥರಾ ಬೇಸರವೂ ಆಗ್ತಿದೆ"

"ಇದೊಳ್ಳೆ ಚೆನ್ನಾಯ್ತಲ್ಲ. ನಿನ್ನ ಡ್ಯಾಡಿ ಒಂಟಿಯಾಗಿಯೂ ಇರ್ಬಾರ್ದು... ಅವರು ಮದುವೇನೂ ಮಾಡ್ಕೋಬಾರ್ದು ಅಂತಂದ್ರೆ ಹೇಗೆ?"

"ಮಮ್ಮಿಯ ಪ್ಲೇಸ್‌ಗೆ ಬರೋಳು ನಂಗೆ ಮಲತಾಯಿ ಆಗ್ತಾಳೆ. ತಾಯಿ ಆಗುಲ್ಲ. ಡ್ಯಾಡಿಯೂ ದೂರ ಆಗ್ಬಿಡ್ತಾರೆ"

"ಹಾಗೇನೂ ಆಗುಲ್ಲ ಪುಣ್ಯಾ... ನೀನು ಮದುವೆಯಾಗಿ ನಿನ್ನ ಗಂಡನ ಮನೆಗೆ ಹೋದ್ಮೇಲೆ, ಇದನ್ನೆಲ್ಲ ಯೋಚಿಸುಕ್ಕೆ ನಿಂಗೆ ಸಮಯ ಎಲ್ಲಿರುತ್ತೆ? ಆಗ ನಿಮ್ಮ ಡ್ಯಾಡಿಗೆ ಒಬ್ಬ ಸಂಗಾತಿ ಬೇಕು ಅಲ್ವಾ?"

"ಆ ಹೆಂಗಸು ಡ್ಯಾಡೀನ ಚೆನ್ನಾಗಿ ನೋಡ್ಕೋಬೇಕು ಅಂಥೋಳು ಬೇಕು. ಆ ಕೆಲಸ ನಿನ್ನದು ಇಂದಿರಾ... ಒಳ್ಳೇ ಹೆಂಗಸನ್ನು ಹುಡುಕಿ ಕೊಡ್ಬೇಕು"

"ನೋಡೋಣ... ಈ ಏಜ್‌ಗೆ ಸಿಗೋದು ನಿಧಾನ ಆಗುತ್ತೆ"

"ಏಜ್ ಆದ್ರೇನಂತೆ? ನಮ್ಮ ಡ್ಯಾಡೀನ ನೋಡಿದೀಯಲ್ಲ ಹೇಗಿದಾರೆ... ಫಿಲಂ ಹೀರೋ ಇದ್ದ ಹಾಗೆ ಇದಾರೆ. ಯಂಗ್ ಲುಕ್ ಇದೆ. ಶ್ರೀಮಂತಿಕೆ ಇದೆ. ಅದಕ್ಕೆ ತಕ್ಕ ಹಾಗೆ ಇರಬೇಡ್ವಾ?"

"ಹೌದು ಪುಣ್ಯಾ... ಪೇಪರ್ನಲ್ಲಿ ಹಾಕಿಸಿದ್ರೆ ಸರಿಯಾಗಿರುತ್ತೆ... ಅಲ್ವಾ?..."

"ನಾಳೇನೇ ಕೊಟ್ಬು ಬಿಡೋಣ. ಸೆಲೆಕ್ಷನ್‌ಗೆ ನೀನು ನಂಗೆ ಹೆಲ್ಪ್ ಮಾಡ್ಬೇಕಮ್ಮ"

"ನಿಮ್ಮ ಡ್ಯಾಡೀನ ಒಂದ್ಮಾತು ಕೇಳ್ಬೇಕು ಅಲ್ವಾ?"

"ಬೇಡ... ಸರ್ಪ್ರೈಸಿಂಗ್ ಆಗಿರಲಿ. ಎಲ್ಲಾ ಸೆಟ್ಲ ಆದ್ಮೇಲೇ ನಾನು ನನ್ನ ಮದುವೆ ವಿಷಯಾನ ಡ್ಯಾಡಿ ಹತ್ರ ಮಾತಾಡ್ತೀನಿ"

"ರೀಸೆಂಟ್ ಆಗಿ ನಿನ್ನ ಬಾಯ್‌ಫ್ರೆಂಡ್ ಹತ್ರ ಚಾಟ್ ಮಾಡಿದ್ಯಾ? ಈ ವಿಷಯಾನ ಅವನಿಗೆ ತಿಳಿಸ್ಬೇಕು ಅಲ್ವಾ?"

"ಅವನಿಗೇನು ತಿಳಿಸೋದು? ಇದು ನಮ್ಮ ಫ್ಯಾಮಿಲಿ ಮ್ಯಾಟರ್"

"ಅವನು ನಿನ್ನ ಗಂಡನಾಗೋನು. ಅವನಿಗೂ ನಿಮ್ಮ ಮನೆಯ ವಿಷಯಗಳನ್ನು ತಿಳಿದುಕೊಳ್ಳುವ ಆಸಕ್ತಿಯೂ ಇರುತ್ತೆ. ಅಧಿಕಾರವೂ ಇದೆ".

"ಪ್ಲೀಸ್ ಇಂದೂ. ಕಾಂಪ್ಲಿಕೇಟ್ ಮಾಡ್ಬೇಡ. ಟೆನ್ಷನ್ ಆಗುತ್ತೆ" ಇಂದಿರಾ ಅವಳ ತಲೆಯ ಮೇಲೆ ಕೈಯಾಡಿಸಿದಳು.

"ನಿಂದು ವಿಪರೀತ ಕಾಂಪ್ಲಿಕೇಟೆಡ್ ಮೈಂಡ್. ನಿನ್ನ ಗಂಡನಾಗೋನನ್ನ ದೇವರೇ ಕಾಪಾಡ್ಬೇಕು" ಇಬ್ಬರೂ ಹಗುರುವಾಗಿ ನಕ್ಕರು.

*****

ಪೇಪರ್‌ನಲ್ಲಿ ಪ್ರಕಟಣೆ ಬಂದ ಮೂರು ದಿನಗಳ ನಂತರ ಹತ್ತಾರು ಪತ್ರಗಳು ಬಂದವು. ಪುಣ್ಯಾ ಇಂದಿರಾಗೆ ಫೋನು ಮಾಡಿದಳು. ಇಬ್ಬರೂ ಕುಳಿತು ಪರಿಶೀಲಿಸಿದರು. ನಾಲ್ಕು ಫೋಟೋಗಳನ್ನು ಆರಿಸಿ ತೆಗೆದಿಟ್ಟುಕೊಂಡು, ಅವರಿಗೆ ಫೋನು ಮಾಡಿದರು. ಮಾತುಕತೆಯ ನಂತರ ಎರಡನ್ನು ಕೈಬಿಟ್ಟು ಎರಡನ್ನು ತೆಗೆದಿಟ್ಟುಕೊಂಡರು. ಇಬ್ಬರೂ ಒಟ್ಟಾಗಿ ಒಬ್ಬರ ಮನೆಗೆ ಬಂದರು. ತಮ್ಮ ಪರಿಚಯವನ್ನು ಹೇಳಿಕೊಂಡರು. ಅವರುಗಳು ಆಶ್ಚರ್ಯದಿಂದ ಕಣ್ಣರಳಿಸಿದರು. ವಯಸ್ಸಾಗಿದ್ದ ತಾಯಿ ಕೇಳಿಯೇ ಬಿಟ್ಟರು.

"ಮದುವೆಯ ವಯಸ್ಸಿಗೆ ಬಂದಿದೀಯ... ಈಗ್ಯಾಕೆ ನಿಮ್ಮ ತಂದೆಗೆ ಮದುವೆ?" ಪುಣ್ಯಾಳ ಮುಖ ಕೆಂಪಾಗಿತ್ತು. ಇಂದಿರಾಳೆ ಉತ್ತರಿಸಿದಳು.

"ಹಾಗಾದ್ರೆ ನಮ್ಮದೂ ಒಂದು ಕಂಡೀಷನ್ ಇದೆ. ನಿಮ್ಮ ತಂದೆಯ ಆಸ್ತಿಯೆಲ್ಲಾ ನನ್ನ ಮಗಳಿಗೇ ಸೇರಬೇಕು. ಮುಂದೆ ನೀನು ನಿನ್ನ ಗಂಡ ಸೇರಿ, ನನ್ನ ಮಗಳಿಗೆ ಮೋಸ ಮಾಡುಲ್ಲ ಅಂತ ಏನು ಗ್ಯಾರಂಟಿ?"

ಪುಣ್ಯ ಇಂದಿರಾಳನ್ನು ಎಬ್ಬಿಸಿ ಎದ್ದಳು. "ನಾನು ನನ್ನ ಒಬ್ಬರೇ ಡ್ಯಾಡಿಯನ್ನು ಮದುವೆಯಾಗೋರಿಗೆ ವಹಿಸಿಕೊಡಲು ಸಿದ್ಧಳಾಗಿದೀನಿ. ನನ್ನ ತ್ಯಾಗ ನಿಮಗೆ ಅರ್ಥ ಆಗುಲ್ಲ. ನನಗೆ ಆಸ್ತಿ ಮುಖ ಅಲ್ಲ, ಡ್ಯಾಡಿಯ ಒಂಟಿತನ ಹೋಗ್ಬೇಕು. ಈಗಲೇ ಇಷ್ಟು ಲೆಕ್ಕಾಚಾರ ಹಾಕೋರು, ನನ್ನ ಡ್ಯಾಡಿಗೆ ಯಾವ ನೆಮ್ಮದಿಯನ್ನು ಕೊಡಬಲ್ಲಿರಿ?... ಇಂದಿರಾ ನಡೀ... ಎಲ್ಲರೂ ಸ್ವಾರ್ಥಿಗಳೂ..." ಅವಳಿಗೆ ಏನನ್ನು ಹೇಳಲು ಅವಕಾಶ ಕೊಡದೇ ಎಳೆದುಕೊಂಡು ಹೊರಬಂದಳು. ಟ್ಯಾಕ್ಸಿಯಲ್ಲಿ ಕುಳಿತೊಡನೆ ಇಂದಿರಾಳ ಕೈ ಹಿಡಿದು ಅತ್ತಳು.

"ಹೊರಗಿನ ಪ್ರಪಂಚದ ಜನರು, ಇಂಥೋರು ಇರ್ತಾರೆ ಅಂತ ನಂಗೆ

ಗೊತ್ತಿರಲಿಲ್ಲ. ಮುಂದೆ ನನ್ನ ಗಂಡನ ಮನೆಯವರೂ ಹೀಗೇ ಸ್ವಾರ್ಥಿಗಳ ಥರ ಮಾತನಾಡಿದ್ರೆ ನಾನು ಹೇಗೇ ಇರಲಿ... ಭಯ ಆಗುತ್ತೆ ಕಣೇ..."

"ನೀನು ನಿನ್ನ ಬಾಯ್‌ಫ್ರೆಂಡ್‌ನ ಬ್ಯಾಕ್‌ಗ್ರೌಂಡ್ಸ್‌ನ್ನೆಲ್ಲಾ ತಿಳಿದು ಕೊಂಡಿದೀಯಾ?... ಮಾತಾಡಿದರೆ ಅವನ ನೇಚರ್ ಹೇಗಿದೆ ಅಂತ ಅನ್ನಿಸುತ್ತೆ?"

"ಸಾಫ್ಟ್ ಅಂಡ್ ಫ್ರೆಂಡ್ಲೀ ಅಂತ ಅನ್ನಿಸುತ್ತೆ. ಆದರೂ, ಈ ಸಾರಿ ಅವನು ಬಂದ ನಂತರ ಅವನ ಜೊತೆ ಓಡಾಡಿ, ಅವನ ನೇಚರ್ ಬಗ್ಗೆ ತಿಳಿದುಕೊಳ್ತೀನಿ. ಆಮೇಲೇ ಎಂಗೇಜ್‌ಮೆಂಟ್..."

"ಅದು ಸರಿ. ನಾನು ಅವತ್ತೇ ಹೇಳ್ದೆ... ನೀನು ಕಿವಿಗೊಡಲಿಲ್ಲ"

"ಸಾರಿ... ಇಂದೂ... ನನಗೆ ನಿನ್ನಂಥ ಗೈಡ್ ಬೇಕೇ ಬೇಕು... ನೀನೂ ಇಲ್ದೇ ಇದ್ದಿದ್ರೆ ನಾನು ಒಂಟಿಯಾಗಿ ಬಿಡ್ತಿದ್ದೆ. ಅದನ್ನು ಯೋಚಿಸಕ್ಕೂ ಭಯ ಆಗುತ್ತೆ..."

"ಅದಕ್ಕೇ, ದೇವರು ಹೀಗೆ ಹೀಗೇ ಅಂತ ನಿಯಾಮಕ ಮಾಡಿರುತ್ತಾನೆ"

"ನನ್ನ ಮದುವೆಯಾದ್ಮೇಲೆ ನೀನೂ ಮದುವೆಯಾಗಿ ಬಿಡು. ಒಂಟಿಯಾಗಿ ಮಾತ್ರ ಇರಬೇಡ... ನಂಗೆ ಮುಜುಗರ ಆಗುತ್ತೆ"

"ನಾನು ನಿನ್ನ ಹಾಗೆ ಸೆನ್ಸಿಟಿವ್ ಅಲ್ಲ. ಅಲ್ಲದೇ ಹೀಗೆಲ್ಲಾ ಯೋಚಿಸುಕ್ಕೆ ನಂಗೆ ಸಮಯವಿಲ್ಲ. ನೀನು ನಿನ್ನ ಗಂಡನ ಜೊತೆ ಹಾಯಾಗಿರು. ನನ್ನ ಬಗ್ಗೆ ಚಿಂತಿಸಬೇಡ"

"ಹೇಗೇ ಹಾಯಾಗಿರುಕ್ಕೆ ಆಗುತ್ತೆ? ನನಗೆ ಕ್ಲೋಸ್ ಅಂದ್ರೆ, ನನ್ನ ಡ್ಯಾಡಿ ಹಾಗೂ ನೀನು... ನಿನಗೂ ನನ್ನ ಮದುವೆ ಸೆಟ್ಲ್ ಆಗ್ತಿದ್ದ ಹಾಗೇ ಒಬ್ಬ ಹುಡುಗನನ್ನ ಹುಡುಕ್ತೀನಿ... ನೋಡ್ತಿರು. ನನ್ನ ಸೆಲೆಕ್ಷನ್ ಹೇಗಿರುತ್ತೆ ಅಂತ..."

"ಬೇಡ ಪುಣ್ಯಾ ನನ್ನ ಪಾಡಿಗೆ ನಾನು ಹಾಯಾಗಿದೀನಿ. ನೀನು ಸುಮ್ಮನಿರು. ನಿಂಗೆ ಪುಣ್ಯ ಬರುತ್ತೆ"

"ಇಂದೂ, ನಾನು ಪಾಪಿ ಕಣೇ... ಹೆಸರು ಮಾತ್ರ ಪುಣ್ಯಾ... ನನ್ನ ಮಮ್ಮಿ ಯಾಕೆ ಸಾಯಬೇಕಾಗಿತ್ತು? ಡ್ಯಾಡಿ ಒಂಟಿಯಾಗಿ ಇರೋದನ್ನ ನೋಡಿದ್ರೆ ಮನಸ್ಸಿಗೆ ಹಿಂಸೆ ಆಗುತ್ತೆ... ಆದರೆ ಅವರೆಂದೂ ಬೇಸರವನ್ನು ನನ್ನ ಮೇಲೆ ತೋರ್ಪಡಿಸಿಲ್ಲ. ಅದು ಅವರ ದೊಡ್ಡ ಗುಣ"

"ಹೌದು ಪುಣ್ಯ, ನಿನ್ನ ಡ್ಯಾಡಿ ತುಂಬಾ ಗ್ರೇಟ್. ನೀನು ಪುಣ್ಯವಂತೆ. ನಿನ್ನ ಬಗ್ಗೆ ಅಸೂಯೆ ಆಗುತ್ತೆ..." ಪುಣ್ಯ ಇಂದಿರಾಳ ಕೆನ್ನೆ ಚಿವುಟಿದಳು.

*****

"ಎಲ್ಲಮ್ಮ ಹೋಗಿದ್ದೆ ಬೇಬಿ? ಹುಡುಗನ ತಾಯಿ ಫೋನು ಮಾಡಿದ್ರು. ನಿನ್ನ ನಿರ್ಧಾರ ಇನ್ನು ತಿಳಿಸೇ ಇಲ್ಲ ನೀನು..."

"ನನಗೆ ಒಪ್ಪಿಗೆ ಇಲ್ಲ ಅಂತ ಹೇಳಿಬಿಡಿ ಡ್ಯಾಡೀ..."

"ನನಗೆ ಅವಮಾನ ಮಾಡ್ತಿದೀಯ ನೀನು..."

"ನನ್ನದೂ ಒಂದು ಆಸೆ ಇದೆ ಅಲ್ವಾ ಡ್ಯಾಡಿ..."

"ನಿನ್ನ ಆಸೆಗೆ ಒಂದು ಅರ್ಥ ಇಲ್ಲ. ನೀವಾದ್ರೂ ಹೇಳಿ ಇಂದಿರಾ... ಹುಡುಗನ ಮನೆಯವರು ತುದಿಗಾಲಲ್ಲಿ ನಿಂತಿದಾರೆ..."

"ನಾನೇನು ಹೇಳಲಿ?..." ಇಂದಿರಾ ತೊದಲಿದಳು. ಪುಣ್ಯ ಅವಳ ಬೆನ್ನು ತಿವಿದು ಸಂಜ್ಞೆ ಮಾಡಿದಳು. ಮೊದಲು ನಿಮ್ಮ ಮದುವೆಯಾಗಲಿ ಅಂತ ಅವಳ ಆಸೆ... ಅಲ್ವೇನೇ?" ಪುಣ್ಯ ಕಸಿವಿಸಿಯಿಂದ ನೋಡಿದಳು.

"ನನ್ನ ಮದುವೆಗೇನು ಆತುರ? ಅಲ್ಲದೇ ನಾನಿನ್ನು ಸೀರಿಯಸ್ ಆಗಿ ಯೋಚಿಸಿಲ್ಲ"

"ನೀವು ಸೆಟ್ಲ್ ಆದದ್ದನ್ನು ನೋಡಿದ ಮೇಲೇ ಅವಳು ಮದುವೆ ಯಾಗ್ತಾಳಂತೆ..."

"ಬೇಬಿ ಹೀಗೆಲ್ಲಾ ಹಠ ಮಾಡ್ಬೇಡ... ತಕ್ಷಣಕ್ಕೆ ನಾನು ಮದುವೆ ಆಗಲು ಸಾಧ್ಯವಿಲ್ಲ. ಅಲ್ಲದೇ ಅವರುಗಳು ಏನಂದುಕೊಳ್ತಾರೆ?"

"ಹಠ ಅಲ್ಲ ಡ್ಯಾಡೀ ರಿಕ್ವೆಸ್ಟ್... ನಾವು ನಿಮಗೆ ಅಂತ ಹೆಣ್ಣುಗಳನ್ನು ನೋಡಿದೀವಿ... ಫೋಟೋ ತೋರಿಸ್ಲಾ?"

"ಬೇಬಿ! ಇದೇನು ಅಧಿಕ ಪ್ರಸಂಗಿತನ? ಅಲ್ಲಾರೀ ಇಂದಿರಾ... ನೀವೂ ಇವಳ ಜೊತೆ ಸೇರ್ಕೊಂಡಿದೀರಾ?... ನಾನು ನೀವು ತಿಳುವಳಿಕಸ್ಥೆ ಅಂತ ಅಂದ್ಕೊಂಡಿದ್ದೆ"

"ಅವಳನ್ನು ಏನೂ ಅನ್ಬೇಡಿ ಡ್ಯಾಡೀ... ಅವಳಿಗೆ ಅವಮಾನ ಆಗುತ್ತೆ. ಇದೆಲ್ಲಾ ನನ್ನ ಪ್ಲಾನು... ನಾನೇ, ಸೀಕ್ರೆಟ್ ಆಗಿರಲಿ ಅಂತ ಅಂದೆ... ಇಲ್ಲದಿದ್ರೆ... ನಿಮಗೆ ಖಂಡಿತಾ ಹೇಳಿರುತ್ತಿದ್ಲು..."

"ಓ...ಕೇ... ಇನ್ಮುಂದೆ ನನಗೆ ತಿಳಿಸದೇ ಇಂಥದ್ದೆಲ್ಲಾ ಮಾಡ್ಬೇಡ. ನಂಗೆ ಇಷ್ಟವಾಗುಲ್ಲ. ನಾನೀಗ ಹೊರಗೆ ಹೋಗ್ತಾ ಇದೀನಿ. ಬರೋದು ಹೊತ್ತಾಗುತ್ತೆ. ಅಡಿಗೆಯವರಿಗೆ ಹೇಳಿ ಬಿಡು"

"ಡ್ಯಾಡೀ... ಇವಳನ್ನು ಡ್ರಾಪ್ ಮಾಡಿ ಬಿಡಿ... ಅವಳಿಗೆ ಸಂಕೋಚ. ಅವಳು ಕೇಳುಲ್ಲ"

"ಇನ್ನು ಸ್ವಲ್ಪ ಹೊತ್ತು ಇರ್ತಾರೇನೋ ಅಂತ ಅಂದ್ಕೊಂಡೆ. ಬರ್ತೀರಾ?" ಪುಣ್ಯಾ, ಇಂದಿರಾಳ ಕಿವಿಯಲ್ಲಿ ಏನನ್ನೋ ಪಿಸುಗುಟ್ಟಿದಳು.

*****

"ಸಾರೀ... ನನ್ನಿಂದ ಬೇಸರವಾಗಿದ್ರೆ ಕ್ಷಮಿಸಿ..."

"ಸಾರೀ ಯಾಕೇ ಬಿಡಿ ಪರವಾಗಿಲ್ಲ... ಬೇಬಿಯ ಮನಸ್ನಲ್ಲಿ ಏನಿದೆ ಅಂತ ನಂಗಂತೂ ಅರ್ಥವಾಗುಲ್ಲ... ವೆರಿ ಚೈಲ್ಡಿಷ್..." ಸಪ್ಪಗೆ ನಗುತ್ತಾ ನುಡಿದ.

"ಆದರೆ ಅವಳು ಹೇಳುದರಲ್ಲಿ ತಪ್ಪಿಲ್ಲ ಅಲ್ವಾ?"

"ಇದೇ ನೋಡಿ ನಂಗೆ ಇಷ್ಟವಾಗುಲ್ಲ. ಅವಳ ಸ್ನೇಹಿತೆ ಆದ ಮಾತ್ರಕ್ಕೆ ಅವಳ ಮಾತೆಲ್ಲಾ ಸರಿ ಅನ್ನೋದು ತಪ್ಪು... ಅದನ್ನು ಪ್ರೋತ್ಸಾಹಿಸಬಾರದು..."

"ನಾನು ನಿಮಗೆ ಒಂದು ವಿಷಯ ಹೇಳ್ಬೇಕು... ಈಗ ಸಮಯ ಇದೆಯಾ?"

"ಕಾಲು ಗಂಟೆ ಅಡ್ಜಸ್ಟ್ ಮಾಡಬಹುದು. ಏನು ವಿಷಯ ಹೇಳಿ... ಅವನು ಕಾರನ್ನು ನಿಲ್ಲಿಸಿ, ಅವಳ ಕಡೆಗೆ ತಿರುಗಿದ.

"ನಿಮ್ಮ ಮಗಳು ಒಬ್ಬನನ್ನು ಪ್ರೀತಿಸ್ತಾ ಇದಾಳೆ..."

"ವ್ಹಾಟ್! ಬೇಬಿ ಯಾರನ್ನೋ ಲವ್ ಮಾಡ್ತಿದಾಳಾ? ಇಂಪಾಸಿಬಲ್..."

"ಅವಳು ಬೇಬಿ ಅಲ್ಲ... ಬೆಳೆದು ನಿಂತಿರುವ ಯುವತಿ... ಅವಳಿಗೆ ಸ್ವಂತವಾದ ಆಸೆಗಳಿವೆ. ನೆರವೇರುತ್ತದೆಂಬ ಭರವಸೆ ಇದೆ..."

"ಯಾರವನು? ಏನು ಮಾಡ್ತಿದಾನೆ? ನೀವು ನೋಡಿದೀರಾ?"

"ಹುಂ... ಅವನು ನನಗೆ ಚೆನ್ನಾಗಿ ಗೊತ್ತು... ನೋಡಿದೀನಿ... ಅವನು ನನ್ನ ಅಣ್ಣ..."

"ಆಂ... ಇದೆಲ್ಲಾ ಏನು? ನನಗೆ ತಿಳಿಯದ ಹಾಗೆ ನನ್ನ ಹಿಂದೆ... ನಿಮ್ಮ ಅಣ್ಣಂಗೂ ಇವಳಿಗೂ ಹೇಗೆ ಸ್ನೇಹ? ನಿಮ್ಮ ಮನೆಗೆ ಬರ್ತಾ ಇರ್ತಾಳಾ?"

"ಇಲ್ಲ, ರಮೇಶ್... ಎಕ್ಸೈಟ್ ಆಗ್ಬೇಡಿ. ನಮ್ಮಣ್ಣ ಇಲ್ಲಿಲ್ಲ. ಅಮೆರಿಕಾದಲ್ಲಿ ಸಾಫ್ಟ್‌ವೇರ್ ಇಂಜಿನಿಯರ್ ಆಗಿದಾನೆ. ಐದಾರು ವರ್ಷಗಳಿಂದ ಅಲ್ಲೇ ಇದಾನೆ. ಇಂಟರ್‌ನೆಟ್ ಮುಖಾಂತರ ಸ್ನೇಹಿತರಾಗಿದಾರೆ. ಒಬ್ಬರನ್ನೊಬ್ಬರು ಮೆಚ್ಚಿದಾರೆ ಮದುವೆ ಮಾಡ್ಕೋಬೇಕು ಅಂತ ನಿರ್ಧರಿಸಿದಾರೆ"

"ಇದನ್ನೆಲ್ಲಾ ಈ ಮೊದಲೇ ನೀವ್ಯಾಕೆ ನಂಗೆ ಹೇಳ್ಲಿಲ್ಲ?"

"ನಂಗೆ ತಿಳಿದದ್ದೇ ಈಚೆಗೆ. ಪುಣ್ಯಂಗೆ ಹುಶಾರಿಲ್ಲದೇ ಇದ್ದಾಗ... ಆದರೆ ನಾನು ಅವನ ತಂಗಿ ಅಂತ ಪುಣ್ಯಂಗೆ ಗೊತ್ತಿಲ್ಲ"

"ಮತ್ತೆ ಮೋಸ! ಯಾಕ್ರೀ ಹೆಂಗಸ್ರು ಹೀಗೆ ಮೋಸ ಮಾಡ್ತೀರಿ?"

"ನಾನು ಯಾರ್ಗೆ ಮೋಸ ಮಾಡ್ದೆ?... ಈ ವಿಷಯದ ಬಗ್ಗೆ ನನಗೆ ಏನೂ ಗೊತ್ತಿರಲಿಲ್ಲ. ನನ್ನನ್ನು ನಂಬಿ..."

"ಛೆ... ಎಂಥಾ ಕೆಲಸ ಮಾಡಿದ್ರಿ? ಈ ಹುಡುಗನ ಮನೆಯೋರ್ಗೆ ನಾನು

ಮಾತು ಕೊಟ್ಟಿದ್ದೆ. ಈಗ ನಾನು ಅವರ ಹತ್ರ ಹೇಗೆ ಮಾತಾಡ್ಲೀ?... ಈಗ್ಲಾದ್ರೂ ನಿಜ ಹೇಳಿ, ಪುಣ್ಯನ್ನ ಈ ಮದುವೆಗೆ ಒಪ್ಪಿಸಿ, ಅವನ್ಯಾರೋ, ನಿಮ್ಮ ತಮ್ಮ ಆದ್ರೇನಂತೆ... ಕಂಡಿಲ್ಲ... ಕೇಳಿಲ್ಲ... ಇಂಟರ್‌ನೆಟ್‌ನಲ್ಲಿ ಪ್ರೀತಿ ಅಂದ್ರೆ ಏನರ್ಥ...?"

"ನಾನು ಹೇಗೆ ಬೇಡ ಅನ್ನಲಿ ರಮೇಶ್... ಪುಣ್ಯಾ ನನ್ನ ಅತ್ತಿಗೆಯಾಗಿ ಬರುವುದು ನನಗೂ ಸಮ್ಮತವೇ... ನೀವೂ ಒಪ್ಕೊಳ್ಳಿ... ಅವಳ ಮನಸ್ಸನ್ನು ನೋಯಿಸಬೇಡಿ. ತಾಯಿಯಿಲ್ಲದ ಹುಡುಗಿ, ಸ್ವಲ್ಪ ದುಡುಕು... ನನ್ನ ಅಣ್ಣ ಒಳ್ಳೆಯವನು. ನಾನು ಹೇಳಿದ ಮೇಲೂ ನಿಮಗೆ ನಂಬಿಕೆ ಇಲ್ವಾ?"

"ನಂಬಿಕೆ ಪ್ರಶ್ನೆ ಅಲ್ಲ ಇಂದಿರಾ... ಮರ್ಯಾದೆಯ ಪ್ರಶ್ನೆ... ಗಂಡಿನವರಿಗೆ ನಾನು ಏನು ಹೇಳಲಿ?... ಲಗ್ನಪತ್ರಿಕೆ ಶಾಸ್ತ್ರ ಯಾವಾಗ ಇಟ್ಕೋತೀರಿ ಅಂತಿದಾರೆ"

"ಲಗ್ನ ಪತ್ರಿಕೆಯಾಗಿ, ಮಂಟಪದಲ್ಲಿ ಮದುವೆ ನಿಂತ ಉದಾಹರಣೆಗಳಿವೆ. ಇದಕ್ಯಾಕೆ ಹೆದರ್ತೀರಿ?... ತಂದೆಯಾಗಿ ನೀವೇ ಹೀಗಾಡ್ತೀರಲ್ಲ..."

"ಸುಮ್ನಿರಿ ಇಂದಿರಾ... ನೀವು ಹೇಳೂವಷ್ಟು ಸುಲಭವಲ್ಲ..."

"ಸುಲಭ ಅಂತಂದ್ಕೊಂಡ್ರೆ ಸುಲಭ, ಇಲ್ದಿದ್ರೆ ಇಲ್ಲ. ನಿಮಗೆ ಏನೂ ಅಭ್ಯಂತರವಿಲ್ದಿದ್ರೆ ನಾನು ಅವರ ಹತ್ರ ಮಾತಾಡ್ತೀನಿ..."

"ಏನು? ನೀವು ಅವರ ಹತ್ರ ಮಾತಾಡ್ತೀರಾ? ನಮ್ಮ ಮನೆಯ ವಿಷಯವನ್ನು ಅವರೊಂದಿಗೆ ಮಾತನಾಡಲು ನಿಮಗೆ ಯಾವ ಹಕ್ಕೂ ಇಲ್ಲ" ಎಂದು ಬಿಟ್ಟ, ಅವಳು ಪೆಚ್ಚಾದಳು. ಮರುಕ್ಷಣವೇ "ಸಾರೀ... ನಿಮ್ಮ ಹತ್ರ ಹೀಗೆಲ್ಲಾ ಮಾತನಾಡುಕ್ಕೆ ನನಗೆ ಯಾವ ಅಧಿಕಾರವೂ ಇಲ್ಲ... ವೆರಿ ಸಾರೀ..." ಎಂದ. ಅವನು ಮತ್ತೆ ಸ್ಟಾರ್ಟ್ ಮಾಡುವ ಮುನ್ನ ಅವಳು ಮಾತನಾಡಿದಳು.

"ನನಗೆ ಆ ಅಧಿಕಾರ, ಹಕ್ಕೂ ಎಲ್ಲವನ್ನು ಕೊಡ್ತೀರಾ ರಮೇಶ್..."

"ಅಂದ್ರೇ..."

"ನನಗೆ... ನನಗೆ ನಿಮ್ಮನ್ನು ಮದುವೆಯಾಗುವ ಮನಸ್ಸಿದೆ... ನಿಮಗೆ ಒಪ್ಪಿಗೆಯಾದರೆ ನಾವಿಬ್ರೂ ಮದುವೆಯಾಗೋಣ" ಅವನು ಮತ್ತೆ ಕಾರನ್ನು ನಿಲ್ಲಿಸಿದ.

"ಆಂ...! ಏನು ಹೇಳ್ತಿದೀರಿ ಅಂತ ನಿಮಗೆ ಗೊತ್ತಾ?"

"ಹೂಂ, ಗೊತ್ತು ಸರಿಯಾಗಿ ಯೋಚಿಸ್ಬಿಟ್ಟೇ ಹೇಳ್ತಿದೀನಿ. ನಾನು ಪುಣ್ಯಳಿಗೆ ಚಿಕ್ಕಮ್ಮನಾಗಿ ಬರ್ತೀನಿ"

"ಇದೆಲ್ಲಾ ಏನು ಬೊಂಬೆಯಾಟ ಅಂತ ಅಂದ್ಕೊಂಡಿದೀರಾ?... ಇದು ಸಾಧ್ಯವಿಲ್ಲ"

"ಯಾಕೆ ಸಾಧ್ಯವಿಲ್ಲ? ನನ್ನ ಒಪ್ಪಿಗೆ ಇರುವಾಗ ನಿಮಗೇನು ತೊಂದರೆ?"

"ತೊಂದರೆ ಇದೆ, ಬೇಕಾದಷ್ಟಿದೆ. ನಾನು ನಿಮಗೆ ಸಮನಲ್ಲ. ಮಧ್ಯ ವಯಸ್ಸಿನವನು... ನಾನು ನಿಮ್ಮ ಎರಡರಷ್ಟು ವಯಸ್ಸಿನವನು. "

"ನನಗೆ ಅದು ಮುಖ್ಯವಲ್ಲ... ನನಗೆ ನಿಮ್ಮ ಸ್ನೇಹಬೇಕು... ಅಷ್ಟೇ..."

"ಸ್ನೇಹದ ಬಗ್ಗೆ ನಿಮಗೇನು ಗೊತ್ತಿದೆ. ನನ್ನ ನಿಮ್ಮ ಸ್ನೇಹ ಇತ್ತೀಚೆಗಷ್ಟೇ ಆದದ್ದು... ನನ್ನ ಮಗಳ ಸ್ನೇಹಿತೆ ಅಂತ, ನಾನೂ ಸ್ನೇಹದಿಂದ ಮಾತಾಡಿದೆ, ಗೌರವಿಸಿದೆ. ನೀವು ಅದನ್ನೇ ತಪ್ಪಾಗಿ ಭಾವಿಸಿರುವಂತಿದೆ. ದುಡುಕಬೇಡಿ... ಈ ಮಾತನ್ನು ಬೇರೆಯವರ ಎದುರಿಗೆ ಆಡಬೇಡಿ ನಗ್ತಾರೆ..."

"ಯಾರೇಕೆ ನಗ್ತಾರೆ? ಇದು ನಮ್ಮ ವೈಯಕ್ತಿಕ ವಿಚಾರ... ಇರಲಿ, ನಿಮಗೆ ನಾನು ಯಾವ ರೀತಿಯಿಂದಲೂ ಒಪ್ಪಿಗೆ ಇಲ್ಲದೇ ಇದ್ದರೆ ಬೇಡ ಬಿಡಿ, ಬಲವಂತವಿಲ್ಲ" ನಿಮ್ಮ ಮಗಳು ನಾಲ್ಕಾರು ಹೆಣ್ಣುಗಳನ್ನು ನೋಡಿದ್ದಾಳೆ. ಅವರಲ್ಲಿ ಒಬ್ಬರನ್ನು ಆಯ್ಕೆ ಮಾಡಿ, ನಿಮ್ಮ ಮಗಳಿಗೂ ಇಷ್ಟವಾಗುತ್ತದೆ"

"ನನಗೆ ಮದುವೆಯಾಗುವ ಮನಸ್ಸೂ ಇಲ್ಲ, ವಯಸ್ಸೂ ಅಲ್ಲ. ಈಗ ಈ ಪ್ರಸ್ತಾಪವೇಕೋ ನನಗೆ ಗೊತ್ತಾಗ್ತಿಲ್ಲ"

"ನೀವು ಒಂಟಿಯಾಗಿ ಬಿಡ್ತೀರ ಅಂತ ಅವಳ ಚಿಂತೆ"

"ವಯಸ್ಸಾದ ಮೇಲೆ ಒಂಟಿ ಜೀವನವೇ. ಒಂದು ವೇಳೆ ನನ್ನ ಹೆಂಡತಿ ಬದುಕಿದ್ದು ನಾನೇ ಇಲ್ಲವಾಗಿದ್ದರೇ...?"

"ನಾನೂ, ಪುಣ್ಯಾ ಇಬ್ಬರೂ, ಅವರಿಗೂ ಒತ್ತಾಯ ಮಾಡಿ ಮದುವೆ ಯನ್ನು ಮಾಡುತ್ತಿದ್ದೆವು..."

"ಇಲ್ಲ... ಅವಳು ಒಪ್ಪುತ್ತಿರಲಿಲ್ಲ, ಒಂಟಿಯಾಗಿಯೇ ಇರುತ್ತಿದ್ದಳು..."

"ಸರಿ ಬಿಡಿ... ನಿಮಗೂ ಒಂಟಿಯಾಗಿಯೇ ಇರಬೇಕೆಂಬ ಇರಾದೆ ಇರುವಂತಿದೆ. ಪುಣ್ಯಾಳೂ ಮದುವೆಯಾಗದೇ ಹಾಗೇ ಉಳಿಯಬಹುದು. ಅವಳು ಜೀವಮಾನವೆಲ್ಲಾ ನಿಮ್ಮ ಹಾಗೇ ಒಂಟಿಯಾಗಿದ್ದು ಬಿಡ್ತಾಳೆ ಅಷ್ಟೇ..."

"ಈಗಾಗ್ಲೇ ಒಬ್ಬ ಬಾಯ್‌ಫ್ರೆಂಡ್‌ನ ಹುಡುಕಿಕೊಂಡಿದಾಳಲ್ಲ..."

"ಅವಳೂ ಮನಸ್ಸನ್ನು ಬದಲಾಯಿಸಬಹುದು..."

"ಹಾಗಾಗಬಾರ್ದು... ನನಗೆ ಬೇಬಿ ಒಬ್ಬಳೇ ಮಗಳು. ಅವಳು ನೀರಸವಾದ ಬದುಕನ್ನು ಬದುಕಬಾರದು..."

"ನಿಮ್ಮ ಬೇಬಿಗೂ ನೀವೊಬ್ರೇ ಡ್ಯಾಡಿ... ಅವಳೂ ನಿಮ್ಮ ಒಳಿತನ್ನೇ ಯೋಚಿಸ್ತಾಳೆ, ಅದು ತಪ್ಪಲ್ಲವಲ್ಲ?"

"ಅಂತೂ, ಒಂದು ಪ್ರಶ್ನೆಗೆ ಒಂದು ಉತ್ತರವನ್ನು ಸಿದ್ಧವಾಗಿಟ್ಟು ಕೊಂಡಿದೀರಿ. ಯಾವಾಗ್ನಿಂದ ಈ ವಿಷಯ ನಿಮ್ಮ ತಲೆಗೆ ಹೊಕ್ಕಿತು?"

ಅವನು ನಕ್ಕು ನುಡಿದಾಗ ಅವಳು ನಿರಾಳವಾದಳು.

"ಯಾವಾಗ ಅಂತ ನಿರ್ಧಿಷ್ಟವಾಗಿ ಹೇಳ್ಲಾರೆ... ನಿಮ್ಮ ಬಗ್ಗೆ ಯೋಚಿಸ್ತಾ ಯೋಚಿಸ್ತಾ ತಟಕ್ಕನೆ ಅನ್ನಿಸಿದ್ದು"

"ನೀವು ತಪ್ಪು ಮಾಡ್ತಿದೀರಿ ಇಂದಿರಾ... ಇದನ್ನು ನಿಮ್ಮ ಪೇರೆಂಟ್ಸ್ ಒಪ್ಪುಲ್ಲ"

"ಅವರನ್ನು ನಾನು ಒಪ್ಪಿಸ್ತೀನಿ. ನಿಮಗೆ ಒಪ್ಪಿಗೆ ಅಂತಾಯ್ತು..."

"ಈ ವಿಷಯವನ್ನು ಬೇಬಿಗೆ ಈಗ್ಲೇ ಹೇಳ್ಬೇಡಿ. ಸರ್ಪ್ರೈಸ್ ಆಗಿರಲಿ. ನಾವೂ ಅವಳನ್ನು ಸತಾಯಿಸೋಣ. ನಿಮ್ಮ ಬ್ರದರ್ ಯಾವಾಗ ಬರ್ತಿದಾರೆ...?"

"ಮುಂದಿನ ತಿಂಗಳು ಬರ್ತಿದಾನೆ. ಅವನೂ ಈ ಪ್ರೀತಿಯ ಬಗ್ಗೆ ಮನೆಯಲ್ಲಿ ಯಾರಿಗೂ ಹೇಳಿಲ್ಲ. ಬಂದ ಮೇಲೆ ಹೇಳಬಹುದು"

"ಕಾಲ ಎಷ್ಟು ಬದಲಾಗಿದೆ... ಅವರವರೇ ಅವರವರ ಸಂಗಾತಿಗಳನ್ನು ಯಾವ ಸುಳಿವೂ ಕೊಡದೇ ಆಯ್ಕೆ ಮಾಡಿಕೊಳ್ತಾರೆ..."

"ನನ್ನ ಹಾಗೆ... ಹೋಗಲಿ ನನ್ನ ಬಗ್ಗೆ ಹೇಳಿ, ನಿಮಗೇನನ್ನಿಸುತ್ತೆ?"

"ನಾನು ನಿಮ್ಮನ್ನು ಸರಿಯಾಗಿ ನೋಡಿಯೇ ಇಲ್ಲ... ಪುಣ್ಯಳ ಫ್ರೆಂಡ್ ಅಂತ ಅಷ್ಟೇ ಗೊತ್ತು..."

"ನನ್ನ ಬಗ್ಗೆ ಕೇಳಿ, ನಾನು ಹೇಳ್ತೀನಿ. ನಿಮ್ಮ ಬಗ್ಗೆ ಹೇಳಿ, ನಾನು ಕೇಳಿ ಕೋಳ್ತೀನಿ... ಸಾರಿ. ನನ್ನಿಂದ ನಿಮಗೆ ಹೊತ್ತಾಯ್ತು..."

"ಇರಲಿ... ಇವತ್ತಿನ ಪ್ರೋಗ್ರಾಂ ಕ್ಯಾನ್ಸಲ್. ಈಗ ಎಲ್ಲಿಯಾದ್ರೂ ಸುತ್ತಾಡಿ ಬರೋಣ ಬರ್ತೀರಾ?"

"ನೀವು ಕರ್ಕೊಂಡು ಹೋಗೋದಾದ್ರೆ ಬರ್ತೀನಿ... ಆದರೆ ಬೇಬಿಗೆ ಮಾತ್ರ ಅನುಮಾನ ಬರಬಾರದು"

"ಯೂ ಆರ್ ರೈಟ್" ಎನ್ನುತ್ತಾ ಅವನು ಕಾರನ್ನು ಓಡಿಸಿದ.

*****

"ಇಂದೂ, ಯಾಕೇ ಒಂಥರಾ ಇದೀಯ? ಈ ನಡುವೆ ನೀವು ತುಂಬಾ ಬದಲಾಗಿದೀಯ ಅಂತ ಅನ್ನಿಸ್ತಿದೆ. ಡ್ಯಾಡೀನೂ ಹೆಚ್ಚು ಮಾತಾಡುಲ್ಲ, ಸಿಟ್ಟಾಗಿದಾರೆ"

"ಸಿಟ್ಟು ಬರದೇ ಇರುತ್ತಾ? ನೀನು ಅವರು ಗೊತ್ತು ಮಾಡಿದ ಹುಡುಗನ್ನ ರಿಜೆಕ್ಟ್ ಮಾಡಿದೀಯಲ್ಲ... ನಿನ್ನ ವರ ಮಹಾಶಯ ಯಾವಾಗ ಬರ್ತಿದಾನೆ...? ಏನಂತಾನೆ?"

"ಮುಂದಿನವಾರ ಬರ್ತಿದಾನೆ... ಏನಂತಾನೋ ಅಂತ ಗಾಬರಿಯಾಗ್ತಿದೆ"

"ಗಾಬರಿ ಮಾಡ್ಕೋ ಬೇಡ... ನಾನಿದೀನಿ..."

"ಡ್ಯಾಡಿ ಒಪ್ಪದೇ ಇದ್ರೆ...?"

"ಈಗ ಆ ಡೌಟಾ? ನಾನು ಒಪ್ಪಿಸ್ತೀನಿ..."

"ಡ್ಯಾಡಿ ಒರಟಾಗಿ ಮಾತಾಡಿದ್ರೆ ನೀನು ಬೇಸರ ಮಾಡ್ಕೋ ಬಾರ್ದು..."

"ಇಲ್ಲ..."

"ಇಂದೂ, ಯಾಕೇ ಇಷ್ಟು ಕೂಲ್ ಆಗಿದೀಯ... ನೀನೂ ನಂಗೆ ಕೈಕೊಡ್ತಿದೀಯ ಅಂತ ಅನ್ನಿಸ್ತಿದೆ"

"ಹಾಗೇನಿಲ್ಲ... ನಿನ್ನ ಫ್ರೆಂಡ್, ಅಂದ್ಹಾಗೇ ಅವನ ಹೆಸರು... ಹರೀಶ ಅಂತ ಅಲ್ವಾ?"

"ಅರೇ... ಅವನ ಹೆಸರು ನಿನಗೆ ಹೇಗೇ ಗೊತ್ತಾಯ್ತು?"

"ನೀನೇ ಹೇಳಿದ್ಯಲ್ಲ..."

"ನಾನೇ ಹೇಳಿದ್ನಾ?... ನಂಗೆ ನೆನಪೇ ಇಲ್ಲ..."

"ಮರೆತಿದೀಯ ಅಂತ ಕಾಣುತ್ತೆ. ಏರ್‌ಪೋರ್ಟ್‌ಗೆ ಹೋಗಿ ಅವನನ್ನು ರಿಸೀವ್ ಮಾಡೋಣ... ನಿಮ್ಮ ಡ್ಯಾಡೀನೂ ಒಪ್ಪಿಸ್ತೀನಿ..."

"ಬೇಡ... ಮೊದಲು ಅವನು ಊರಿಗೆ ಬರಲಿ... ಅವನೇ ನಮ್ಮ ಮನೆಗೆ ಬರಲಿ... ಅಷ್ಟರೊಳಗೆ ಡ್ಯಾಡಿಯ ಹತ್ರ ಮಾತಾಡಿರೋಣ"

"ಹೊಸಾ ಥರ ಇರಲಿ ಪುಣ್ಯಾ... ಡ್ಯಾಡಿಗೆ ತಿಳಿಯದಂತೆ, ನೀನೇ ನಿನ್ನ ಗಂಡನನ್ನು ಆಯ್ಕೆ ಮಾಡಿಕೊಂಡಿದೀಯ. ಹರೀಶನ್ನ ನಾವು ರಿಸೀವ್ ಮಾಡೋಣ. ಅವನಿಗೂ ಖುಷಿಯಾಗುತ್ತೆ... ನಿನ್ನ ವುಡ್‌ಬೀಯನ್ನು ನೋಡಿ ಮಾತನಾಡಿಸುವ ಆಸೆ ನನಗೂ ಇದೆ..."

"ಇನ್ನು ಏನೇನು ಆಸೆ ಇದೆ?... ಆಂ..."

"ಗಾಬರಿ ಪಡಬೇಡ... ಅವನು ನಿನ್ನನ್ನು ಬಿಟ್ಟು ನನಗೆ ಪ್ರಪೋಸ್ ಅಂತೂ ಮಾಡುಲ್ಲ. ಅದು ಗ್ಯಾರಂಟೀ... ಅವನು ಪ್ರೀತಿಸುತ್ತಿರುವುದು ನಿನ್ನನ್ನ. ನೀನು ಅನುಮಾನ ಪಡುವುದು ಸರಿಯಲ್ಲ"

"ಸಾರಿ... ನಾನು ಆ ಅರ್ಥದಲ್ಲಿ ಹೇಳಲಿಲ್ಲ... ನೀನ್ಯಾಕೆ ಇಷ್ಟು ಆಸಕ್ತಿ ತೋರಿಸ್ತಿದೀಯ ಅಂತ ಅನ್ನಿಸ್ತು..."

"ನೀನೇ ನನಗೆ ಈ ಕೆಲಸವನ್ನು ಹಚ್ಚಿದವಳು ಮರೆತುಬಿಟ್ಯಾ?"

"ಇಲ್ಲ... ಮರೆತಿಲ್ಲ, ಮತ್ತೆ ಡ್ಯಾಡಿಯ ಮದುವೆ ವಿಷಯ...?"

"ಅದನ್ನು ನನಗೆ ಬಿಡು..." ಪುಣ್ಯಳ ಕೆನ್ನೆಯನ್ನು ಸವರಿದಳು. ಬಾಲ್ಕನಿಯ ಕಂಬದ ಮರೆಯಲ್ಲಿ ಕುಳಿತು ಅವರಿಬ್ಬರ ಸಂಭಾಷಣೆಗಳನ್ನು ಆಲಿಸುತ್ತಿದ್ದ ರಮೇಶ ತನ್ನಲ್ಲೇ ನಕ್ಕೊಂಡ. ಇಂದಿರಾಳ ಕಡೆ ಕದ್ದು ಕದ್ದು ನೋಡಿದ.

*****

ಏರ್‌ಪೋರ್ಟ್‌ಗೆ ಹೋಗುವ ಸಮಯ ಬಂದಿತ್ತು. ರಮೇಶ ಹೆಚ್ಚಿನ ಗಾಂಭೀರ್ಯವನ್ನು ನಟಿಸಿದ್ದ. ಪುಣ್ಯ ಆತಂಕದಿಂದ ಅಲಂಕರಿಸಿಕೊಂಡಳು. ಇಂದಿರಾ ಸಮಯಕ್ಕೆ ಸರಿಯಾಗಿ ಬಂದಳು. ಮೂವರೂ ಏರ್‌ಪೋರ್ಟ್‌ಗೆ ಹೊರಟರು. ಪುಣ್ಯ ಆತಂಕದಿಂದ ಆಗಾಗ್ಗೆ ಡ್ಯಾಡಿಯ ಕಡೆ ನೋಡುತ್ತಿದ್ದಳು. ರಮೇಶ ಇಂದಿರಾಳ ಕಡೆ ನೋಡಿ ಮುಗುಳ್ನಗುತ್ತಿದ್ದ.

ಹರೀಶ, ತನಗಾಗಿ ಕಾಯುತ್ತಾ ನಿಂತಿದ್ದವರ ಕಡೆ ಕೈಯಾಡಿಸುತ್ತಾ ಹತ್ತಿರ ಬಂದ. ಮುಗುಳ್ನಕ್ಕು ರಮೇಶನ ಕೈ ಕುಲುಕಿ ತನ್ನ ಪರಿಚಯ ಹೇಳಿಕೊಂಡ. ಪುಣ್ಯಳ ಕಡೆ ತಿರುಗಿ ಹಾಯ್ ಎಂದ. ಪುಣ್ಯ ಬೆವೆತು ಹೋಗಿದ್ದಳು. ಅವನು ಇಂದಿರಾಳನ್ನು ಗಮನಿಸಿದರೂ ಗಮನಿಸಿದವನಂತೆ ಸುಮ್ಮನಿದ್ದ. ಮೊದಲಿಗೆ, ಎಲ್ಲರೂ ಸುಮ್ಮನೆ ಒಬ್ಬರನ್ನೊಬ್ಬರು ನೋಡುತ್ತಾ ಕಾಲ ಕಳೆದರು. ಪುಣ್ಯ ಮೂಕಿಯಾಗಿದ್ದಳು. ಮೊದಲಿಗೆ ಎಲ್ಲರೂ ಪುಣ್ಯಳ ಮನೆಗೆ ಬಂದರು. ಅಷ್ಟು ಹೊತ್ತಿಗೆ ಪುಣ್ಯ ಸ್ವಲ್ಪ ಚೇತರಿಸಿಕೊಂಡಿದ್ದಳು. ಅಡಿಗೆಯವರು ಎಲ್ಲರನ್ನು ಊಟಕ್ಕೆ ಎಬ್ಬಿಸಿದರು. ಊಟದ ನಂತರ ಹರೀಶ ಮಾತಾಡಿದ.

"ನನಗೆ ಹೆಚ್ಚು ದಿನ ರಜವಿಲ್ಲ. ಸಿಂಪಲ್ ಆಗಿ ಬೇಗ ಮದುವೆ ಆದರೆ ಸಾಕು. ನಿಮ್ಮ ಮಗಳು, ಐ ಮೀನ್ ಪುಣ್ಯ, ಎಲ್ಲಾ ಹೇಳಿರಬೇಕಲ್ಲ".

"ಹೂಂ... ಹೂಂ... ಹೇಳಿದಾಳೆ" ರಮೇಶ ತಡವರಿಸಿದಾಗ ಪುಣ್ಯ ತಬ್ಬಿಬ್ಬು.

"ನಾನು ನನ್ನ ಪೇರೆಂಟ್ಸ್ ಹತ್ರ ಮಾತಾಡಿದೀನಿ. ಅವರಿಗೆ ಒಪ್ಪಿಗೆ ಇದೆ. ಅವರು ತಾರೀಖನ್ನು ಗೊತ್ತು ಮಾಡಿರುತ್ತಾರೆ. ನಾನು ವಾಪಸ್ಸು ಹೋದ ಮೇಲೆ ವೀಸಾ ಕಳಿಸ್ತೀನಿ. ಓ... ಕೇ... ಪುಣ್ಯಳ ಕಡೆ ತಿರುಗಿದ. ಪುಣ್ಯ ತನ್ನ ಕಿವಿ, ಕಣ್ಣುಗಳನ್ನು ನಂಬದವಳಂತೆ ಸುಮ್ಮನೇ ಕುಳಿತಿದ್ದಳು.

ಹರೀಶ ಹೊರಡ್ತೀನಿ ಅಂತ ಎದ್ದಾಗ ಇಂದಿರಾಳೂ ಎದ್ದಳು. ಪುಣ್ಯ ಕೈ ಹಿಡಿದು ಎಳೆದು ಕೂರಿಸಿದಳು. ಈಗ ನೀನು ಎಲ್ಲಿಗೂ ಹೋಗ್ಬೇಡ. ನಾನಿನ್ನು ರಿಕವರ್ ಆಗಿಲ್ಲ. ಆಮೇಲೆ ಡ್ಯಾಡಿ ನಿನಗೆ ಡ್ರಾಪ್ ಕೊಡ್ತಾರೆ" ಹರೀಶ ಟ್ಯಾಕ್ಸಿಯಲ್ಲಿ ಕುಳಿತು ಹೊರಟು ಹೋದ. ಪುಣ್ಯ ಪೆಚ್ಚಾಗಿದ್ದಳು.

"ಯಾಕೋ ನಾನಂದುಕೊಂಡಷ್ಟು ಥ್ರಿಲ್ ಅನ್ನಿಸ್ತಿಲ್ಲ. ಎಲ್ಲಾ ಡಲ್ ಅನ್ನಿಸ್ತಿದೆ"

"ನಿನ್ನ ಹಣೇಬರಹವೇ ಅಷ್ಟು. ಹರೀಶ ಬಂದಿರೋದೇ ನಿನಗಾಗಿ. ಅವನಿಗೆ ಫೋನು ಮಾಡು, ಮಾತಾಡು ಷಾಪಿಂಗ್ ಹೋಗು..."

"ಅವನ ಪೇರೆಂಟ್ಸ್ ನಿಜವಾಗಿಯೂ ನನ್ನನ್ನು ಒಪ್ಪಿಕೊಂಡಿದಾರೇನೆ?"

"ಹೂಂ. ನಿನ್ನ ಡ್ಯಾಡಿ ಒಪ್ಕೊಳ್ಳಲಿಲ್ವಾ?"

"ಹರೀಶ ಒಳ್ಳೆಯೋನು ಅಂತ ಅನ್ನಿಸುತ್ತಾ?"

"ನೀನೇ ಹೇಳ್ಬೇಕು, ಅವನ ಜೊತೆ ಚಾಟ್ ಮಾಡಿರೋಳು ನೀನು"

"ಮದುವೆ ದಿನ ಹತ್ತಿರ ಬರ್ತಾ ಬರ್ತಾ ಭಯ ಆಗ್ತಿದೆ ಕಣೇ... ನೀನೂ ನನ್ನ ಪ್ಲೇಸ್‌ನಲ್ಲಿದ್ದಿದ್ರೆ ನಿಂಗೂ ಹೀಗೇ ಅನ್ನಿಸ್ತಿತ್ತಾ?"

"ಹೂಂ... ಅನ್ನಿಸ್ದೇ ಇರುತ್ತಾ! ನಾನೂ ಹೆಣ್ಣು ಕಣೇ..."

"ನೀನು ಮದುವೇನೇ ಮಾಡ್ಕೋ ಬೇಡ. ಹೀಗೇ ಆರಾಮಾಗಿದ್ದು ಬಿಡು"

"ನೋಡೋಣ, ಸಧ್ಯಕ್ಕೆ ನಿನ್ನ ಮದುವೆ ಮುಗಿಯಲಿ" ಸ್ವಲ್ಪ ಹೊತ್ತಿನ ನಂತರ ಇಂದಿರಾ ಹೊರಟಳು. ರಮೇಶ ಅವಳೊಡನೆ ಹೊರಟ. ಇಬ್ಬರೂ ನಗುನಗುತ್ತಾ ಮನೆಯಾಚೆ ನಡೆದಾಗ, ಪುಣ್ಯ ಚಡಪಡಿಸಿದಳು.

*****

"ನೀನು ಹರೀಶನ ಮನೆಗೆ ನಿನ್ನ ಡ್ಯಾಡಿಯ ಜೊತೇಲಿ ಬಂದು ಬಿಡು. ನಾನು ನಿನ್ನನ್ನು ಅವರ ಮನೇಲಿ ಮೀಟ್ ಮಾಡ್ತೀನಿ"

"ನಿನಗೆ ಅವರ ಮನೆ ಗೊತ್ತಾ?.. ಅಡ್ರೆಸ್ ಹೇಳ್ಲಾ? ನೀನು ಇಲ್ಲಿಗೇ ಬಂದಿದ್ರೆ ಚೆನ್ನಾಗಿತ್ತು ಇಂದೂ, ಒಟ್ಟಿಗೇ ಹೋಗಬೇಕಾಗಿತ್ತು. ನಾನು ಯಾವ ರೀತಿ ಅಲಂಕಾರ ಮಾಡ್ಕೋಬೇಕು ಅಂತ ಸಹ ತಿಳೀತಿಲ್ಲ"

"ಈಗ ನೀನು ಹೇಗಿದ್ರೇನು? ಹರೀಶ ಮೆಚ್ಚಿದಾನಲ್ಲ. ಸಿಂಪಲ್ಲಾಗಿ ಸೀರೆ ಉಟ್ಕೊಂಡು ಸಿಂಪಲ್ ಆಗಿ ಬಾ. ಅವನ ಪೇರೆಂಟ್ಸ್‌ಗೆ ಇಷ್ಟವಾಗಬಹುದು. ನಾನು ಈಗ ಅಲ್ಲಿಗೆ ಬರುಕ್ಕೆ ಆಗುಲ್ಲ. ಸ್ವಲ್ಪ ಬೇರೆ ಕೆಲಸವಿದೆ." ಇಂದಿರಾ ಫೋನನ್ನು ಇಟ್ಟು ಹರೀಶನ ಕಡೆ ನೋಡಿ ನಸು ನಕ್ಕಳು.

ಮುಂಬಾಗಿಲಿನಲ್ಲಿ ಹರೀಶನೊಂದಿಗೆ ಇಂದಿರಾ ಮಾತನಾಡುತ್ತಾ ನಿಂತಿದ್ದುದನ್ನು ಪುಣ್ಯ ಗಮನಿಸಿದಳು. ಮುಖದ ಬಣ್ಣ ಬದಲಾಗಿತ್ತು. ಕಾರಿನ ಬಳಿಗೆ ಬಂದವಳನ್ನು ನಿಷ್ಠುರವಾಗಿ ಪ್ರಶ್ನಿಸಿದಳು.

"ನಂಗಿಂತ ಮುಂಚೆ ಬಂದು ಇಲ್ಲೇನೇ ಮಾಡ್ತಿದೀಯ...?"

"ನಿನ್ನನ್ನ ರಿಸೀವ್ ಮಾಡ್ತಿದೀನಿ... ಯಾಕೇ ಇಷ್ಟವಾಗಲಿಲ್ವಾ...?"

"ಹೋಗ್ಲೀ... ಈ ಸೀರೆ ಹೇಗಿದೆ ಹೇಳು, ನಂಗೆ ಒಪ್ಪುತ್ತಿದೆಯಾ...?"

"ಸೀರೆ ಫಸ್ಟ್ ಕ್ಲಾಸಾಗಿದೆ. ನಿನ್ನ ಮೇಕಪ್ಪೂ ಸೊಗಸಾಗಿದೆ. ಒಳಗೆ ಬಾ. ಅವರೆಲ್ಲಾ ಕಾಯ್ತಾ ಇದಾರೆ.

ಹರೀಶ ತನ್ನ ತಂದೆ ತಾಯಿಯರಿಗೆ, ರಮೇಶನನ್ನು ಪುಣ್ಯಳನ್ನು ಪರಿಚಯ ಮಾಡಿಕೊಟ್ಟ. ಪದ್ಮಿನಿಯನ್ನು ಕರೆದು ಅವಳನ್ನು ಪರಿಚಯಿಸಿದ. ಇಂದಿರಾ

ಮನೆಯವರಂತೆ ಸಲುಗೆಯಿಂದ ಓಡಾಡುತ್ತಿದ್ದುದನ್ನು ಪುಣ್ಯ ಗಮನಿಸಿದಳು. ಇಂದಿರಾ ಗಮನಿಸದವಳಂತೆ ನಟಿಸಿದಳು.

"ನಾವಿಬ್ರೂ ಹೊರಗೆ ಸುತ್ತಾಡಿ ಬರ್ತೀವಿ" ಹರೀಶ, ಪುಣ್ಯಳನ್ನು ಕಣ್ಣಿನಲ್ಲೇ ಕರೆದ. ರಮೇಶ ತನ್ನ ಕಾರಿನ ಕೀಯನ್ನು ಅವನ ಕೈಗಿತ್ತ. ಹರೀಶ ನಿರಾಕರಿಸಿದ.

"ಬೇಡ... ಇಲ್ಲಿಯ ರೋಡ್ ಸೆನ್ಸ್ ನನಗಿಲ್ಲ. ಪುಣ್ಯ ನಿಂಗೆ ಡ್ರೈವಿಂಗ್ ಬರುತ್ತಾ?"

"ಇಲ್ಲ" ಸಂಕೋಚದಿಂದ ನುಡಿದಳು.

"ನಾವು ಸಿಟಿ ಟ್ಯಾಕ್ಸೀಲಿ ಹೋಗ್ತೀವಿ ಪರವಾಗಿಲ್ಲ. ಅವನು ಫೋನಿನಲ್ಲಿ ಮಾತನಾಡಿ ಟ್ಯಾಕ್ಸಿಯನ್ನು ಕರೆಸಿದ. ಮಾತನಾಡದೇ ಕುಳಿತವಳನ್ನು ಹರೀಶ ಕೊರೆದ. "ಮಾತು ಮರೆತು ಹೋಗಿದ್ಯಾ? ಚಾಟ್ ಮಾತ್ರ ಬರುತ್ತಾ?"

"ಹಾಗೇನಿಲ್ಲ ಬೇರೆ ಏನನ್ನೋ ಯೋಚಿಸ್ತಿದ್ದೆ..."

"ಇಂದಿರನ ಬಗ್ಗೆ ಯೋಚಿಸ್ತಿದ್ದೆ ಅಲ್ವಾ!... ಅವಳು ನನ್ನ ಸ್ವಂತ ತಂಗಿ..."

"ವ್ಹಾಟ್! ಇಂದಿರಾ ನಿನ್ನ ಸಿಸ್ಟರ್... ಸುಳ್ಳು..."

"ನಾನ್ಯಾಕೆ ಸುಳ್ಳು ಹೇಳಲಿ ಪುಣ್ಯಾ... ಅವಳೇ ನಿನ್ನ ಬಗ್ಗೆ ನಂಗೆ ಹೇಳಿದ್ದು, ನನ್ನ ಪೇರೆಂಟ್ಸ್‌ನ ಒಪ್ಪಿಸಿದ್ದು"

"ಇದನ್ನೆಲ್ಲಾ ಅವಳು ನನಗೆ ಹೇಳಲೇ ಇಲ್ಲ"

"ಸರ್ಪ್ರೈಸ್ ಆಗಿರಲಿ ಅಂತ ಸುಮ್ಮನಿರಬಹುದು. ನೀನು ಅವಳ ಕಲೀಗ್ ಅಂತ ತಿಳಿದದ್ದೇ ಈಚೆಗೆ. ನೀನು ಇಂಟರ್‌ನೆಟ್‌ನಲ್ಲಿ ನನ್ನ ವಿಷಯಗಳನ್ನೆಲ್ಲಾ ಕಲೆಕ್ಟ್ ಮಾಡಿದ್ದನ್ನ ಹೇಳಿದೆಯಂತೆ..."

"ನಿನ್ನ ಫೋಟೋ ನೋಡಿಯೂ ಸುಮ್ಮನಿದ್ದಳು... ಈಗ ನಾನೂ ಸುಮ್ಮನಿದ್ದು ಬಿಡ್ತೀನಿ... ಅವಳೇ ಹೇಳ್ಬೇಕು..."

"ಈಗ ನಾನು ಹೇಳಿದ್ನಲ್ಲ"

"ಇನ್ನು ಏನೇನು ಸೀಕ್ರೆಟಗಳಿವೆ, ಹೇಳಿಬಿಡು" ವ್ಯಂಗ್ಯದಿಂದ ನುಡಿದಳು.

"ನನ್ನ ಅಣ್ಣ... ಅಮೆರಿಕನ್ ಲೇಡೀನ ಮದುವೆಯಾಗಿ ಅಲ್ಲೇ ಸೆಟ್ಲ್ ಆಗಿದಾನೆ. ಇಂದಿರಾ ನನ್ನ ತಂಗಿ, ಪದ್ಮಿನಿ ನನ್ನ ಚಿಕ್ಕ ತಂಗಿ ಅಷ್ಟೇ..."

"ಇದನ್ನೆಲ್ಲ ನೀನು ಮೊದಲೇ ಯಾಕೆ ಹೇಳಲಿಲ್ಲ?"

"ನೀನು ಕೇಳಲಿಲ್ಲ; ನಾನು ಹೇಳಲಿಲ್ಲ. ಈಗ ಏನು ಪ್ರಾಬ್ಲಂ? ನಿನಗೋಸ್ಕರ ನಾನು ಅಮೆರಿಕಾದಿಂದ ಹಾರಿ ಬಂದಿಲ್ವಾ?"

"ಅಲ್ಲಿ ನಿಂಗೆ ಯಾವ ಗರ್ಲ್‌ಫ್ರೆಂಡ್ ಇಲ್ಲ ಅಲ್ವಾ?"

"ಆ ಏಜ್ ಅಲ್ಲ ನಂದು... ಇಲ್ಲಿ ನಿನಗೂ ಬೇರೆ ಬಾಯ್‌ಫ್ರೆಂಡ್ಸ್ ಇಲ್ಲ ಅಂತ ಅಂದುಕೊಂಡಿದೀನಿ..."

"ಹರೀಶ್... ನಿನ್ನ ವುಡ್‌ಬೀ ನಾನು. ನನ್ನತ್ರ ಹೀಗಾ ಮಾತಾಡೋದು...?"

"ಮಾತಾಡಿದ್ರೇ ತಾನೇ ಎಲ್ಲಾ ಕ್ಲಿಯರ್ ಆಗೋದು. ನಿನ್ನನ್ನ ಯಾವಾಗ ನೋಡ್ತೀನೋ, ಮಾತಾಡ್ತೀನೋ ಅಂತ ಕಾಯ್ತಿದ್ದೆ. ನೀನ್ಯಾಕೆ ಹೀಗೆ ಡಲ್ ಆಗಿದೀಯ... ಚಾಟ್ ಮಾಡೋ ಸ್ಮಾರ್ಟ್ ಹುಡುಗಿ ಥರ ಇಲ್ಲವೇ ಇಲ್ಲ... ಎನಿ ಪ್ರಾಬ್ಲಂ?"

"ನನ್ನ ಡ್ಯಾಡೀನೇ ನನಗೊಂದು ಬಿಗ್ ಪ್ರಾಬ್ಲಂ..."

"ಹುಂ, ಇಂದಿರಾ ಹೇಳಿದ್ಲು... ಆದಷ್ಟು ಬೇಗ ಅವರಿಗೆ ಮದುವೆ ಮಾಡಿ ಬಿಡೋಣ. ಅವರೂ ಎಂಜಾಯ್ ಮಾಡ್ಲೀ... ಹನಿಮೂನ್‌ಗೆ ಸಿಂಗಪೂರ್‌ಗೆ ಕಳಿಸೋಣ"

"ಹರೀಶ್..." ಮುದ್ದುಗರೆದಳು.

"ಪುಣ್ಯಾ... ಐ ಲವ್ ಯೂ ವೆರಿ ಮಚ್..." ಎನ್ನುತ್ತಾ ಅವಳ ಎಡಗೆನ್ನೆಗೆ ಮುತ್ತನಿತ್ತ. ಅವಳು ಕೈಗಳನ್ನು ತನ್ನ ಕೈಯೊಳಗೆ ತೆಗೆದುಕೊಂಡ. ಅವನಿಗೆ ಒರಗಿ ನುಡಿದಳು. ಐ ಲವ್ ಯೂ ಟೂ... ತಿರುಗಾಡಿ ಬರುವಷ್ಟರಲ್ಲಿ ಇಬ್ಬರೂ ಒಬ್ಬರನ್ನೊಬ್ಬರು ಸಾಕಷ್ಟು ಅರಿತಿದ್ದರು.

ಕೆಲವೇ ದಿನಗಳಲ್ಲಿ ಹರೀಶ್, ಪುಣ್ಯಾರ ಮದುವೆ ವಿಜೃಂಭಣೆಯಿಂದ ನೆರವೇರಿತು. ರಮೇಶ್ ತಮ್ಮ ಶ್ರೀಮಂತಿಕೆಗೆ ತಕ್ಕಂತೆ ಖರ್ಚು ಮಾಡಿ ಮದುವೆ ಮಾಡಿಕೊಟ್ಟರು.

ನವದಂಪತಿಗಳು ಕೊಡೈಕೆನಾಲ್‌ಗೆ ಹೊರಟಿದ್ದರು. ಪುಣ್ಯ ಬಹಳ ಖುಷಿ ಯಾಗಿದ್ದಳು.

ಹೊರಡುವ ಮೊದಲು ಇಂದಿರಳೊಡನೆ ಮಾತಾಡಿದಳು.

"ಥ್ಯಾಂಕ್ಸ್ ಕಣೇ... ಆದರೆ, ಹರೀಶ ನಿನ್ನ ಅಣ್ಣ ಅಂತ ಯಾಕೆ ಹೇಳ್ದೆ ಮುಚ್ಚಿಟ್ಟೆ? ಈಗ ನಾನು ನಿನ್ನ ಅತ್ತಿಗೆ. ನಾನು ಹೇಳಿದ ಹಾಗೆ ಕೇಳ್ಬೇಕು..."

"ನಾನು ವಯಸ್ಸಲ್ಲಿ ನಿಂಗಿಂತ ದೊಡ್ಡೋಳು. ಅದೆಲ್ಲಾ ಇರಲಿ, ಹರೀಶ್ ಕಾಯ್ತಾ ಇದಾನೆ, ಹೊರಡು..."

"ಹರೀಶ್ ತುಂಬಾ ಒಳ್ಳೆಯವ್ರು... ಅವ್ರು ಡ್ಯಾಡೀನೂ ಅಮೆರಿಕಾಕ್ಕೆ ಕರೆಸಿಕೊಳ್ತಾರಂತೆ..."

"ನಿಮ್ಮ ಡ್ಯಾಡಿ ಒಪ್ಪಬೇಕಲ್ಲ"

"ಒಪ್ಪಿಸೋಕೆ ನೀನು ಇದೀಯಲ್ಲ. ಈಚೀಚೆಗೆ, ಡ್ಯಾಡಿಗೆ ನನಗಿಂತ ನಿನ್ನ ಮಾತಿನ ಮೇಲೆ ವಿಶ್ವಾಸ ಜಾಸ್ತಿ. ನೀನು ಹೇಳಿದ್ದನ್ನೆಲ್ಲಾ ಒಪ್ತಾರೆ. ಏನಾದ್ರೂ ಮಾಟಮಂತ್ರ ಮಾಡಿಸಿದೀಯ ಹೇಗೆ?..."

"ನನ್ನನ್ನ ನೋಡಿದ್ರೆ ಹಾಗೆನ್ನಿಸುತ್ತಾ...?"

"ಹುಂ... ಸ್ವಲ್ಪ ಸ್ವಲ್ಪ ಹಾಗೇ ಅನ್ನಿಸುತ್ತೆ... ನಿನ್ನ ಮನಸ್ನಲ್ಲಿ ಏನೋ ಇದೆ. ಮುಖವೇ ಬೇರೆ ಹೇಳುತ್ತೆ..."

"ನನ್ನ ವರ್ಣನೆ ಸಾಕು... ಹರೀಶನ್ನ ರೇಗಿಸ್ಬೇಡ..."

"ಡ್ಯಾಡೀನ ಆಗ ಈಗ ಹೋಗಿ ಮಾತಾಡಿಸ್ತಾ ಇರು ಇಂದಿರಾ... ಅವರನ್ನು ನಿಮ್ಮ ಮನೆಗೇ ಯಾಕೆ ಕರ್ಕೊಂಡು ಬರಬಾರದು! ಅವರು ನನ್ನನ್ನು ತುಂಬಾ ಮಿಸ್ ಮಾಡ್ಕೋತಾರೆ"

"ಡ್ಯಾಡೀ ಯೋಚನೆ ಬಿಡು... ಹನಿಮೂನ್‌ಗೆ ಹೋಗ್ತಾ ಇದೀಯ. ಹರೀಶನ್ನ ಮೆಚ್ಚಿಸ್ಬೇಕು. ನಿನ್ನ ಮಾತುಗಳಿಂದ ಅವನನ್ನು ರೇಗಿಸ್ಬೇಡ... ಹರೀಶ ನಮ್ಮ ಹುಡುಗೀನಾ ಚೆನ್ನಾಗಿ ವಿಚಾರಿಸ್ಕೋ... ಅದು ಇನ್ನು ಕೂಸು..."

"ನೀನೇನೂ ಯೋಚಿಸ್ಬೇಡ ಇಂದೂ... ವಾಪಸ್ಸು ಬರುವ ಹೊತ್ತಿಗೆ ಅವಳು ಸಾಕಷ್ಟು ಮೆಚೂರ್ಡ್ ಆಗಿರ್ತಾಳೆ"

"ನೀವಿಬ್ರೂ ನನ್ನನ್ನ ಹೆದರಿಸ್ಬೇಡಿ..." ಪುಣ್ಯ ಎಲ್ಲರಿಗೂ ಹೇಳಿ ಅವನೊಂದಿಗೆ ಹೊರಟಳು. ಅಲ್ಲಿಯೇ ಇದ್ದ ರಮೇಶ ಮನೆಗೆ ಹೊರಟ. ಇಂದಿರಾ ತಡೆದಳು. "ಇವತ್ತು ನಮ್ಮ ಮನೇಲೇ ಊಟ ಮಾಡ್ಕೊಂಡು ಹೋಗಿ, ಮನೆಗೆ ಹೋಗಿ ಒಬ್ಬರೇ ಏನ್ಮಾಡ್ತೀರಿ...?"

"ನೀವು ಬರ್ತೀರಾ? ನನಗೂ ಕಂಪೆನಿ ಆಗುತ್ತೆ"

"ಅಲ್ಲಿ ಬೇಬೀನೂ ಇಲ್ಲ, ನಮ್ಮಮ್ಮ ಏನಂತಾಳೋ?" ಅನುಮಾನಿಸಿದಳು.

"ನಮ್ಮಿಬ್ಬರ ಮದುವೆ ಬಗ್ಗೆ ಇವತ್ತೇ ನಿಮ್ಮ ತಂದೆ ಹತ್ರ ಮಾತಾಡ್ತೀನಿ" ಇಂದಿರಾ ಸಮ್ಮತಿಯನ್ನು ಸೂಚಿಸಿದಳು. ಊಟದ ನಂತರ ರಮೇಶ ಹರೀಶನ ತಂದೆಯೊಂದಿಗೆ ಮಾತಾಡಿದ. ಮೊದಲಿಗೆ ಆತ ಬೆಚ್ಚಿದರು.

"ಏನು ಹೇಳ್ತಿದೀರಿ ನೀವು?... ಇಂದಿರಾ ಇನ್ನು ಚಿಕ್ಕವಳು. ನಿಮ್ಮ ಅಳಿಯನಿಗೆ ತಂಗಿ..."

"ಗೊತ್ತು... ಆದರೆ ಅವರೇ ರೆಡಿಯಾಗಿದಾರೆ... ಈಗ ನನ್ನ ಮಗಳಿಗೂ ಮದುವೆಯಾಗಿದೆ. ಮನೆ ಭಣ ಭಣ ಅಂತಿದೆ..."

"ಅದಕ್ಕೇ... ನನ್ನ ಮಗಳೇ ಆಗ್ಬೇಕಾ ನಿಮಗೆ? ನಿಮ್ಮ ವಯಸ್ಸಿಗೆ ತಕ್ಕ ಹೆಣ್ಣನ್ನು ನಾನು ನೋಡ್ತೀನಿ... ಧಾರಾಳವಾಗಿ ಮದುವೆಯಾಗಿ"

"ಮದುವೆ ಆಗ್ಲೇ ಬೇಕೂಂತ ನಾನು ಅಂದುಕೊಂಡಿರಲಿಲ್ಲ. ಇದು ನಿಮ್ಮ ಮಗಳ ಆಸೆ. ಈ ವಿಷಯ ನನ್ನ ಮಗಳಿಗೂ ತಿಳಿಯದು. ನನಗೆ ಯೌವನವಿಲ್ಲ ನಿಜ. ಆದರೆ ನಿಮ್ಮ ಮಗಳನ್ನು ಚೆನ್ನಾಗಿ ನೋಡಿಕೊಳ್ತೀನಿ. ಆ ನಂಬಿಕೆ ನನಗಿದೆ.

"ನೀವು ತಂದೆ ಮಗಳು. ನನ್ನ ಮಗಳ ತಲೆಯನ್ನು ಕೆಡಿಸಿದೀರಿ...

ಇಲ್ಲದಿದ್ದರೆ ಇಂಥ ಆಲೋಚನೆ ಅವಳಿಗೆ ಬರೋದಾದ್ರೂ ಹೇಗೆ?"

"ಹಾಗೆಲ್ಲಾ ಆರೋಪ ಹೊರಿಸಬೇಡಿ. ಇಲ್ಲಿ ಯಾವ ಕೆಟ್ಟ ಉದ್ದೇಶವೂ ಇಲ್ಲ. ಇಂಟರ್‌ನೆಟ್ ಮುಖಾಂತರ. ನನ್ನ ಮಗಳನ್ನು ಮರುಳು ಮಾಡಿ, ನಿಮ್ಮ ಮಗ ಮದುವೆಯಾಗಿದಾರೆ. ಇಂದಿರಾ ನಮ್ಮ ಮನೆಗೆ ಬರುತ್ತಿದ್ದುದು ನಿಜ. ಆದರೆ ಒಂದು ದಿನವೂ ನಾನು ಕೆಟ್ಟ ದೃಷ್ಟಿಯಿಂದ ನೋಡಿಲ್ಲ. ಬೇಕಾದ್ರೆ ನಿಮ್ಮ ಮಗಳನ್ನೇ ಕೇಳಿ. ನಾನು ನಿಮ್ಮ ಒಪ್ಪಿಗೆಯನ್ನು ಕೇಳ್ತಾ ಇದೀನಿ. ಒಂದು ವೇಳೆ ನಿಮ್ಮ ಮಗಳು ನಿಮ್ಮ ಒಪ್ಪಿಗೆ ಇಲ್ಲದೆಯೂ, ನನ್ನ ಬಳಿಗೆ ಬಂದರೆ, ನಾನು ಅವಳನ್ನು ನಿರಾಕರಿಸುವುದಿಲ್ಲ. ಅವಳನ್ನು ಮದುವೆಯಾಗ್ತೀನಿ. ಇಷ್ಟರ ಮೇಲೆ ನಿಮ್ಮಿಷ್ಟ..." ಮಾತು ಮುಗಿಸಿ ಕೆಳಗಿಳಿದು ಬಂದ.

"ಇಂದಿರಾ ನಾನಿನ್ನು ಬರ್ತೀನಿ. ನೀವುಗಳು ಏನು ನಿರ್ಧರಿಸುತ್ತೀರೋ ಅದು ನನಗೆ ಸಮ್ಮತ" ಎಂದು ಹೇಳಿ ಹೊರಟು ಬಿಟ್ಟ.

ಕೆಳಗಿಳಿದು ಬಂದ ತಂದೆ ಇಂದಿರಾಳ ಮೇಲೆ ಗುಡುಗಿದರು. "ಇದೆಲ್ಲಾ ಏನು? ನಮಗ್ಯಾಕೆ ಬೇಕಿತ್ತು ಈ ಶ್ರೀಮಂತರ ಸಹವಾಸ...? ಕೆಲಸಕ್ಕೆ ಹೋಗ್ತೀಯ ಸಂಪಾದಿಸ್ತೀಯ. ಫ್ರೀಯಾಗಿ ಮಾತಾಡಿದ್ರೆ ತಪ್ಪೇನು ಅಂತ ಸುಮ್ಮನಿದ್ರೆ... ಈಗ ಹೀಗೆ.. ನಿನ್ನ ಅಣ್ಣಂದಿರು ಹಾಗೇ.. ನೀನೂ ಹೀಗೇ ಮಾಡಿದೆಯಲ್ಲಮ್ಮಾ?"

"ನನ್ನಿಂದ ಏನೂ ತಪ್ಪು ನಡೆದಿಲ್ಲ ಅಪ್ಪಾ, ನನ್ನನ್ನು ನಂಬಿ. ಅಣ್ಣಂದಿರು ಮನೆಯಿಂದ ಹೊರಗೆ ಹೋದ ಮೇಲೆ ನಾನೇ ಹಿರಿ ಮಗನಂತೆ ಈ ಮನೆಗೆ ಯಜಮಾನಿಯಾಗಿದೀನಿ. ನನಗೂ ವಯಸ್ಸಾಗಿದೆ ಅಪ್ಪಾ... ನನಗೂ ತಿಳುವಳಿಕೆ ಇದೆ. ರಮೇಶ್ ಒಳ್ಳೆಯವರು. ನಾನು ಎಲ್ಲವನ್ನು ಯೋಚಿಸಿಯೇ ಈ ತೀರ್ಮಾನಕ್ಕೆ ಬಂದಿದೀನಿ. ದಯವಿಟ್ಟು ಒಪ್ಪಿಗೆ ಕೊಡಿ"

"ನಾನು ಒಪ್ಪದಿದ್ದರೇ..."

"ನನ್ನ ಹಣೆಬರಹವೇ ಇಷ್ಟು ಅಂತ ತೆಪ್ಪಗಿರ್ತೀನಿ. ಪದ್ಮಿನಿಯ ಓದು ಮುಗಿದ ನಂತರ ಅವಳಿಗೆ ಬೇಗ ಮದುವೆ ಮಾಡಿ ಬಿಡಿ. ಅವಳೂ ನನ್ನಂತೆ ವೃದ್ಧ ಕನ್ಯೆಯಾಗಿ ಉಳಿಯುವುದು ಬೇಡ"

"ನನ್ನನ್ನ ಹಂಗಿಸಿ ಅಂತಿದೀಯೇನಮ್ಮ..."

"ಇಲ್ಲಪ್ಪಾ... ಆ ಅಧಿಕಾರ ನನಗಿಲ್ಲ. ಇರೋ ವಿಷಯವನ್ನು ನನ್ನ ಮನೆ ಎನ್ನುವ ಸಲುಗೆಯಿಂದ ಹೇಳಿದೀನಿ. ಹಿರಿಯಣ್ಣ ಎಂದೋ ದೂರವಾದ. ಹರೀಶ ದೂರವಾಗದಿರಲಿ ಅಂತ, ನಾನೇ ನಿಮ್ಮನ್ನು ಒಪ್ಪಿಸಿದೆ. ಈ ಸಮಯದಲ್ಲಿ ನನಗೆ ತಿಳಿಯದ ಹಾಗೆ ನಾನು ರಮೇಶನ ಬಗ್ಗೆ ಯೋಚಿಸುತ್ತಿದ್ದೆ. ನನಗೆ ಬೇರೆ ಯಾವ ಕಾಮನೆಗಳೂ ಇಲ್ಲ, ಇಲ್ಲಿ ಒಂಟಿಯಾಗಿ ಕಾಲ ಕಳೆಯುವ ಬದಲು ಅಲ್ಲಿ ಅವರ ಒಂಟಿತನವನ್ನು ಕಳೆಯುವ ಮನಸ್ಸಾಯ್ತು. ಇದು

ತಪ್ಪೇನಪ್ಪಾ..."

"ಹೌದು ತಪ್ಪು... ನಾವು ನಿನಗೆ ಮದುವೆ ಮಾಡುಲ್ಲ ಅಂತ ಹೇಳಿದೆವೇ?"

"ಇಲ್ಲ ಹೇಳಿಲ್ಲ... ಆದರೆ ಇದುವರೆಗೂ ಒಂದು ವಧೂ ಪರೀಕ್ಷೆ ನಡೆದಿಲ್ಲ. ಅದು ನಿಜ ತಾನೇ... ನಡೆದರೂ, ನನ್ನನ್ನು ಯಾರಾದ್ರೂ ಮೆಚ್ಚುತ್ತಿದ್ರೋ, ಇಲ್ಲವೋ... ಅಲ್ಲದೇ ಯಾರೋ ಹೊಸ ಪರಿಚಯದವನ ಮನೆಗೆ ಹೆಂಡತಿಯಾಗಿ ಹೊರಟು ಹೋದ್ರೆ ನೀವೆಲ್ಲಾ ದೂರವಾಗಿ ಬಿಡ್ತಿರಲಿಲ್ವೇನಪ್ಪಾ... ಈಗ ಹಾಗೆ ಆಗುವುದಿಲ್ಲ. ಮೊದಲಿನಂತೆಯೇ. ನಾನು ಸ್ಕೂಲಿಗೆ ಹೋಗ್ತೀನಿ, ಸಂಪಾದಿಸ್ತೀನಿ, ನಿಮ್ಮಗಳನ್ನೆಲ್ಲ ಚೆನ್ನಾಗಿ ನೋಡಿಕೊಳ್ತೀನಿ..."

"ಏನೂ ಬೇಡ, ಅವನಿಗೆ ನನ್ನ ತಮ್ಮನಷ್ಟು ವಯಸ್ಸಾಗಿದೆ. ಎರಡನೇ ವರ. ಕಂಡೂ ಕಂಡೂ ಅಂಥೋನ ಕೈಗೆ ಕೊಡೋಕೆ ಆಗುತ್ತಾ?"

"ಅಮ್ಮ ನೀನಾದ್ರೂ ಹೇಳಮ್ಮಾ... ಅವರಲ್ಲಿ ಏನು ಕೊರತೆ ಇದೆ?... ರೂಪ, ಗುಣ, ಶ್ರೀಮಂತಿಕೆ ಎಲ್ಲಾ ಇದೆ. ನಾನು ಸುಖವಾಗಿರುಲ್ಲವೇನಮ್ಮ?"

"ಆತನಿಗೆ ವಯಸ್ಸಾಗಿದೆ, ನಿನಗೆ ಅರ್ಥವಾಗುಲ್ಲ ಸುಮ್ಮನಿರು..."

"ನನಗೆ ಎಲ್ಲಾ ಅರ್ಥವಾಗುತ್ತೆ. ನಾನು ತಿಳುವಳಿಕೆ ಇಲ್ಲದವಳೇನಲ್ಲ. ಸೈನ್ಸ್ ಓದಿದೀನಿ. ಅವರ ಮಗಳು ಪುಣ್ಯಾನೇ ನನಗೂ ಮಗಳು. ಅದೇ ನಿಜ..."

"ನಿನ್ನ ತಲೆ ಕೆಟ್ಟಿದೆ. ಏನಾದ್ರೂ ಮಾಡ್ಕೋ... ಅವನ ಶ್ರೀಮಂತಿಕೆಗೆ ಮರುಳಾಗಿದೀಯ... ಅವನು ಹೆಂಡತಿ ಇಲ್ಲದೇ ಇದ್ದವನು. ನಿನ್ನ ಹತ್ತಿರ ನಿಯತ್ತಾಗಿ ಇರ್ತಾನೆ ಅಂತ ಏನು ನೆಚ್ಚಿಕೆ?"

"ಅಣ್ಣಂದಿರು ಮನೆ ಬಿಟ್ಟು ಹೊರದೇಶಕ್ಕೆ ಹೋದರು. ಅವರ ಮೇಲೆ ನಿನಗೆ ನಂಬಿಕೆ ಇತ್ತು. ಅಲ್ವೇನಮ್ಮ...? ರಮೇಶ್ ಮನಸ್ಸು ಮಾಡಿದ್ರೆ ಎಂದೋ ಮರು ಮದುವೆಯಾಗಬಹುದಾಗಿತ್ತು. ಅವರು ಒಳ್ಳೆಯವರು ಎಂಬ ನಂಬಿಕೆ ನನಗಿದೆ. ನಿಮ್ಮಗಳ ಒಪ್ಪಿಗೆ ಇದ್ರೆ ನಾನು ಅವರನ್ನೇ ಮದುವೆ ಆಗ್ತೀನಿ. ಇಲ್ಲದೇ ಇದ್ದರೆ ಹೀಗೇ ಇದ್ದು ಬಿಡ್ತೀನಿ. ಪದ್ಮಿನಿ ಕೆಲಸಕ್ಕೆ ಸೇರಿಕೊಂಡ ಮೇಲೆ, ನಾನು ಯಾವುದಾದ್ರೂ ಆಶ್ರಮಕ್ಕೆ ಸೇರಿಕೊಂಡು ಸಮಾಜ ಸೇವೆ ಮಾಡ್ತೀನಿ" ಇಂದಿರಾ ಅಲ್ಲಿಂದ ಹೊರಟು ಹೋದಳು. ಸ್ವಲ್ಪ ಹೊತ್ತು ಗುಸು ಗುಸು ಪಿಸು ಪಿಸು ಚರ್ಚೆಯ ನಂತರ ತಂದೆ ತಾಯಿಯರು ಒಂದು ತೀರ್ಮಾನಕ್ಕೆ ಬಂದರು. ರಮೇಶನಿಗೆ ಫೋನು ಮಾಡಿ ಮಾತನಾಡಿದರು.

*****

ಮನೆಯ ದೇವರ ಮುಂದೆ, ಶಾಸ್ತ್ರಿಗಳ ಸಮ್ಮುಖದಲ್ಲಿ ರಮೇಶ ಇಂದಿರಾ ದಂಪತಿಗಳಾದರು. ಹಬ್ಬದ ಊಟದ ನಂತರ, ಇಂದಿರಾಳನ್ನು ರಮೇಶನ ಮನೆಗೆ ಕರೆ ತಂದು ಬಿಟ್ಟರು. ರಮೇಶ ಅವಳ ಕೈ ಹಿಡಿದು, ಅವಳನ್ನು

ಒಳಕ್ಕೆ ಕರೆದೊಯ್ದ. ಅಡಿಗೆಯಾಕೆ ಮಿಕಿ ಮಿಕಿ ನೋಡಿದರು. ಇಂದಿರಾ ಆ ಮನೆಯ ಒಡತಿ ಆದಳು. ರಮೇಶನ ನಡವಳಿಕೆ ಅವಳಿಗೆ ಹಿಡಿಸಿತ್ತು.

ಒಂದು ವಾರದ ನಂತರ ಪುಣ್ಯಾ ಹರೀಶ್ ಹನಿಮೂನ್ ಮುಗಿಸಿಕೊಂಡು ಹಿಂತಿರುಗಿದರು. ಅತ್ತೆಯ ಮನೆಯಲ್ಲಿ ಸ್ವಲ್ಪ ಹೊತ್ತು ಇದ್ದು, ತಂದೆಯ ಮನೆಗೆ ಹೋಗುವ ಆಸೆಯನ್ನು ವ್ಯಕ್ತಪಡಿಸಿದಳು ಪುಣ್ಯಾ. ಹರೀಶನ ತಾಯಿ ನಡೆದುದನ್ನು ಮಗನಿಗೆ ತಿಳಿಸಿದರು. ಇಬ್ಬರೂ ಆ ಮನೆಗೆ ಹೊರಟರು. ಮುಂಬಾಗಿಲಿನಲಿ ರಮೇಶ, ಮಗಳು ಅಳಿಯನನ್ನು ಹಾರ್ದಿಕವಾಗಿ ಸ್ವಾಗತಿಸಿದ... ಪುಣ್ಯ, ಡ್ಯಾಡಿಯ ಸಂತಸವನ್ನು ಗಮನಿಸಿದಳು. ಮಗಳು ಮನೆಯಿಂದ ಹೊರಟು ಹೋದಳು. ಒಂಟಿಯಾಗಿದೀನಿ ಎನ್ನುವ ವ್ಯಥೆ ಡ್ಯಾಡಿಗೆ ಇಲ್ಲವೇ ಅಂತ ಅಂದುಕೊಂಡು ಒಳಗೆ ಹೆಜ್ಜೆ ಇಡುವಷ್ಟರಲ್ಲಿ ಇಂದಿರಾ ಎದುರಾದಳು.

"ಅರೇ... ನೀನೇನೇ ಇಲ್ಲಿ... ನನಗಾಗಿ ಕಾಯ್ತಾ ಇದ್ದೆಯಾ?"

"ಮೀಟ್ ಮೈ ವೈಫ್... ಮಿಸೆಸ್ ಇಂದಿರಾ ರಮೇಶ್...." ರಮೇಶ ಮಗಳಿಗೆ ತನ್ನ ಹೆಂಡತಿಯನ್ನು ಪರಿಚಯಿಸಿದ. ನಂಬದವಳಂತೆ, ಪುಣ್ಯಾ ಇಂದಿರಾಳ ಕೈಗಳನ್ನು ಎಳೆದು ಜೋರಾಗಿ ಕಿರುಚಿಕೊಂಡಳು. ರಮೇಶ ಅವಳನ್ನು ಹಿಂದಕ್ಕೆ ಎಳೆದ.

"ಇದು ಮೋಸ... ಡ್ಯಾಡೀ ಇದು ಮೋಸ... ನಂಗೆ ಒಂದ್ಮಾತೂ ಹೇಳದೇ ನೀವು... ನೀವು ಮದುವೆಯಾದ್ರಾ?..."

ಹರೀಶ ಪುಣ್ಯಾಳನ್ನು ತನ್ನ ಕಡೆಗೆ ಎಳೆದ. "ಕೂಲ್ ಡೌನ್ ಪುಣ್ಯಾ... ಆಗಬಾರದ್ದು ಏನೂ ಆಗಿಲ್ಲ. ಇವಳು ನಿನ್ನ ಫ್ರೆಂಡ್ ಇಂದಿರಾ..."

"ನಂಗೊತ್ತು, ಆದರೂ ಎಲ್ಲಾ ಸೇರಿ ನನಗೆ ಮೋಸ ಮಾಡಿದಿರಿ... ಡ್ಯಾಡೀ, ನೀವು ಇವಳನ್ನು ಮದುವೆಯಾಗ್ತೀನಿ ಅಂತ ಹೇಳಿದ್ದರೆ, ನಾನು ಬೇಡ ಅಂತ ಅಂತಿದ್ನಾ? ಯಾಕೆ ಹೀಗೆ ಮಾಡಿದಿರಿ...?"

"ಒಂಥರಾ ಸಡನ್ ಆಗಿ ಎಲ್ಲಾ ಡಿಸೈಡ್ ಆಯ್ತು... ಬೇಬಿ... ನಾನು ಸಿಂಪಲ್ ಆಗಿ ಮದುವೆ ಆದೆ... ಯಾಕೆ ನಿಂಗೆ ಖುಷಿಯಾಗ್ತಿಲ್ಲಾ? ಇದು ನಿನ್ನ ಐಡಿಯಾನೇ ತಾನೇ...?"

"ನಂಗೊತ್ತಿಲ್ಲ... ನಂಗೇನಾಗ್ತಿದೆ ಅಂತ... ಜಸ್ಟ್ ಐ ಕಾಂಟ್ ಬಿಲೀವ್ ದಿಸ್... ಇಂದಿರಾ ನೀನೂ ಹೀಗೆ ಮಾಡಬಹುದೇನೇ...?

"ಅವಳದ್ದೇನೂ ತಪ್ಪಿಲ್ಲ. ನೀನೂ ಹನಿಮೂನ್‌ಗೆ ಹೋದ್ಮೇಲೆ ಈ ಮನೇಲಿ ಒಂಟಿಯಾಗಿರೋದು ಕಷ್ಟ ಅಂತ ಅನ್ನಿಸ್ತು. ಇಂದಿರಂಗೆ ಫೋನು ಮಾಡಿ ಮಾತಾಡಿದೆ. ಆಗ ಇದ್ದಕ್ಕಿದ್ದಂತೆ ಡಿಸೈಡ್ ಮಾಡಿದೆವು. ಸುಮ್ಮನೆ ಇಲ್ಲಿ ಇಂದಿರಾ ಬಂದು ಇರೋಕೆ ಆಗುತ್ತಾ? ಮದುವೆ ಮಾಡಿಕೊಂಡು

ಕರ್ಕೊಂಡು ಬಂದೆ..."

"ಇಂದಿರಾ ನಿಜ ಹೇಳು... ನಿನ್ನ ಪೇರೆಂಟ್ಸ್ ಒಪ್ಪಿದ್ರಾ?... ನೀನು ನಿಜವಾಗಿಯೂ ಒಪ್ಕೊಂಡ್ಯಾ...? ನಿನ್ನನ್ನ ಚಿಕ್ಕಮ್ಮ ಅಂತ ಹೇಗೆ ಒಪ್ಪಿಕೊಳ್ಳಲಿ?" ರಮೇಶ ಇಂದಿರಾ ಮುಖ ಮುಖ ನೋಡಿಕೊಂಡರು. ಪುಣ್ಯ ಹೀಗಾಡಬಹುದೆಂದು ಅವರು ಭಾವಿಸಿರಲಿಲ್ಲ.

"ಸಾರೀ... ಕಣೇ... ನನ್ನನ್ನ ಇಲ್ಲಿ ನೋಡಿ ನಿಂಗೆ ಖುಷಿಯಾಗುತ್ತೆ ಅಂತ ಅಂದ್ಕೊಂಡಿದ್ದೆ. ಆದರೆ ಈಗ ಏನು ಮಾಡಲಿ? ನಾವು ಮದುವೆಯಾಗಿದ್ದೇವೆ... ನಿಜ ಹೇಳು ಡ್ಯಾಡಿ ಒಂಟಿಯಾಗಿ ಇರೋದನ್ನ ನೋಡುಕ್ಕಾಗುಲ್ಲ ಅಂತ ಹೇಳ್ದೋಳು ನೀನೇ ತಾನೇ... ನಿನಗೆ ಚಿಂತೆ ಕಡಿಮೆ ಆಗಲಿ ಅಂತ ನಾನು ಈ ತೀರ್ಮಾನ ತಗೊಂಡೆ..."

"ಓ... ಕೇ... ಅಂತೂ ನೀನು ಶಾಕ್ ಮೇಲೆ ಶಾಕ್ ಕೊಟ್ಟೆ ನನಗೆ. ನಿನ್ನಿಂದ ನಾನು ಇದನ್ನು ನಿರೀಕ್ಷಿಸಿರಲಿಲ್ಲ. ನನ್ನ ಆಪ್ತ ಗೆಳತಿಯಾಗಿದ್ದುಕೊಂಡು ನನ್ನ ಇನ್ನೊಸೆನ್ಸ್‌ನ ಮಿಸ್‌ಯೂಸ್ ಮಾಡಿಕೊಂಡಿದೀಯ... ಡ್ಯಾಡೀ ನೀವೂ ಅಷ್ಟೇ... ನಾನು ನಿಮ್ಮಿಬ್ಬರನ್ನು ಕ್ಷಮಿಸೋಲ್ಲ..."

"ಬೇಬಿ... ನಿನ್ನ ಇಷ್ಟದಂತೆ ನಾನು ಮತ್ತೆ ಮದುವೆಯಾದೆ. ಈಗ ಹೀಗೆ ಮಾತಾಡ್ತೀಯಲ್ಲ..."

"ಪುಣ್ಯಾ... ಯಾಕೆ ಹೀಗೆ ಎಕ್ಸೈಟ್ ಆಗ್ತಿದೀಯ...? ಇಂದಿರಾ ಹೇಳ್ತಿರೋದೆಲ್ಲಾ ನಿಜ... ನೀನು ಹ್ಯಾಪಿಯಾಗಿರಲಿ ಅಂತ ನಿಮ್ಮ ಡ್ಯಾಡೀನ ಮದುವೆಯಾಗಿದಾಳೆ..."

"ಹರೀಶ್... ನಾನು ಇಲ್ಲಿ ಒಂದು ಗಳಿಗೆ ಇರುಲ್ಲ. ನನ್ನನ್ನ ನಿಮ್ಮ ಮನೆಗೆ ಕರೆದುಕೊಂಡು ಹೋಗಿ" ಅವಳು ಮುನಿಸಿಕೊಂಡು ಮುಂಬಾಗಿಲಿನಲ್ಲಿ ನಿಂತಳು. ಇಂದಿರಾ ಅವಳನ್ನು ಎಳೆದುಕೊಂಡು ಬಂದು ಒಳಗೆ ಸೋಫಾದ ಮೇಲೆ ಕೂರಿಸಿದಳು.

"ನಿಂಗೆ ತಾಯಿಯಿಲ್ಲ ಅಂತ ನಿನ್ನ ಡ್ಯಾಡಿ ನಿನ್ನನ್ನ ತುಂಬಾ ಮುದ್ದು ಮಾಡಿ ಕೆಡಿಸಿ ಬಿಟ್ಟಿದಾರೆ... ನಾನು ನಿನ್ನ ಮಲತಾಯಿ. ಮಲತಾಯಿಯ ವರ್ತನೆ ಹೇಗಿರುತ್ತೆ ಅಂತ ನಿಂಗೆ ಗೊತ್ತಿಲ್ಲ. ನಡೀ... ನಿನಗೆ ಬುದ್ಧಿ ಕಲಿಸ್ತೀನಿ." ಅವಳನ್ನು ರೂಮಿಗೆ ಕರೆದುಕೊಂಡುಹೋಗಿ ಬಾಗಿಲನ್ನು ಭದ್ರ ಪಡಿಸಿದಳು. ಹರೀಶ ಗಲಿಬಿಲಿಗೊಂಡಿದ್ದ. "ಇದೆಂಥಾ ಸನ್ನಿವೇಶಕ್ಕೆ ಸಿಕ್ಕಿಸಿದೆಯಪ್ಪಾ ದೇವ್ರೇ..." ಎಂದು ರಮೇಶ ಚಿಂತಾಕ್ರಾಂತನಾಗಿದ್ದ.

ಹತ್ತು ನಿಮಿಷದ ನಂತರ ರೂಮಿನ ಬಾಗಿಲು ತೆರೆಯಿತು. ಇಬ್ಬರೂ ಎದ್ದು ನಿಂತರು. ಗಾಬರಿ ಕಣ್ಣುಗಳಲ್ಲಿ ತುಳುಕುತ್ತಿತ್ತು. ಸ್ನೇಹಿತೆಯರಿಬ್ಬರೂ

ಕೈಕೈ ಹಿಡಿದು ಕಿಲಕಿಲನೆ ನಗುತ್ತಾ ಹೊರಬಂದರು. ಇಬ್ಬರೂ ಬೆಪ್ಪಾದರು.

"ಡ್ಯಾಡೀ ಹೇಗಿತ್ತು ನನ್ನ ಆ್ಯಕ್ಟಿಂಗ್...?" ಪುಣ್ಯಾ ತಂದೆಯ ಪಕ್ಕದಲ್ಲಿ ಕುಳಿತು ಪ್ರಶ್ನಿಸಿದಳು.

"ಇಬ್ಬರೂ ಚೆನ್ನಾಗಿ ಆ್ಯಕ್ಟ್ ಮಾಡಿದಿರಿ. ಫೂಲ್ ಆದವರು ನಾವಿಬ್ಬರು... ಅಲ್ಲ. ಇಷ್ಟು ಹೆದರಿಸೋದಾ?... ನನಗೆ ಏಜ್ ಆಗಿದೆ. ನನ್ನ ಹಾರ್ಟ್ ವೀಕ್ ಆಗಿರಬಹುದು..."

"ಹಾಗೇನಿಲ್ಲ, ಒಂದು ವಾರದಲ್ಲಿ ನೀವು ಬಹಳ ಆಕ್ಟಿವ್ ಆಗಿದೀರಿ. ಸ್ಮಾರ್ಟ್ ಆಗಿದೀರಿ... ಎಲ್ಲಾ ಕ್ರೆಡಿಟ್ ಇಂದೂಗೆ... ಅಲ್ಲ ನನ್ನ ಆಂಟಿಗೆ..."

"ಆಂಟಿ ಅಂತೇನೂ ಬೇಡ. ಇಂದಿರಾ ಅಂತ ಕರಿ ಪರವಾಗಿಲ್ಲ. ಮೊದಲು ನಾನು ನಿನ್ನ ಫ್ರೆಂಡ್... ಆಮೇಲೆ ಚಿಕ್ಕಮ್ಮ... ರೈಟ್?"

"ಎಸ್... ಬನ್ನೀ... ಎಲ್ರೂ ನಮ್ಮ ಮನೆಗೆ ಹೋಗೋಣ..."

"ಯಾವುದೇ ನಿನ್ನ ಮನೆ... ಇದೇನಿದು?"

"ಇದೇನಿದ್ರೂ ನಿನ್ನ ಮನೆ. ಹರೀಶನ್ನ ಮದುವೆಯಾದ ಮೇಲೆ ಅದು ನಮ್ಮ ಮನೆ... ಎಲ್ರೂ ಅಲ್ಲಿಗೇ ಹೋಗೋಣ. ನಾನು ಈಗಲೇ ಅತ್ತೆಗೆ ಫೋನು ಮಾಡ್ತೀನಿ"

"ಹೌದು... ಒಂದು ವಾರದಿಂದ ನಾವು ಅಲ್ಲಿಗೆ ಹೋಗಿಯೇ ಇಲ್ಲ. ಅವರು ಏನಂದುಕೊಂಡ್ರೋ ಏನೋ?"

"ಏನಂದುಕೋಳ್ತಾರೆ, ಹೊಸದಾಗಿ ಮದುವೆಯಾದವರು, ಹಾಯಾಗಿದಾರೆ ಅಂತ ಅಂದ್ಕೊಳ್ತಾರೆ..." ಇಂದಿರಾ ನಾಚಿಕೆಯಿಂದ ಕೆಂಪಾದಳು. "ಡ್ಯಾಡೀ... ನನ್ನ ಅತ್ತೆ ಮಾವ, ನಿಮಗೂ ಅತ್ತೆ ಮಾವ ಎಂಥಾ ತಮಾಷೆ ಅಲ್ವಾ...?" ಹರೀಶ ನಕ್ಕ.

"ನನ್ನ ತಂದೆ ತಾಯಿ ಹಳೇ ಸಂಪ್ರದಾಯದವರು. ನಮ್ಮಿಬ್ಬರ ಮದುವೆಗೆ ಅವರ ವಿರೋಧವಿತ್ತು. ಅದನ್ನು ಹೋಗಲಾಡಿಸಿದವಳು ಇಂದಿರಾ. ಈಗಲೂ ಸಾಕಷ್ಟು ಚರ್ಚೆಗಳ ನಂತರ ಒಪ್ಪಿಗೆ ಕೊಟ್ಟಿದಾರೆ. ಅವರಿಗೆ ವಿನಾಕಾರಣ ಭಯ. ಅವರ ಭಯಕ್ಕೆ ಕಾರಣ ಇಲ್ಲ ಅಂತ ನಾವು ಸಾಬೀತು ಪಡಿಸಬೇಕು"

"ನೀವೇನೋ ನನ್ನ ಮಗಳನ್ನು ಅಮೆರಿಕಾಕ್ಕೆ ಕರೆಸಿಕೊಳ್ತೀರಿ... ನಾವು ತಾನೇ ಇಲ್ಲಿ ಇರೋರು..."

"ನೀವುಗಳೂ ಅಮೆರಿಕಾಕ್ಕೆ ಬಂದು ಬಿಡಿ..."

"ಅದು ಅಷ್ಟು ಸುಲಭಾನಾ ಹರೀಶ್... ಇಲ್ಲಿ ನನ್ನದೇ ಸ್ವಂತ ಬಿಸಿನೆಸ್ ಇದೆ. ಇನ್ನು ಮುಂದೆ ಇಂದಿರಾ ಕೂಡಾ ಪಾರ್ಟನರ್... ನೀವೇ ಮನಸ್ಸು ಮಾಡಿದರೆ ಇಲ್ಲಿಗೆ ವಾಪಸ್ಸು ಬಂದು ಬಿಡಬಹುದು, ಯೋಚಿಸಿ ನೋಡಿ..."

"ಇಲ್ಲ ಸಾರ್... ಸಧ್ಯಕ್ಕೆ ಆ ಯೋಚನೆ ಇಲ್ಲ"

"ಅದೇನು ಸಾರ್ ಅಂತ, ಲಕ್ಷಣವಾಗಿ ಮಾವ ಅಂತ ಕರೀಬಾರ್ದ್ದಾ...?"

"ಪರವಾಗಿಲ್ಲ ಬಿಡು ಇಂದೂ... ಹೇಗೆ ಕರೆದರೇನು? ಸಂಬಂಧಗಳು ಮುಖ್ಯ. ಇಲ್ಲಿ ಅದೂ ವಿಚಿತ್ರವೇ...?"

"ಸಂಬಂಧಗಳು ವಿಚಿತ್ರವಾದರೂ ಒಂಥರಾ ಮಜವಾಗಿದೆ ಅಲ್ವಾ?" ಪುಣ್ಯ ಇಂದಿರಾಳನ್ನು ತಬ್ಬಿಕೊಂಡು ಕಿವಿಯಲಿ ಏನನ್ನೋ ಪಿಸುಗುಟ್ಟಿದಳು. ಇಂದಿರಾಳ ಮುಖ ಲಜ್ಜೆಯಿಂದ ಕೆಂಪಾಗಿತ್ತು. ರಮೇಶನಿಗೆ ಅರ್ಥವಾಗಿತ್ತು.

"ಹರೀಶ್, ನನ್ನ ಮಗಳು ಒಂದು ವಾರದಲ್ಲಿ ಬಹಳ ತುಂಟಿಯಾಗಿ ಬಿಟ್ಟಿದ್ದಾಳೆ... ನಿಮ್ಮ ಪ್ರೀತಿ ಹೆಚ್ಚಾಗಿದೆ..."

"ಹೋಗಿ ಡ್ಯಾಡ್... ಹಾಗೇನಿಲ್ಲ" ಮಗಳು ಮುದ್ದುಗರೆದಳು. ಎಲ್ಲರೂ ಹರೀಶನ ಮನೆಗೆ ಹೊರಟರು.

*****

ವಾಪಸ್ಸು ಬರುವಾಗ, ರಮೇಶ ಹೆಂಡತಿಯನ್ನು ಮರೆಯದೇ ಕೇಳಿದ. ಅದೇನದು, ಪುಣ್ಯ ನಿನ್ನ ಕಿವಿಯಲ್ಲಿ ಉಸಿರಿದ್ದು?"

"ಅದಾ...? ಏನಿಲ್ಲ..." ನಾಚಿದಳು.

"ನಾನೇ ಹೇಳ್ಲಾ...? ಅವಳಿಗೊಬ್ಬ ಪುಟ್ಟ ತಮ್ಮ ಬೇಕು ಅಲ್ವಾ...?"

"ಹುಂ... ನೀನೇ ನಮಗೊಬ್ಬ ಮೊಮ್ಮಗನ್ನ ಆದಷ್ಟು ಬೇಗ ಕೊಡು ಅಂತ ತಿರುಗಿಸಿ ಹೇಳಿದೆ..."

"ಒಳ್ಳೇ ಕೆಲಸ ಮಾಡಿದೆ. ನಮಗೀಗ ಮೊಮ್ಮಗನೇ ಸರಿಯಾದ ಆಯ್ಕೆ. ಏನಂತೀಯಾ? ಬಾಣಂತನಕ್ಕೆ ನಿನ್ನನ್ನ ಅಮೆರಿಕಾಕ್ಕೆ ಕಳಿಸ್ತೀನಿ..."

"ನೋಡೋಣ..."

"ನಮಗೆ ಮಕ್ಕಳಾಗದಿದ್ರೆ ಬೇಸರವೇನಿಲ್ಲ ತಾನೇ... ನನ್ನಿಂದ ನಿನಗೆ ನಿರಾಸೆಯಾಗಬಾರದು"

"ಇಲ್ಲ, ರಮೇಶ್..." ಅವಳು ಅವನಿಗೆ ಒರಗಿದಳು. ಅವನ ಎಡತೋಳು ಅವಳನ್ನು ಬಳಸಿತು. ಅವನಲ್ಲೂ ಆಸೆಯ ಚಿಗುರು ಒಡೆದಿತ್ತು. ತನಗೀಗ ಐವತ್ತು ವರ್ಷಗಳು ದಾಟಿವೆ. ಆದಷ್ಟು ಬೇಗ ಡಾಕ್ಟರನ್ನು ಕನ್ಸಲ್ಟ್ ಮಾಡಬೇಕು. ಇಂದಿರಾಳಿಗೆ ಒಂದು ಮಗುವನ್ನು ಕಾಣಿಕೆಯನ್ನಾಗಿ ಕೊಡಬೇಕು. ನನ್ನನ್ನು ಮನಸಾರೆ ಮೆಚ್ಚಿ ಮದುವೆಯಾಗಿದ್ದಾಳೆ. ಅವಳಿಗೆ ನಿರಾಸೆಯನ್ನುಂಟು ಮಾಡಬಾರದು..."

"ಏನು ಯೋಚನೆ ಮಾಡ್ತಿದೀರಾ ರಮೇಶ್..."

"ಮೊದಲು ನಮಗೆ ಒಂದು ಮಗು ಆಗಲಿ... ಆಮೇಲೆ ನಿಧಾನವಾಗಿ

ಮೊಮ್ಮಗು ಹುಟ್ಟಲಿ ಅಂತ ಮನಸ್ಸು ಬಯಸ್ತಿದೆ, ಆಸೆ ಪಡುತ್ತಿದೆ. ನಾವು ನಾಳೇನೇ ಡಾಕ್ಟರ ಬಳಿಗೆ ಹೋಗೋಣ. ಈ ಮುಂದುವರಿದ ಕಾಲದಲ್ಲಿ ಡಾಕ್ಟರರ ಬಳಿ ಅನೇಕ ಸಲಹೆಗಳಿರುತ್ತವೆ. ಅದರ ಉಪಯೋಗ ಪಡೆಯೋಣ, ಏನಂತೀಯಾ..."

"ನಿಮ್ಮಿಷ್ಟ..."

"ನನ್ನಿಷ್ಟವೇ ನಿನ್ನಿಷ್ಟವೂ ಆಗಿರಬೇಕು..." ಎನ್ನುತ್ತಾ ಅವಳ ಎಡಭುಜವನ್ನು ಒತ್ತಿ ಪ್ರೀತಿಯನ್ನು ವ್ಯಕ್ತಪಡಿಸಿದ.

ಅವಳ ಹೃದಯ ಹೊಸಗೀತೆಯನ್ನು ಹಾಡಿತು.

* * * * *

* * * * *

* * *

* * *





**'ಸಂಪ್ರದಾನ'** ಈ ನೀಳ್ಗತೆಗಳ ಸಂಕಲನದಲ್ಲಿ ಒಟ್ಟು ನಾಲ್ಕು ಕತೆಗಳಿವೆ. ವಿಭಿನ್ನ ವಸ್ತುಗಳನ್ನು ಆಯ್ದುಕೊಂಡು, ಕಲ್ಪನೆಯಲ್ಲಿ ಕರಗಿಸಿ, ಕೃತಿಯನ್ನಾಗಿ ರಚಿತಗೊಂಡ ಕತೆಗಳು ಇವು. ಕೌಟುಂಬಿಕ ಪಾತ್ರಗಳು, ಸನ್ನಿವೇಶಗಳು ಕತೆಗಳಿಗೆ ರೂಪವನ್ನು ಕೊಟ್ಟಿವೆ. – **'ಡೈಮಂಡ್ ಸಕ್ಕರೆ'** ಯ ಆಭರಣಗಳು, **'ಸಂಪ್ರದಾನದ'** ದಾನಗಳು, **'ಹೃದಯ ಹಾಡಿದ ಹೊಸಗೀತೆ'** ಯ ಸಂಗಾತಿಗಳು, **'ಆದದ್ದೆಲ್ಲಾ ಒಳ್ಳೆಯದಕ್ಕೇ'** ಕತೆಯ ನೆನಪುಗಳು, ಮುಖ್ಯ ಅಂಶಗಳು. ಈ ನಿಟ್ಟಿನಲ್ಲಿ ಬರೆದ ಈ ನೀಳ್ಗತೆಗಳು ಓದುಗರನ್ನು ರಂಜಿಸುತ್ತವೆ ಎಂದು ನಂಬುತ್ತೇನೆ.

ಈ ನೀಳ್ಗತೆಗಳ ಸಂಕಲನವನ್ನು ನನ್ನ ಸೋದರಿಯರಿಗೆ ಅರ್ಪಣೆ ಮಾಡುತ್ತಿದ್ದೇನೆ. ವಂದನೆಗಳು.

– **ಪದ್ಮಾ ಶ್ರೀಧರ್**